ತಸ್ಯ ಭಕ್ಷಣಮಾತ್ರೇಣ ಕಾರಣೇನ ತು ಸಾಂಪ್ರತಂ ।
ಚತುರ್ಭುಜತ್ವಂ ಸಂಪ್ರಾಪ್ತೋ ವಿಸ್ಮಯೇನ ಸಮನ್ವಿತಃ ॥ ೨೭ ॥

ತುಚ್ಛ್ರುತ್ವಾ ತು ವಚಸ್ತಸ್ಯ ಸದ್ಯಃ ಸಂಪ್ರಾಪ್ತವಿಸ್ಮಯೈಃ ।
ಅಸ್ಮಾಭಿರಪ್ಯಸೌ ದೃಷ್ಟೋ ದೇವಃ ಪರಮದುರ್ಲಭಃ ॥ ೨೮ ॥

ಅನ್ನಾದಿಕಂ ತತ್ರ ಭುಕ್ತಂ ಸರ್ವಸ್ವಾದಸಮನ್ವಿತಂ ।
ವಯಂ ಚತುರ್ಭುಜಾ ಜಾತಾ ದೇವಸ್ಯ ಕೃಪಯಾ ಪುನಃ ॥ ೨೯ ॥

ಗತ್ವಾ ತ್ವಮಪಿ ದೇವಸ್ಯ ದರ್ಶನಂ ಕುರು ಸತ್ತಮ ।
ಭುಕ್ತ್ವಾ ತತ್ರಾನ್ನಸಿಕ್ಥಂ ತು ಭವ ವಿಪ್ರ ಚತುರ್ಭುಜಃ ॥ ೩೦ ॥

ತ್ವಯಾ ಪೃಷ್ಟಂ ಯದಾಚಕ್ಷ್ವ ತದುಕ್ತಂ ಬಾಡವರ್ಷಭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಬ್ರಾಹ್ಮಣೋಪದೇಶಕಥನಂ
ನಾಮ ಅಷ್ಟಾದಶೋಽಧ್ಯಾಯಃ

---

೨೭. ಅದನ್ನು ತಿಂದಕೂಡಲೇ ನಾಲ್ಕು ತೋಳುಗಳಾದುವು. ಆಶ್ಚರ್ಯ ಪಟ್ಟನು.

೨೮. ಅದನ್ನು ಕೇಳಿ ಆಶ್ಚರ್ಯಪಟ್ಟು ನಾವೂ ಹೋಗಿ ಆ ಸ್ವಾಮಿಯನ್ನು ದರ್ಶಿಸಿದೆವು.

೨೯. ರುಚಿರುಚಿಯಾದ ಆ ನಿವೇದನದ ಅನ್ನವನ್ನು ಊಟಮಾಡಿದೆವು. ಆ ದೇವರ ಕೃಪೆಯಿಂದ ನಾವೂ ಕೂಡ ಚತುರ್ಭುಜರಾದೆವು.

೩೦. ಎಲೈ! ಬ್ರಾಹ್ಮಣನೇ, ನೀನೂ ಅಲ್ಲಿಗೆ ಹೋಗಿ ದೇವರ ದರ್ಶನವನ್ನು ಮಾಡು. ನೈವೇದ್ಯದ ಶೇಷವನ್ನು ತಿಂದು ಚತುರ್ಭುಜನಾಗು. ಎಲೈ! ಬ್ರಾಹ್ಮಣನೇ, ಹೀಗೆ ನೀನು ಕೇಳಿದುದನ್ನು ಹೇಳಿದ್ದೇನೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದಪಕ್ಷ್ಕಿ,
ರಾಮಾಶ್ವಮೇಧದಲ್ಲಿ ಬ್ರಾಹ್ಮಣೋಪದೇಶಕಥನವೆಂಬ
ಹದಿನೆಟಂನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕೋನವಿಂಶೋಽಧ್ಯಾಯಃ

॥ ಬ್ರಾಹ್ಮಣ ಉವಾಚ ॥

ಇತಿ ಶ್ರುತ್ವಾ ತು ತದ್ವಾಕ್ಯಂ ಭಿಲ್ಲಾನಾಮುಹಮುದ್ಭುತಂ ।
ಅತ್ಯಾಶ್ಚರ್ಯಮಿದಂ ಮತ್ವಾ ಪ್ರಹೃಷ್ಟೋಽಭವಮಿತ್ಯುತ ॥ ೧ ॥

ಗಂಗಾಸಾಗರಸಂಯೋಗೇ ಸ್ನಾತ್ವಾ ಪುಣ್ಯಕಳೇಬರಃ ।
ಶೃಂಗಮಾರುರುಹೇ ತತ್ರ ಮಣಿಮಾಣಿಕ್ಯಚಿತ್ರಿತಂ ॥ ೨ ॥

ತತ್ರಾಪಶ್ಯಂ ಮಹಾರಾಜ ದೇವಂ ದೇವಾದಿವಂದಿತಂ ।
ನಮಸ್ಕೃತ್ವಾ ಕೃತಾರ್ಥೋಽಹಂ ಜಾತೋಽನ್ನಪ್ರಾಶನೇನ ಚ ॥ ೩ ॥

---

## ಹತ್ತೊಂಭತ್ತನೆಯ ಅಧ್ಯಾಯವು

೧. ಬ್ರಾಹ್ಮಣನು ಹೇಳಿದನು:—ಈರೀತಿ ಭಿಲ್ಲರ ಆಶ್ಚರ್ಯವಾಕ್ಯವನ್ನು ಕೇಳಿ ಇದು ಆಶ್ಚರ್ಯವೆಂದು ತಿಳಿದು ಸಂತೋಷಗೊಂಡನು.

೨. ಗಂಗಾಸಾಗರ ಸಂಗಮದಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ ಆ ಮಾಣಿಕ್ಯಾದಿಗಳಿಂದ ಚಿತ್ರಿಸಲ್ಪಟ್ಟ ಕೋಡುಗಲ್ಲನ್ನು ಹತ್ತಿದೆನು.

೩. ಅಲ್ಲಿ ದೇವಾದಿದೇವನನ್ನು ದರ್ಶಿಸಿ ನಮಸ್ಕರಿಸಿ ನೈವೇದ್ಯಾನ್ನವನ್ನು ತಿಂದು ಕೃತಾರ್ಥನಾದೆನು.

ಚತುರ್ಭುಜತ್ವಂ ಸಂಪ್ರಾಪ್ತಃ ಶಂಖಚಕ್ರಾದಿಚಿಹ್ನಿತಂ ।
ಪುರುಷೋತ್ತಮದರ್ಶನೇನ ನ ಪುನರ್ಗರ್ಭ ಮಾವಿಶಂ ॥ ೪ ॥

ರಾಜಂಸ್ತ್ವಮೇವ ತತ್ರಾಶು ಗಚ್ಛ ನೀಲಾಭಿದಂ ಗಿರಿಂ ।
ಕೃತಾರ್ಥಂ ಕುರು ಚಾತ್ಮಾನಂ ಗರ್ಭದುಃಖವಿವರ್ಜಿತಂ ॥ ೫ ॥

ಇತ್ಯಾಕರ್ಣ್ಯ ವಚಸ್ತಸ್ಯ ಜಾಡಬಾಗ್ರ್ಯಸ್ಯ ಧೀಮತಃ ।
ಪಪ್ರಚ್ಛ ಹೃಷ್ಟಗಾತ್ರಸ್ತು ತೀರ್ಥಯಾತ್ರಾವಿಧಿಂ ಮುನಿಂ ॥ ೬ ॥

॥ ರಾಜೋವಾಚ ॥

ಸಾಧು ವಿಪ್ರಾಗ್ರ್ಯ ಹೇ ಸಾಧೋ ತ್ವಯಾ ಪ್ರೋಕ್ತಂ ಮಮಾನಘ ।
ಪುರುಷೋತ್ತಮಮಹಾತ್ಮ್ಯಂ ಶೃಣ್ವತಾಂ ಪಾಪನಾಶನಂ ॥ ೭ ॥

ಬ್ರೂಹಿ ತತ್ತೀರ್ಥಯಾತ್ರಾಯಾಂ ವಿಧಿಂ ಶ್ರುತಿಸಮನ್ವಿತಂ ।
ವಿಧಿನಾ ಕೇನ ಸಂಪೂರ್ಣಫಲಪ್ರಾಪ್ತಿರ್ನೃಣಾಂ ಭವೇತ್ ॥ ೮ ॥

---

೪. ಶಂಖಚಕ್ರಗಳಿಂದ ಕೂಡಿದ ಚತುರ್ಭುಜವನ್ನು ಹೊಂದಿದೆನು. ಆ ಸ್ವಾಮಿಯ ದರ್ಶನದಿಂದ ಪುನಃ ಜನ್ಮಗಳನ್ನು ಹೊಂದಲಿಲ್ಲ.

೫. ಎಲೈ! ರಾಜನೇ, ಆ ನೀಲಪರ್ವತಕ್ಕೆ ನೀನು ಹೋಗಿ ಆತ್ಮವನ್ನು ಕೃತಾರ್ಥವನ್ನಾಗಿ ಮಾಡಿಕೊಂಡು ದುಃಖದಿಂದ ಪಾರಾಗು.

೬. ಬ್ರಾಹ್ಮಣಶ್ರೇಷ್ಠನ ಈ ಬಗೆಯ ಮಾತುಗಳನ್ನು ಕೇಳಿ ಸಂತೋಷಪಟ್ಟು ತೀರ್ಥಯಾತ್ರಾವಿಧಿಯನ್ನು ಕೇಳಿದನು.

೭. ರಾಜನು ಹೇಳಿದನು:—ಚೆನ್ನಾಗಿದೆ; ಎಲೈ! ಬ್ರಾಹ್ಮಣಶ್ರೇಷ್ಠನೇ, ಬಹು ಚೆನ್ನಾಗಿದೆ. ನೀನು ಹೇಳಿದ ಆ ಪುರುಷೋತ್ತಮನ ಮಹಿಮೆಯನ್ನು ಕೇಳುವವರ ಪಾಪವನ್ನು ನಾಶಮಾಡುತ್ತದೆ.

೮. ವೇದೋಕ್ತವಾದ ರೀತಿಯಲ್ಲಿ ಆ ತೀರ್ಥಯಾತ್ರೆಯ ಕ್ರಮವನ್ನು ಹೇಳು. ಯಾವ ಪ್ರಕಾರ ಮಾಡಿದರೆ ಮನುಷ್ಯನಿಗೆ ಸಂಪೂರ್ಣ ಫಲ ಬರುತ್ತದೆ?

॥ ಬ್ರಾಹ್ಮಣ ಉವಾಚ ॥

ಶೃಣು ರಾಜನ್ಪ್ರವಕ್ಷ್ಯಾಮಿ ತೀರ್ಥಯಾತ್ರಾವಿಧಿಂ ಶುಭಂ ।
ಯೇನ ಸಂಪ್ರಾಪ್ಯತೇ ದೇವಃ ಸುರಾಸುರನಮಸ್ಕೃತಃ ॥ ೯ ॥

ವಲೀಪಲಿತದೇಹೋ ವಾ ಯೌವನೇನಾನ್ವಿತೋಽಪಿ ವಾ ।
ಜ್ಞಾತ್ವಾ ಮೃತ್ಯುಮನಿಸ್ತೀರ್ಯಂ ಹರಿಂ ಶರಣಮಾವ್ರಜೇತ್ ॥ ೧೦ ॥

ತತ್ಕೀರ್ತನೇ ತಚ್ಛ್ರವಣೇ ವಂದನೇ ತಸ್ಯ ಪೂಜನೇ ।
ಮತಿರೇವ ಪ್ರಕರ್ತವ್ಯಾ ನಾನ್ಯತ್ರ ವನಿತಾದಿಷು ॥ ೧೧ ॥

ಸರ್ವಂ ನಶ್ವರಮಾಲೋಕ್ಯ ಕ್ಷಣಸ್ಥಾಯಿ ಸುದುಃಖದಂ ।
ಜನ್ಮದುಃಖಜರಾತೀತಂ ಭಕ್ತಿವಲ್ಲಭಮಚ್ಯುತಂ ॥ ೧೨ ॥

ಕ್ರೋಧಾತ್ಕಾಮಾದ್ಭಯಾದ್ದ್ವೇಷಾಲ್ಲೋಭಾದ್ದಂಭಾನ್ನರಃ ಪುನಃ ।
ಯಥಾಕಥಂಚಿದ್ವಿಭಜನ್ನ ಸ ದುಃಖಂ ಸಮುಶ್ನುತೇ ॥ ೧೩ ॥

---

೯. ಬ್ರಾಹ್ಮಣನು ಹೇಳಿದನು:—ಎಲೈ! ರಾಜನೇ, ಆ ದೇವಾದಿದೇವನು ಸಿಕ್ಕುವ ರೀತಿಯಲ್ಲಿ ವಿಧಿಯನ್ನು ಹೇಳುತ್ತೇನೆ ಕೇಳು.

೧೦. ಮುದುಕನಾಗಲಿ ಹುಡುಗನೇ ಆಗಲಿ ಮೃತ್ಯುವು ಮನುಷ್ಯನಿಗೆ ದಾಟಲು ಅಸಾಧ್ಯವಾದುದೆಂದು ತಿಳಿದು ಹರಿಯನ್ನು ರಕ್ಷಕನನ್ನಾಗಿ ಹೊಂದಬೇಕು.

೧೧. ಆ ಸ್ವಾಮಿಯ ಹೆಸರನ್ನು ಹೇಳುವುದು, ಅದನ್ನು ಕೇಳುವುದು, ಅವನ ವಂದನೆ, ಪೂಜೆ ಇವುಗಳನ್ನು ಮಾಡಬೇಕೇ ಹೊರತು ಹೆಣ್ಣು ಹೊನ್ನುಗಳಲ್ಲಿ ಮನಸ್ಸಿಡಬಾರದು.

೧೨. ಎಲ್ಲವೂ ನಶ್ವರವೆಂಬುದನ್ನೂ, ಕ್ಷಣಕಾಲವಿದ್ದರೂ ದುಃಖವನ್ನುಂಟು ಮಾಡುತ್ತವೆಂಬುದನ್ನೂ ತಿಳಿದು ಜನ್ಮ, ದುಃಖ, ಜರೆಗಳಿಲ್ಲದ ಭಕ್ತಿಯಿಂದ ಕೂಡಿದ ಅಚ್ಯುತನನ್ನು ಭಜಿಸಬೇಕು.

೧೩. ಕಾಮ, ಕ್ರೋಧ, ಲೋಭ, ಮೋಹ, ದಂಭ ಇವುಗಳನ್ನು ಕಷ್ಟಪಟ್ಟು ಬಿಟ್ಟು ಅವನನ್ನು ಭಜಿಸಿದರೆ ಅವನಿಗೆ ದುಃಖವಿಲ್ಲ.

**ಸ ಹರಿರ್ಜ್ಞಾಯತೇ ಸಾಧುಸಂಗಮಾತ್ಪಾಪವರ್ಜಿತಾತ್ ।**
**ಯೇಷಾಂ ಕೃಪಾತಃ ಪುರುಷಾ ಭವಂತ್ಯಸುಖವರ್ಜಿತಾಃ ॥ ೧೪ ॥**

**ತೇ ಸಾಧವಶ್ಶಾಂತರಾಗಾಃ ಕಾಮಲೋಭವಿವರ್ಜಿತಾಃ ।**
**ಬ್ರುವಂತಿ ಯನ್ಮಹಾರಾಜ ತತ್ಸಂಸಾರನಿವರ್ತಕಂ ॥ ೧೫ ॥**

**ತೀರ್ಥೇಷು ಲಭ್ಯತೇ ಸಾಧೂ ರಾಮಚಂದ್ರಪರಾಯಣಃ ।**
**ಯದ್ದರ್ಶನಂ ನೃಣಾಂ ಪಾಪರಾಶಿ ದಾಹಾ ಶುಶುಕ್ಷಣಿಃ ॥ ೧೬ ॥**

**ತಸ್ಮಾತ್ತೀರ್ಥೇಷು ಗಂತವ್ಯಂ ನರೈಸ್ಸಂಸಾರಭೀರುಭಿಃ ।**
**ಪುಣ್ಯೋದಕೇಷು ಸತತಂ ಸಾಧುಶ್ರೇಣಿವಿರಾಜಿಷು ॥ ೧೭ ॥**

**ತಾನಿ ತೀರ್ಥಾನಿ ವಿಧಿನಾ ದೃಷ್ಟಾನಿ ಪ್ರಹರಂತ್ಯಘಂ ।**
**ತಂ ವಿಧಿಂ ನೃಪಶಾರ್ದೂಲ ಕುರುಷ್ವ ಶ್ರುತಿಗೋಚರಂ ॥ ೧೮ ॥**

**ವಿರಾಗಂ ಜನಯೇತ್ಪೂರ್ವಂ ಕಳತ್ರಾದಿಕುಟುಂಬಕೇ ।**
**ಅಸತ್ಯಭೂತಂ ತದ್ಜ್ಞಾತ್ವಾ ಹರಿಂ ತು ಮನಸಾ ಸ್ಮರೇತ್ ॥ ೧೯ ॥**

---

೧೪. ಪಾಪರಹಿತವಾದ ಸಾಧುಸಹವಾಸದಿಂದ ಹರಿಯು ಪ್ರಸನ್ನನಾಗುತ್ತಾನೆ. ಆ ಸಾಧುಗಳ ಕೃಪೆಯಿಂದಲೇ ಪುರುಷರು ದುಃಖದಿಂದ ಮುಕ್ತರಾಗುತ್ತಾರೆ.

೧೫. ಕಾಮಲೋಭಗಳಿಗೊಳಗಾಗದ ಆ ಸಾಧುಗಳು ಹೇಳುವುದೆಲ್ಲವೂ ಸಂಸಾರನಿವರ್ತಕವಾದ ಮಾರ್ಗಗಳು.

೧೬. ತೀರ್ಥಗಳಲ್ಲಿ ರಾಮಚಂದ್ರನಲ್ಲಿ ಭಕ್ತಿಯುಳ್ಳ ಸಾಧುಗಳು ಸಿಕ್ಕುತ್ತಾರೆ. ಅವರ ದರ್ಶನವು ಪಾಪರಾಶಿಗಳಿಗೆ ಬೆಂಕಿಯ ರೂಪವಾದುದು.

೧೭. ಸಂಸಾರಭೀರುಗಳಾದವರು ತೀರ್ಥಗಳಿಗೆ ಹೋಗಬೇಕು. ಆ ಪುಣ್ಯೋದಕಗಳಲ್ಲಿ ಸಾಧುಗಳಿರುವರು. ಆದ್ದರಿಂದಲೇ ಅಲ್ಲಿಗೆ ಹೋಗಬೇಕು.

೧೮. ಆ ತೀರ್ಥಗಳು ಶಾಸ್ತ್ರೋಕ್ತವಾಗಿ ಸೇವಿಸಲ್ಪಟ್ಟರೆ ಪಾಪವನ್ನು ನಾಶಮಾಡುತ್ತವೆ.

೧೯. ಮೊದಲು ಹೆಂಡತಿಮಕ್ಕಳಲ್ಲಿ ವೈರಾಗ್ಯವುಂಟಾಗಬೇಕು. ಅವನ್ನು ಅಸತ್ಯವಾದುವೆಂದು ತಿಳಿಯಬೇಕು. ಹರಿಯನ್ನು ಮನಸ್ಸಿನಿಂದ ಧ್ಯಾನಿಸುತ್ತಿರಬೇಕು.

ಕ್ರೋಶಮಾತ್ರಂ ತತೋ ಗತ್ವಾ ರಾಮ ರಾಮೇತಿ ಚ ಬ್ರುವನ್ ।
ತತ್ರ ತೀರ್ಥಾದಿಷು ಸ್ನಾತ್ವಾ ಕ್ಷೌರಂ ಕುರ್ಯಾದ್ವಿಧಾನವಿತ್ ॥ ೨೦ ॥

ಮನುಷ್ಯಾಣಾಂ ಚ ಪಾಪಾನಿ ತೀರ್ಥಾನಿ ಪ್ರತಿಗಚ್ಛತಾಂ ।
ಕೇಶಮಾಶ್ರಿತ್ಯ ತಿಷ್ಠಂತಿ ತಸ್ಮಾತ್ತದ್ವಪನಂ ಚರೇತ್ ॥ ೨೧ ॥

ತತೋ ದಂಡಂ ತು ನಿರ್ಗ್ರಂಥಿಂ ಕಮಂಡಲುಮಥಾಜಿನಂ ।
ಬಿಭೃಯಾಲ್ಲೋಭನಿರ್ಮುಕ್ತಸ್ತೀರ್ಥವೇಷಧರೋ ನರಃ ॥ ೨೨ ॥

ವಿಧಿನಾ ಗಚ್ಛತಾಂ ನೃಣಾಂ ಫಲಾವಾಪ್ತಿರ್ವಿಶೇಷತಃ ।
ತಸ್ಮಾತ್ಸರ್ವಪ್ರಯತ್ನೇನ ತೀರ್ಥಯಾತ್ರಾವಿಧಿಂ ಚರೇತ್ ॥ ೨೩ ॥

ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಹಿತಂ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೨೪ ॥

ಹರೇ ಕೃಷ್ಣ ಹರೇ ಕೃಷ್ಣ ಭಕ್ತವತ್ಸಲ ಗೋಪತೇ ।
ಶರಣ್ಯ ಭಗವನ್ವಿಷ್ಣೋ ಮಾಂ ಪಾಹಿ ಬಹುಸಂಸೃತೇಃ ॥ ೨೫ ॥

---

೨೦. ಮೂರು ಹರಿದಾರಿಗಳಷ್ಟು ಹೋಗಿ ರಾಮರಾಮ ಎನ್ನುತ್ತಾ ಆ ತೀರ್ಥದಲ್ಲಿ ಸ್ನಾನಮಾಡಿ ವಿಧಿವತ್ತಾಗಿ ಕ್ಷೌರಮಾಡಿಸಿಕೊಳ್ಳಬೇಕು.

೨೧. ತೀರ್ಥಯಾತ್ರೆಗೆ ಹೋಗುವವರ ತಲೆಯ ಕೂದಲನ್ನಾಶ್ರಯಿಸಿಕೊಂಡು ಪಾಪಗಳಿರುತ್ತವೆ. ಆದ್ದರಿಂದ ಅವನ್ನು ಬೋಳಿಸಬೇಕು.

೨೨. ಆಮೇಲೆ ಗಿಣ್ಣಿಲ್ಲದ ಕೋಲನ್ನೂ, ಕಮಂಡಲು ಕೃಷ್ಣಾಜಿನಗಳನ್ನೂ ಧರಿಸಿ ಆಶೆಯನ್ನು ಬಿಟ್ಟು ಈ ವೇಷಧಾರಿಯಾಗಬೇಕು.

೨೩. ವಿಧಿಪೂರ್ವಕವಾಗಿ ತೀರ್ಥಯಾತ್ರೆ ಮಾಡಿದರೆ ಫಲವು ಹೆಚ್ಚು ಬರುತ್ತದೆ. ಆದ್ದರಿಂದಲೇ ವಿಧಿವತ್ತಾಗಿ ತೀರ್ಥಯಾತ್ರೆಯನ್ನು ಮಾಡಬೇಕು.

೨೪. ಯಾವನಿಗೆ ಕೈಕಾಲುಗಳೂ ಮನಸ್ಸೂ ಸ್ವಾಧೀನದಲ್ಲಿದ್ದು ವಿದ್ಯೆ, ತಪಸ್ಸು, ಕೀರ್ತಿಗಳೂ ಇವೆಯೋ ಅವನು ತೀರ್ಥಫಲವನ್ನು ಹೊಂದುತ್ತಾನೆ.

೨೫-೨೬ ಹರೇ, ಕೃಷ್ಣ, ಭಕ್ತವತ್ಸಲ, ಗೋಪತೇ, ಶರಣ್ಯ, ವಿಷ್ಣೋ

ಇತಿ ಬ್ರುವನ್ ರಸನಯಾ ಮನಸಾ ಚ ಹರಿಂ ಸ್ಮರನ್ ।
ಪಾದಚಾರೀ ಗತಿಂ ಕುರ್ಯಾತ್ತೀರ್ಥಂ ಪ್ರತಿ ಮಹೋದಯಂ ॥ ೨೬ ॥

ಯಾನೇನ ಗಚ್ಛನ್ಪುರುಷಃ ಸಮಭಾಗಫಲಂ ಲಭೇತ್ ।
ಉಪಾನದ್ಭ್ಯಾಂ ಚತುರ್ಥಾಂಶಂ ಗೋಯಾನೇ ಗೋವಧಾದಿಕಂ ॥ ೨೭ ॥

ವ್ಯವಹಾರಾತ್ತೃತೀಯಾಂಶಂ ಸೇವಯಾಷ್ಟಮಭಾಗಭಾಕ್ ।
ಅನಿಚ್ಛಯಾ ವ್ರಜಂಸ್ತತ್ರ ತೀರ್ಥಮರ್ಧಫಲಂ ಲಭೇತ್ ॥ ೨೮ ॥

ಯಥಾಯಥಂ ಪ್ರಕರ್ತವ್ಯಾ ತೀರ್ಥಾನಾಮಭಿಯಾತ್ರಿಕಾ ।
ಪಾಪಕ್ಷಯೋ ಭವತ್ಯೇವ ವಿಧಿದೃಷ್ಟ್ಯಾ ವಿಶೇಷತಃ ॥ ೨೯ ॥

ತತ್ರ ಸಾಧೂನ್ನಮಸ್ಕುರ್ಯಾತ್ ಪಾದವಂದನಸೇವನೈಃ ।
ತದ್ದ್ವಾರಾ ಹರಿಭಕ್ತಿರ್ಹಿ ಪ್ರಾಪ್ಯತೇ ಪುರುಷೋತ್ತಮೇ ॥ ೩೦ ॥

ಇತಿ ತೀರ್ಥವಿಧಿಃ ಪ್ರೋಕ್ತಃ ಸಮಾಸೇನ ನ ವಿಸ್ತರಾತ್ ।
ಏವಂ ವಿಧಿಂ ಸಮಾಶ್ರಿತ್ಯ ಗಚ್ಛ ತ್ವಂ ಪುರುಷೋತ್ತಮಂ ॥ ೩೧ ॥

---

ಸಂಸಾರಿಯಾದ ನನ್ನನ್ನು ಕಾಪಾಡು, ಎಂದು ಬಾಯಿಂದ ಹೇಳುತ್ತಾ ಮನಸ್ಸಿನಿಂದ ಸ್ಮರಿಸುತ್ತಾ ಕಾಲುನಡಿಗೆಯಲ್ಲಿ ತೀರ್ಥವನ್ನು ಸೇವಿಸಬೇಕು.

೨೭-೨೮. ಯಾನದಿಂದ ಹೋದರೆ ಅರ್ಧಫಲವೂ, ಕೆರವನ್ನು ಮೆಟ್ಟಿಕೊಂಡು ಹೋದರೆ ಕಾಲುಭಾಗಫಲವೂ, ಎತ್ತುಗಳ ಯಾನದಲ್ಲಿ ಹೋದರೆ ಗೋವಧೆಯ ಪಾಪವನ್ನೂ, ಪಲ್ಲಕ್ಕಿಯಲ್ಲಿ ಹೋದರೆ ಮೂರರ ಒಂದಂಶವನ್ನೂ, ಆಳಾಗಿ ಹೋದರೆ ಎಂಟನೆಯ ಒಂದುಪಾಲನ್ನೂ, ಇಚ್ಛೆಯಿಲ್ಲದೆ ಹೋದರೆ ಅರ್ಧಫಲವನ್ನೂ ಹೊಂದುತ್ತಾನೆ.

೨೯. ತೀರ್ಥಯಾತ್ರೆಯನ್ನು ಹೇಗೆ ಮಾಡಿದರೂ ಪಾಪಕ್ಷಯವಾಗಿಯೇ ಆಗುತ್ತದೆ. ವಿಧಿವತ್ತಾಗಿ ಮಾಡಿದರೆ ವಿಶೇಷವಾಗಿ ಆಗುತ್ತದೆ.

೩೦. ಅಲ್ಲಿ ಸಾಧುಗಳಿಗೆ ನಮಸ್ಕರಿಸಬೇಕು. ಅವರನ್ನು ಸೇವಿಸಬೇಕು. ಅವರ ಮೂಲಕ ಹರಿಭಕ್ತಿಯುಂಟಾಗುತ್ತದೆ.

೩೧. ಹೀಗೆ ಸಂಗ್ರಹವಾಗಿ ತೀರ್ಥವಿಧಿಯನ್ನು ಹೇಳಿದ್ದೇನೆ. ಈ ರೀತಿಯಾಗಿ ನೀನು ಆ ಸ್ವಾಮಿಯನ್ನು ದರ್ಶನಮಾಡಬೇಕು.

ತುಭ್ಯಂ ತುಷ್ಟೋ ಮಹಾರಾಜ ದಾಸ್ಯತೇ ಭಕ್ತಿಮಚ್ಯುತಃ ।
ಯಥಾ ಸಂಸಾರನಿರ್ವಾಹಃ ಕ್ಷಣಾದೇವ ಭವಿಷ್ಯತಿ ॥ ೩೨ ॥

ತೀರ್ಥಯಾತ್ರಾವಿಧಿಂ ಶ್ರುತ್ವಾ ಸರ್ವಪಾತಕನಾಶನಂ ।
ಮುಚ್ಯತೇ ಸರ್ವಪಾಪೇಭ್ಯ ಉಗ್ರೇಭ್ಯಃ ಪುರುಷರ್ಷಭ ॥ ೩೩ ॥

॥ ಸುಮತಿರುವಾಚ ॥

ಇತಿ ವಾಚಂ ಸಮಾಕರ್ಣ್ಯ ವವಂದೇ ಚರಣೌ ಮಹಾನ್ ।
ತತ್ತೀರ್ಥದರ್ಶನೌತ್ಸುಕ್ಯವಿಹ್ವಲೀಕೃತಮಾನಸಃ ॥ ೩೪ ॥

ಆದಿದೇಶ ನಿಜಾಮಾತ್ಯಂ ಮಂತ್ರವಿತ್ತಮಮುತ್ತಮಂ ।
ತೀರ್ಥಯಾತ್ರೇಚ್ಛಯಾ ಸರ್ವಾನ್ ಸಹ ನೇತುಂ ಮನೋ ದಧತ್ ॥ ೩೫ ॥

ಮಂತ್ರಿನ್ಪೌರಜನಾನ್ಸರ್ವಾನಾದಿಶ ತ್ವಂ ಮಮಾಜ್ಞಯಾ ।
ಪುರುಷೋತ್ತಮಪಾದಾಬ್ಜದರ್ಶನಪ್ರತಿಹೇತವೇ ॥ ೩೬ ॥

---

೩೨. ಆಗ ಸ್ವಾಮಿಯು ತುಷ್ಟನಾಗಿ ಸಂಸಾರನಾಶಕವಾದ ಭಕ್ತಿಯನ್ನು ಕೊಡುತ್ತಾನೆ.

೩೩. ಈ ಪಾಪನಾಶಕವಾದ ತೀರ್ಥಯಾತ್ರಾವಿಧಿಯನ್ನು ಕೇಳಿದರೆ ಅತಿ ಮಹತ್ತಾದ ಪಾಪಗಳೂ ಹೋಗುತ್ತವೆ.

೩೪. ಸುಮತಿಯು ಹೇಳಿದನು:—ಈ ಮಾತನ್ನು ಕೇಳಿ ಆ ತೀರ್ಥದರ್ಶನದಲ್ಲಿ ಬಹು ಆಸೆಹುಟ್ಟಿ ಆ ಸಾಧುವನ್ನು ನಮಸ್ಕರಿಸಿದನು.

೩೫. ತೀರ್ಥಯಾತ್ರೆಗೆ ಎಲ್ಲರೂ ಬರಲೆಂದು ಇಚ್ಛೆಯಿಂದ ತನ್ನ ಮಂತ್ರಿಯನ್ನು ಕರೆದು ಅಪ್ಪಣೆಮಾಡಿದನು.

೩೬. ಎಲೈ! ಮಂತ್ರಿಯೇ, ಪುರುಷೋತ್ತಮನನ್ನು ನೋಡುವುದಕ್ಕೋಸ್ಕರ ಪಟ್ಟಣದವರೆಲ್ಲರಿಗೂ ನಾನು ಹೇಳಿದೆನೆಂದು ಅಪ್ಪಣೆಮಾಡು.

**ಯೇ ಮದೀಯೇ ಪುರೇ ಲೋಕಾ ಯೇ ಚ ಮದ್ವಾಕ್ಯಕಾರಕಾಃ ।**
**ಸರ್ವೇ ನಿರ್ಯಾಂತು ಮೇ ಪುರ್ಯಾ ಮಯಾ ಸಹ ನರೋತ್ತಮಾಃ ॥ ೩೭ ॥**

**ಯೇ ತು ಮದ್ವಾಕ್ಯಮುಲ್ಲಂಘ್ಯ ಸ್ಥಾಸ್ಯಂತಿ ಪುರುಷಾ ಗೃಹೇ ।**
**ತೇ ದಂಡ್ಯಾ ಯಮದಂಡೇನ ಪಾಪಿನೋಽಧರ್ಮಹೇತವಃ ॥ ೩೮ ॥**

**ಕಿಂ ತೇನ ಸುತವೃಂದೇನ ಬಾಂಧವೈಃ ಕಿಂ ಸುದುರ್ನಯೈಃ ।**
**ಯೈರ್ನ ದೃಷ್ಟೋಽತ್ರ ಚಕ್ಷುರ್ಭ್ಯಾಂ ಪುಣ್ಯದಃ ಪುರುಷೋತ್ತಮಃ ॥ ೩೯ ॥**

**ಶೂಕರೀಯೂಥವತ್ತೇಷಾಂ ಪ್ರಸೂತಿರ್ವಿಟ್ಪ್ರಭಕ್ಷಿಕಾ ॥**
**ಯೇಷಾಂ ಪುತ್ರಾಶ್ಚ ಪೌತ್ರಾ ವಾ ಹರಿಂ ನ ಶರಣಂ ಗತಾಃ ॥ ೪೦ ॥**

**ಯೋ ದೇವೋ ನಾಮಮಾತ್ರೇಣ ಸರ್ವಾನ್ಪಾವಯಿತುಂ ಕ್ಷಮಃ ।**
**ತಂ ನಮಸ್ಕುರುತ ಕ್ಷಿಪ್ರಂ ಮದೀಯಪ್ರಕೃತಿಪ್ರಜಾಃ ॥ ೪೧ ॥**

**ಇತಿ ವಾಕ್ಯಂ ಮನೋಹಾರಿ ಭಗವದ್ಗುಣಗುಂಫಿತಂ ।**
**ಪ್ರಜಹರ್ಷ ಮಹಾಮಾತ್ಯ ಉತ್ತಮಃ ಸತ್ಯನಾಮಧೃತ್ ॥ ೪೨ ॥**

---

೩೭. ನನ್ನ ಊರಿನಲ್ಲಿರುವ ನನ್ನ ಮಾತನ್ನು ನಡೆಸುವ ಜನರೆಲ್ಲರೂ ನನ್ನ ಜೊತೆಯಲ್ಲಿ ಹೊರಡಬೇಕು.

೩೮. ಯಾರು ನನ್ನ ಅಪ್ಪಣೆಯನ್ನು ಮೀರಿ ಮನೆಯಲ್ಲಿ ನಿಲ್ಲುತ್ತಾರೆಯೋ ಅವರು ಪಾಪಿಗಳು. ಅವರನ್ನು ಶಿಕ್ಷಿಸುತ್ತೇನೆ.

೩೯. ಅಂತಹ ಪುರುಷೋತ್ತಮನನ್ನು ಕಣ್ಣಿನಿಂದ ನೋಡದ ಬಂಧುಗಳಿಂದಾಗಲಿ ಮಕ್ಕಳಿಂದಾಗಲಿ ಪ್ರಯೋಜನವೇನು?

೪೦. ಯಾರ ಮಕ್ಕಳು ಮೊಮ್ಮಕ್ಕಳು ಹರಿಯನ್ನು ಭಜಿಸುವುದಿಲ್ಲವೋ ಅವರ ಗುಂಪು ಅಮೇಧ್ಯವನ್ನು ತಿನ್ನುವ ಹಂದಿಯ ಗುಂಪಿನಂತೆ ಉಪಯೋಗವಿಲ್ಲ.

೪೧. ಯಾವ ಸ್ವಾಮಿಯು ತನ್ನ ಹೆಸರು ಹೇಳಿದ ಮಾತ್ರಕ್ಕೆ ಕೃತಾರ್ಥರನ್ನಾಗಿ ಮಾಡುತ್ತಾನೋ, ಆತನನ್ನು ನನ್ನ ಪ್ರಜೆಗಳೆಲ್ಲರೂ ಜಾಗ್ರತೆ ನಮಸ್ಕರಿಸಿ.

೪೨. ಮನೋಹರವೂ ಭಗವದ್ಗುಣಗಳಿಂದ ಕೂಡಿದುದೂ ಆದ ಈ ಮಾತನ್ನು ಕೇಳಿದ ಉತ್ತಮನೆಂಬ ಮಂತ್ರಿಯು ತನ್ನ ಹೆಸರಿಗೆ ತಕ್ಕಂತೆ ಸಂತೋಷಿಸಿದನು

ಪಸ್ತಿನಂ ವರಮಾರುಷ್ಯ ಪಟಹೇನ ನೃಘೋಷಯತ್ ।
ಯದಾದಿಷ್ಟಂ ನೃಪೇಣೇಹ ತೀರ್ಥಯಾತ್ರಾಂ ಸಮಿಚ್ಛತಾ ॥ ೪೩ ॥

ಗಚ್ಛಂತು ತ್ವರಿತಾ ಲೋಕಾ ರಾಜ್ಞಾ ಸಹ ಮಹಾಗಿರಿಂ ।
ದೃಶ್ಯತಾಂ ಪಾಪಸಂಹಾರೀ ಪುರುಷೋತ್ತಮನಾಮಧೃತ್ ॥ ೪೪ ॥

ಕ್ರಿಯತಾಂ ಸರ್ವಸಂಸಾರಸಾಗರೋ ಗೋಷ್ಪದಂ ಪುನಃ ।
ಭೂಷ್ಯತಾಂ ಶಂಖಚಕ್ರಾದಿಚಿಹ್ನೈ ಸ್ಸ್ವಸ್ವತನುರ್ನರೈಃ ॥ ೪೫ ॥

ಇತ್ಯಾದಿ ಘೋಷಯಾಮಾಸ ರಾಜ್ಞಾದಿಷ್ಟಂ ಯದದ್ಭುತಂ ।
ಸಚಿವೋ ರಘುನಾಥಾಂಘ್ರಿಧ್ಯಾನನಿರ್ವಾರಿತ ಶ್ರಮಃ ॥ ೪೬ ॥

ತಚ್ಛ್ರುತ್ವಾ ತಾಃ ಪ್ರಜಾಸ್ಸರ್ವಾ ಆನಂದರಸಸಂಪ್ಲುತಾಃ ।
ಮನೋ ದಧುಃ ಸ್ವನಿಸ್ತಾರೇ ಪುರುಷೋತ್ತಮದರ್ಶನಾತ್ ॥ ೪೭ ॥

ನಿರ್ಯಯುರ್ಬ್ರಾಹ್ಮಣಾಸ್ತತ್ರ ಶಿಷ್ಯೈಸ್ಸಹ ಸುವೇಷಿಣಃ ।
ಆಶಿಷೋ ವರದಾನಾಢ್ಯಾ ದದತೋ ಭೂಪತಿಂ ಪ್ರತಿ ॥ ೪೮ ॥

---

೪೩. ರಾಜನು ಹೇಳಿದ ತೀರ್ಥಯಾತ್ರೆಯ ವಿಷಯವನ್ನು ಆನೆಯ ಮೇಲೆ ಕುಳಿತು ತಮ್ಮಟೆಗಳನ್ನು ಬಡಿಯುತ್ತ ಸಾರಿಸಿದನು.

೪೪. ಜನರೆಲ್ಲರೂ ರಾಜನೊಡನೆ ಬೆಟ್ಟಕ್ಕೆ ಹೊರಡಿ. ಅಲ್ಲಿ ಪಾಪನಾಶಕನಾದ ಪುರುಷೋತ್ತಮನ ದರ್ಶನವನ್ನು ಮಾಡಿರಿ.

೪೫. ಸಂಸಾರವೆಂಬ ಸಮುದ್ರವನ್ನು ದಾಟಲು ಸಣ್ಣನಾಗಿ ಮಾಡಿಕೊಳ್ಳಿರಿ. ಶಂಖಚಕ್ರಗಳಿಂದ ದೇಹವನ್ನು ಗುರ್ತಿಸಿಕೊಂಡು ಅಲಂಕರಿಸಿಕೊಳ್ಳಿರಿ.

೪೬. ಮಂತ್ರಿಯು ರಾಮನ ಪಾದಸ್ಮರಣೆಯಿಂದ ಶ್ರಮವನ್ನು ಲೆಕ್ಕಿಸದವನಾಗಿ ರಾಜನು ಹೇಳಿದುದನ್ನು ಸಾರಿದನು.

೪೭. ಅದನ್ನು ಕೇಳಿ ಪ್ರಜೆಗಳೆಲ್ಲರೂ ಸಂತೋಷಪಟ್ಟು ದೇವರ ದರ್ಶನದಿಂದ ಕೃತಾರ್ಥರಾಗಲು ಮನಸ್ಸುಮಾಡಿದರು.

೪೮. ಬ್ರಾಹ್ಮಣರು ಶಿಷ್ಯರೊಡನೆ ರಾಜನನ್ನು ಆಶೀರ್ವದಿಸುತ್ತ ಹೊರಟರು.

ಕ್ಷತ್ರಿಯಾ ಧನ್ವಿನೋ ವೀರಾ ವೈಶ್ಯಾ ವಸ್ತುಕ್ರಿಯಾಂಚಿತಾಃ ।
ಶೂದ್ರಾಸ್ಸಂಸಾರನಿಸ್ತಾರಹರ್ಷಿತಸ್ವೀಯವಿಗ್ರಹಾಃ ॥ ೪೯ ॥

ರಜಕಾಶ್ಚರ್ಮಕಾಃ ಕ್ಷೌದ್ರಾಃ ಕಿರಾತಾ ಭಿತ್ತಿಕಾರಕಾಃ ।
ಸೂಚೀವೃತ್ತ್ಯಾ ಚ ಜೀವಂತಸ್ತಾಂಬೂಲಕ್ರಯಕಾರಕಾಃ ॥ ೫೦ ॥

ತಾಳವಾದ್ಯಧರಾ ಯೇ ಚ ಯೇ ಚ ರಂಗೋಪಜೀವಿನಃ ।
ತೈಲವಿಕ್ರಯಿಣಶ್ಚೈವ ವಸ್ತ್ರವಿಕ್ರಯಿಣಸ್ತಥಾ ॥ ೫೧ ॥

ಸೂತಾ ವದಂತಃ ಪೌರಾಣಾಂ ವಾರ್ತಾಂ ಹರ್ಷಸಮನ್ವಿತಾಃ ।
ಮಾಗಧಾ ವಂದಿನಸ್ತತ್ರ ನಿರ್ಗತಾ ಭೂಮಿಪಾಜ್ಞಯಾ ॥ ೫೨ ॥

ಭಿಷಗ್ವೃತ್ತ್ಯಾ ಚ ಜೀವಂತಸ್ತಥಾ ಪಾಶಕಕೋವಿದಾಃ ।
ಪಾಕಸ್ವಾದುರಸಾಭಿಜ್ಞಾ ಹಾಸ್ಯವಾಕ್ಯಾನುರಂಜಕಾಃ ॥ ೫೩ ॥

ಐಂದ್ರಜಾಲಿಕವಿದ್ಯಾಢ್ಯಾಸ್ತಥಾ ವಾರ್ತಾಸು ಕೋವಿದಾಃ ।
ಪ್ರಶಂಸಂತೋ ಮಹಾರಾಜಂ ನಿರ್ಯಯುಃ ಪುರಮಧ್ಯತಃ ॥ ೫೪ ॥

---

೪೯. ಕ್ಷತ್ರಿಯರು ಧನುಸ್ಸನ್ನು ತೆಗೆದುಕೊಂಡೂ, ವೈಶ್ಯರು ಪದಾರ್ಥಗಳನ್ನು ತೆಗೆದುಕೊಂಡೂ, ಶೂದ್ರರೂ ಸೇವೆಯಿಂದ ಸಂಸಾರದಿಂದ ಪಾರಾಗುವೆನೆಂದು ಹೊರಟರು.

೫೦-೫೧. ಅಗಸರು, ಮೋಚಿಗಳು, ಚಂಡಾಲರು, ಕಿರಾತರು, ಗೋಡೆ ಹಾಕುವರು, ಗಾರೆಯುವರು, ದರ್ಜಿಯುವರು, ತಾಂಬೂಲವನ್ನು ಮಾರುವವರು, ತಾಳವಾದ್ಯಗಳಿಂದ ಜೀವಿಸುವವರು, ರಂಗಾರೆಯುವರು, ಗಾಣಿಗರು, ಜವಳಿ ಮಾರು ವವರೂ ಹೊರಟರು.

೫೨. ಸೂತರು, ಮಾಗಧರು ಜನಗಳನ್ನು ಹೊಗಳುತ್ತಾ ಹೊರಟರು.

೫೩-೫೪. ವೈದ್ಯರು, ಜೂಜುಗಾರರು, ಅಡಿಗೆಯುವರು, ವಿದೂಷಕರು, ಐಂದ್ರ ಜಾಲಿಕರು, ವೃತ್ತಾಂತಜ್ಞರು, ಇವರೆಲ್ಲರೂ ರಾಜನನ್ನು ಹೊಗಳುತ್ತ ಹೊರಟರು.

ರಾಜಾಪಿ ತತ್ರ ನಿರ್ವರ್ತ್ಯ ಪ್ರಾತಃಸಂಧ್ಯಾದಿಕಾಃ ಕ್ರಿಯಾಃ ।
ಬ್ರಾಹ್ಮಣಂ ತಾಪಸಶ್ರೇಷ್ಠಮಾನಿನಾಯ ಸುನಿರ್ಮಲಂ ॥ ೫೫ ॥

ತದಾಜ್ಞಯಾ ಮಹಾರಾಜೋ ನಿರ್ಜಗಾಮ ಪುರಾದ್ಬಹಿಃ ।
ಲೋಕೈರನುಗತೋ ರಾಜಾ ಬಭೌ ಚಂದ್ರ ಇವೋಡುಭಿಃ ॥ ೫೬ ॥

ಕ್ರೋಶಮಾತ್ರಂ ಸ ಗತ್ವಾಥ ಕ್ಷೌರಂ ಕೃತ್ವಾ ವಿಧಾನತಃ ।
ದಂಡಂ ಕಮಂಡಲುಂ ಬಿಭ್ರನ್ ಮೃಗಚರ್ಮ ತಥಾ ಶುಭಂ ॥ ೫೭ ॥

ಶುಭವೇಷೇಣ ಸಂಯುಕ್ತೋ ಹರಿಧ್ಯಾನಪರಾಯಣಃ ।
ಕಾಮಕ್ರೋಧಾದಿರಹಿತಂ ಮನೋ ಬಿಭ್ರನ್ಮಹಾಯಶಾಃ ॥ ೫೮ ॥

ತದಾ ದುಂದುಭಯೋ ಭೇರ್ಯ ಆನಕಾಃ ಪಣವಾಸ್ತಥಾ ।
ಶಂಖವೀಣಾದಿಕಾಶ್ಚೈವಾಧ್ಮಾತಾಸ್ತದ್ವಾದಕೈರ್ಮುಹುಃ ॥ ೫೯ ॥

---

೫೫. ರಾಜನು ಸಂಧ್ಯಾವಂದನಾದಿಗಳನ್ನು ಮಾಡಿಕೊಂಡು ಆ ತಪಸ್ವಿಯಾದ ಬ್ರಾಹ್ಮಣನನ್ನು ಕರೆಸಿದನು.

೫೬. ಆ ಬ್ರಾಹ್ಮಣನ ಅಪ್ಪಣೆಯಂತೆ ರಾಜನು ಪಟ್ಟಣದಿಂದ ಹೊರಟನು. ಜನಗಳಿಂದ ಕೂಡಿದ ಆತನು ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೆ ಪ್ರಕಾಶಿಸಿದನು.

೫೭-೫೮. ಕ್ರೋಶದೂರ ಪ್ರಯಾಣಮಾಡಿ ಕ್ಷೌರವನ್ನು ಮಾಡಿಸಿಕೊಂಡು ಒಳ್ಳೆಯ ಬಟ್ಟೆಯನ್ನುಟ್ಟು ಹರಿಧ್ಯಾನಮಾಡುತ್ತ ಕಾಮಕ್ರೋಧಾದಿಗಳಿಂದ ವರ್ಜಿತವಾದ ಮನಸ್ಸನ್ನು ಬಿಗಿಹಿಡಿದನು.

೫೯. ಆಗ ರಮಡೋಲುಗಳೂ, ನಗಾರಿಗಳೂ, ತಮಟೆಗಳೂ, ಶಂಖ, ವೀಣೆ ಮೊದಲಾದುವುಗಳೂ ವಾದಕರಿಂದ ವಾದಿಸಲ್ಪಟ್ಟವು.

**ಜಯ ದೇವೇಶ ದುಃಖಘ್ನ ಪುರುಷೋತ್ತಮಸಂಜ್ಞಿತ ।**
**ದರ್ಶಯಸ್ವ ತನುಂ ಮಹ್ಯಂ ವದಂತೋ ನಿರ್ಯಯುರ್ಜನಾಃ ॥ ೬೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ರತ್ನಗ್ರೀವಸ್ಯ ತೀರ್ಥಪ್ರಯಾಣಂ ನಾಮ ಏಕೋನವಿಂಶೋಽಧ್ಯಾಯಃ**



---

೬೦. ದೇವೇಶನೇ! ನಿನಗೆ ಜಯವಾಗಲಿ; ಪುರುಷೋತ್ತಮನೇ ನಿನಗೆ ಜಯವಾಗಲಿ; ನಿನ್ನ ನಿಜರೂಪವನ್ನು ತೋರಿಸು; ಎಂದು ಹೇಳುತ್ತ ಹೊರಟರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ರತ್ನಗ್ರೀವನ ತೀರ್ಥಪ್ರಯಾಣವೆಂಬ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ವಿಂಶೋಽಧ್ಯಾಯಃ

॥ ಸುಮತಿರುವಾಚ ॥

ಅಥ ಪ್ರಯಾತೇ ಭೂಪಾಲೇ ಸರ್ವಲೋಕಸಮನ್ವಿತೇ ।
ಮಹಾಭಾಗ್ಯೈರ್ವೈಷ್ಣವೈಶ್ಚ ಗಾಯದ್ಭಿಃ ಕೃಷ್ಣಕೀರ್ತನಂ ॥ ೧ ॥

ಶುಶ್ರಾವಾಸೌ ಮಹಾರಾಜ ಮಾರ್ಗೇ ಗೋವಿಂದಕೀರ್ತನಂ ।
ಜಯ ಮಾಧವ ಭಕ್ತಾನಾಂ ಶರಣ್ಯ ಪುರುಷೋತ್ತಮ ॥ ೨ ॥

ಪಥಿ ತೀರ್ಥಾನ್ಯನೇಕಾನಿ ಕುರ್ವನ್ ಪಶ್ಯನ್ ಮಹೋದಯಂ ।
ತಾಪಸಬ್ರಾಹ್ಮಣಾತ್ತೇಷಾಂ ಮಹಿಮಾನಮಥಾಶೃಣೋತ್ ॥ ೩ ॥

---

## ಇಪ್ಪತ್ತನೆಯ ಅಧ್ಯಾಯವು

೧. ಸುಮತಿಯು ಹೇಳಿದನು :—ಪುಣ್ಯವಂತರಾದ ವೈಷ್ಣವರಿಂದಲೂ ಕೃಷ್ಣನನ್ನು ಕೀರ್ತಿಸುವವರಿಂದಲೂ ಕೂಡಿಕೊಂಡು ಇತರ ಪ್ರಜೆಗಳನ್ನು ಸೇರಿಸಿಕೊಂಡು ಹೊರಟನು.

೨. ಮಾಧವ, ಜಯವಾಗಲಿ. ಪುರುಷೋತ್ತಮ ಜಯವಾಗಲಿ. ಎಂಬ ಸ್ವಾಮಿಯನ್ನು ಕೀರ್ತಿಸುವ ಪದಗಳನ್ನು ರಾಜನು ಕೇಳುತ್ತ ಹೊರಟನು.

೩. ದಾರಿಯಲ್ಲಿ ಅನೇಕ ತೀರ್ಥಗಳನ್ನು ನೋಡುತ್ತ ಮಹೋದಯವನ್ನು ದೃಷ್ಟಿಸುತ್ತ ಆ ತಾಪಸಬ್ರಾಹ್ಮಣನಿಂದ ಅವುಗಳ ಮಹಿಮೆಯನ್ನು ಕೇಳುತ್ತ ಹೋದನು.

ವಿಚಿತ್ರವಿಷ್ಣುವಾರ್ತಾಭಿರ್ವಿನೋದಿತಮನಾ ನೃಪಃ ।
ಮಾರ್ಗೇ ಮಾರ್ಗೇ ಮಹಾವಿಷ್ಣುಂ ಗೋಪಯಾಮಾಸ ಗಾಯಕೈಃ ॥ ೪ ॥

ದೀನಾಂಧಕೃಪಣಾನಾಂ ಚ ಪಂಗೂನಾಂ ವಾಸನೋಚಿತಂ ।
ದಾನಂ ದದೌ ಮಹಾರಾಜೋ ಬುದ್ಧಿಮಾನ್ವಿಜಿತೇಂದ್ರಿಯಃ ॥ ೫ ॥

ಅನೇಕತೀರ್ಥವಿರಜಮಾತ್ಮಾನಂ ಭವ್ಯತಾಂ ಗತಂ ।
ಕುರ್ವನ್ ಯಯೌ ಸ್ವಕೈರ್ಲೋಕೈರ್ಹರಿಧ್ಯಾನಪರಾಯಣಃ ॥ ೬ ॥

ನೃಪೋ ಗಚ್ಛನ್ ದದರ್ಶಾಗ್ರೇ ನದೀಂ ಪಾಪಪ್ರಣಾಶಿನೀಂ ।
ಚಕ್ರಾಂಕಿತಗ್ರಾವಯುತಾಂ ಮುನಿಮಾನಸನಿರ್ಮಲಾಂ ॥ ೭ ॥

ಅನೇಕಮುನಿವೃಂದಾನಾಂ ಬಹುಶ್ರೇಣಿವಿರಾಜಿತಾಂ ।
ಸಾರಸಾದಿಪತತ್ರೀಣಾಂ ಕೂಜಿತೈರುಪಶೋಭಿತಾಂ ॥ ೮ ॥

ದೃಷ್ಟ್ವಾ ಪಪ್ರಚ್ಛ ವಿಪ್ರಾಗ್ರ್ಯಂ ತಾಪಸಂ ಧರ್ಮಕೋವಿದಂ ।
ಅನೇಕತೀರ್ಥಮಾಹಾತ್ಮ್ಯವಿಶೇಷಜ್ಞಾನಜೃಂಭಿತಂ ॥ ೯ ॥

---

೪. ಕೃಷ್ಣನ ವಾರ್ತೆಯಿಂದ ಮನಸ್ಸನ್ನು ಸಂತೋಷಪಡಿಸುತ್ತ ಮಾರ್ಗಗಳ್ಲೆಲ್ಲಾ ವಿಷ್ಣುವನ್ನು ಗಾಯನಮಾಡಿದನು.

೫. ದೀನರು, ಕುರುಡರು, ಕುಂಟರು ಮುಂತಾದವರಿಗೆ ರಾಜನು ದಾನ ಮಾಡಿದನು.

೬. ಅನೇಕ ತೀರ್ಥಗಳಿಂದ ಆತ್ಮನನ್ನು ಪರಿಶುದ್ಧವನ್ನಾಗಿ ಮಾಡುತ್ತ ಹರಿಧ್ಯಾನದಿಂದ ಕೂಡಿರುವ ಜನರೊಂದಿಗೆ ಹೊರಟನು.

೭. ರಾಜನು ಹೋಗುತ್ತ ಸಾಲಗ್ರಾಮಗಳಿಂದ ಕೂಡಿದ ಪಾಪನಾಶಕವಾದ ನಿರ್ಮಲವಾದ ನದಿಯನ್ನು ನೋಡಿದನು.

೮. ಅನೇಕ ಋಷಿಗಳು ಶ್ರೇಣಿಯಾಗಿರುವ, ನೀರಿನ ಪಕ್ಷಿಗಳಿಂದ ಪ್ರಕಾಶಿಸುವ ಆ ನದಿಯನ್ನು ನೋಡಿದನು.

೯. ಅನೇಕ ತೀರ್ಥಗಳ ಮಹಿಮೆಯನ್ನು ಬಲ್ಲ ಧರ್ಮಜ್ಞನಾದ ಆ ಬ್ರಾಹ್ಮಣ ತಾಪಸನನ್ನು ಕುರಿತು ಇಂತೆಂದನು.

ಸ್ವಾಮಿನ್ಕೋಽಯಂ ನದೀ ಪುಣ್ಯಾ ಮುನಿವೃಂದನಿಷೇವಿತಾ ।
ಕರೋತಿ ಮಮ ಚಿತ್ತಸ್ಯ ಪ್ರಮೋದಭರನಿರ್ಭರಂ ॥ ೧೦ ॥

ಇತಿ ಶ್ರುತ್ವಾ ವಚಸ್ತಸ್ಯ ರಾಜರಾಜಸ್ಯ ಧೀಮತಃ ।
ವಕ್ತುಂ ಪ್ರಚಕ್ರಮೇ ವಿದ್ವಾಂಸ್ತೀರ್ಥಮಾಹಾತ್ಮ್ಯಮುದ್ಭುತಂ ॥ ೧೧ ॥

ಬ್ರಾಹ್ಮಣ ಉವಾಚ ॥

ಗಂಡಕೀಯಂ ನದೀ ರಾಜನ್ ಸುರಾಸುರನಿಷೇವಿತಾ ।
ಪುಣ್ಯೋದಕಪರೀವಾಹಹತಪಾತಕಸಂಚಯಾ ॥ ೧೨ ॥

ದರ್ಶನಾನ್ಮಾನಸಂ ಪಾಪಂ ಸ್ಪರ್ಶನಾತ್ಕರ್ಮಜಂ ದಹೇತ್ ।
ವಾಚಿಕಂ ಸ್ವೀಯತೋಯಸ್ಯ ಪಾನತಃ ಪಾನತಃ ಪಾಪಸಂಚಯಂ ॥ ೧೩ ॥

ಪುರಾ ದೃಷ್ಟ್ವಾ ಪ್ರಜಾನಾಥಃ ಪ್ರಜಾಃ ಸರ್ವಾ ವಿಪಾಪಿನೀಃ ।
ಸ್ವಗಂಡವಿಪ್ರುಷೋಽನೇಕಪಾಪಘ್ನೀಂ ಸೃಷ್ಟವಾನಿಮಾಂ ॥ ೧೪ ॥

---

೧೦. ಸ್ವಾಮಿ! ಅನೇಕ ಮುನಿಗಳಿಂದ ಸೇವಿಸಲ್ಪಡುತ್ತಿರುವ ಈ ನದಿ ಯಾವದು? ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿರುವುದಲ್ಲ.

೧೧. ಚಕ್ರವರ್ತಿಯ ಈ ಮಾತನ್ನು ಕೇಳಿ ಆ ಬ್ರಾಹ್ಮಣನು ಅದರ ಮಹಿಮೆಯನ್ನು ಹೇಳಿದನು.

೧೨. ಬ್ರಾಹ್ಮಣನು ಹೇಳಿದನು:—ಈ ನದಿಯ ಹೆಸರು ಗಂಡಕಿ ಎಂದು. ದೇವದಾನವರೆಲ್ಲರೂ ಇದನ್ನು ಸೇವಿಸುತ್ತಾರೆ. ಇದರ ನೀರು ಪವಿತ್ರವಾದುದು. ಪಾಪಹಾರಿಯು.

೧೩. ದರ್ಶನದಿಂದ ಮನಸ್ಸಿನ ಪಾಪವನ್ನೂ, ಮುಟ್ಟುವುದರಿಂದ ಕರ್ಮದಿಂದ ಉಂಟಾದ ಪಾಪವನ್ನೂ, ಕುಡಿಯುವುದರಿಂದ ಬಾಯಲ್ಲಾಡಿದ ಪಾಪವನ್ನೂ ನಾಶ ಮಾಡುತ್ತದೆ.

೧೪. ಪೂರ್ವದಲ್ಲಿ ಸ್ವಾಮಿಯು ಪ್ರಜೆಗಳೆಲ್ಲರೂ ಪಾಪಿಗಳಾಗಿರುವುದನ್ನು ನೋಡಿ ತನ್ನ ಕೆನ್ನೆಗಳಿಂದ ಬರುವ ನೀರಿನ ತುಂತುರುಗಳಿಂದ ಪಾಪನಾಶಕವಾದ ಇದನ್ನು ಸೃಷ್ಟಿಸಿದನು.

ಏತಾಂ ನದೀಂ ಯೇ ಪುಣ್ಯೋದಾಂ ಸ್ಪೃಶಂತಿ ಸುತರಂಗಿಣೀಂ ।
ತೇ ಗರ್ಭಭಾಜೋ ನೈವ ಸ್ಯುರಪಿ ಪಾಪಕೃತೋ ನರಾಃ ॥ ೧೫ ॥

ಅಸ್ಯಾಂ ಭವಾ ಯೇ ಚಾಶ್ಮಾನಶ್ಚಕ್ರಚಿಹ್ನೈರಲಂಕೃತಾಃ ।
ತೇ ಸಾಕ್ಷಾದ್ಭಗವಂತೋ ಹಿ ಸ್ವಸ್ವರೂಪಧರಾಃ ಪರಾಃ ॥ ೧೬ ॥

ಶಿಲಾಂ ಸಂಪೂಜಯೇದ್ಯಸ್ತು ನಿತ್ಯಂ ಚಕ್ರಯುತಾಂ ನರಃ ।
ನ ಜಾತು ಸ ಜನನ್ಯಾ ವೈ ಜಠರಂ ಸಮುಪಾವಿಶೇತ್ ॥ ೧೭ ॥

ಪೂಜಯೇದ್ಯೋ ನರೋ ಧೀಮಾನ್ ಶಾಲಗ್ರಾಮಶಿಲಾಂ ವರಾಂ ।
ತೇನಾಚಾರವತಾ ಭಾವ್ಯಂ ದಂಭಲೋಭವಿಯೋಗಿನಾ ॥ ೧೮ ॥

ಪರದಾರಪರದ್ರವ್ಯವಿಮುಖೇನ ನರೇಣ ಚ ।
ಪೂಜನೀಯಃ ಪ್ರಯತ್ನೇನ ಶಾಲಗ್ರಾಮಸ್ಸಚಕ್ರಕಃ ॥ ೧೯ ॥

ದ್ವಾರವತ್ಯಾಂ ಭವಂ ಚಕ್ರಂ ಶಿಲಾ ವೈ ಗಂಡಕೀ ಭವಾ ।
ಪುಂಸಾಂ ಕ್ಷಣಾದ್ಧರತ್ಯೇವ ಪಾಪಂ ಜನ್ಮಶತಾರ್ಜಿತಂ ॥ ೨೦ ॥

---

೧೫. ಈ ಪುಣ್ಯಪ್ರದವಾದ ನದಿಯನ್ನು ಮುಟ್ಟಿದರೆ ಪಾಪಿಗಳಾಗಿದ್ದರೂ ಅವರಿಗೆ ಗರ್ಭವಾಸದುಃಖವು ತಪ್ಪುತ್ತದೆ.

೧೬. ಇದರಲ್ಲಿ ಹುಟ್ಟಿದ ಕಲ್ಲುಗಳೂ ಕೂಡ ಚಕ್ರದಿಂದ ಚಿಹ್ನೆ ಹೊಂದಿವೆ. ಅವು ಸ್ವರೂಪವನ್ನು ಹೊಂದಿರುವ ಭಗವಂತನೇ ಆಗಿರುತ್ತವೆ.

೧೭. ಚಕ್ರಚಿಹ್ನಿತವಾದ ಕಲ್ಲನ್ನು ಪೂಜೆಮಾಡುವವನು ಜನ್ಮವನ್ನು ಹೊಂದುವುದಿಲ್ಲ.

೧೮. ಈ ಸಾಲಿಗ್ರಾಮವನ್ನು ಪೂಜಿಸುವವನು ದಂಭಲೋಭಗಳನ್ನು ಬಿಟ್ಟು ಆಚಾರಶೀಲನಾಗಿರಬೇಕು.

೧೯. ಪರರಹೆಂಡಿರು ಪರದ್ರವ್ಯದಲ್ಲಿ ಆಶೆಪಡದಿರುವವನು ಈ ಸಾಲಗ್ರಾಮವನ್ನು ಪೂಜಿಸಬೇಕು.

೨೦. ದ್ವಾರಾವತಿಯಲ್ಲಿ ಹುಟ್ಟಿದ ಚಕ್ರವೂ, ಗಂಡಕಿಯಲ್ಲಿ ಹುಟ್ಟಿದ ಶಿಲೆಯೂ ಪಾಪಿಗಳ ನೂರುಜನ್ಮದ ಪಾಪವನ್ನಾದರೂ ನಾಶಮಾಡುತ್ತವೆ.

ಅಪಿ ಪಾಪಸಹಸ್ರಾಣಾಂ ಕರ್ತಾ ತಾವನ್ನರೋ ಭವೇತ್ ।
ಶಾಲಗ್ರಾಮಶಿಲಾಪಾಥಃ ಪೀತ್ವಾ ಪೂಯೇತ ತತ್ಕ್ಷಣಾತ್ ॥ ೨೧ ॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವೇದಪಥಿ ಸ್ಥಿತಃ ।
ಶಾಲಗ್ರಾಮಂ ಪೂಜಯಿತ್ವಾ ಗೃಹಸ್ಥೋ ಮೋಕ್ಷಮಾಪ್ನುಯಾತ್ ॥ ೨೨ ॥

ನ ಜಾತು ವೈ ಸ್ತ್ರಿಯಾ ಕಾರ್ಯಂ ಶಾಲಗ್ರಾಮಸ್ಯ ಪೂಜನಂ ।
ಭರ್ತೃಹೀನಾಥ ಸುಭಗಾ ಸ್ವರ್ಗಲೋಕಹಿತೈಷಿಣೀ ॥ ೨೩ ॥

ಮೋಹಾತ್ಸ್ಪೃಷ್ಟ್ವಾಥ ಮಹಿಳಾ ಜನ್ಮಶೀಲಗುಣಾನ್ವಿತಾ ।
ಹಿತ್ವಾ ಪುಣ್ಯಸಮೂಹಂ ತು ಸತ್ವರಂ ನರಕಂ ವ್ರಜೇತ್ ॥ ೨೪ ॥

ಸ್ತ್ರೀಪಾಣಿಮುಕ್ತಪುಷ್ಪಾಣಿ ಶಾಲಗ್ರಾಮಶಿಲೋಪರಿ ।
ಸರ್ವಾಭ್ಯಧಿಕಪಾಪಾನಿ ವದಂತಿ ಬ್ರಾಹ್ಮಣೋತ್ತಮಾಃ ॥ ೨೫ ॥

---

೨೧. ಮನುಷ್ಯನು ಅನೇಕ ಸಾವಿರ ಪಾಪಗಳನ್ನು ಮಾಡಿದ್ದರೂ ಸಾಲಿಗ್ರಾಮ ತೀರ್ಥವನ್ನು ಕುಡಿದರೆ ಆಕ್ಷಣವೇ ಪರಿಶುದ್ಧನಾಗುತ್ತಾನೆ.

೨೨. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಯಾರೇ ಆಗಲಿ ಸ್ವಧರ್ಮದಲ್ಲಿದ್ದು ಸಾಲಿಗ್ರಾಮವನ್ನು ಪೂಜೆಮಾಡುತ್ತಿದ್ದರೆ, ಮನೆಯಲ್ಲಿದ್ದರೂ ಮೋಕ್ಷವು ಸಿಕ್ಕುತ್ತದೆ.

೨೩. ಗಂಡನಿರುವ ಅಥವಾ ಇಲ್ಲದ ಯಾವ ಸ್ತ್ರೀಯೇ ಆಗಲಿ ಸ್ವರ್ಗವನ್ನು ಅಪೇಕ್ಷಿಸುವವಳು ಸಾಲಿಗ್ರಾಮದ ಪೂಜೆಯನ್ನು ಮಾಡಬಾರದು.

೨೪. ಹೆಂಗಸು ಸಾಲಿಗ್ರಾಮವನ್ನು ಅಜ್ಞಾನದಿಂದ ಮುಟ್ಟಿದರೂ, ಆಕೆಯು ವಂಶಶೀಲಗುಣಗಳಿಂದ ಕೂಡಿದ್ದರೂ ಪುಣ್ಯವನ್ನೆಲ್ಲಾ ಕಳೆದುಕೊಂಡು ಒಡನೆಯೇ ನರಕಕ್ಕೆ ಹೋಗುತ್ತಾಳೆ.

೨೫. ಹೆಂಗಸು ಸಾಲಿಗ್ರಾಮದ ಮೇಲೆ ಹೂವನ್ನು ಹಾಕಿದರೆ ಎಲ್ಲ ಪಾಪಕ್ಕಿಂತಲೂ ಹೆಚ್ಚಿನ ಪಾಪವೆಂದು ಬ್ರಾಹ್ಮಣೋತ್ತಮರು ಹೇಳುತ್ತಾರೆ.

**ಚಂದನಂ ವಿಷಪಂಕಾಭಂ ಕುಂಕುಮಂ ವಜ್ರಸನ್ನಿಭಂ ।**
**ನೈವೇದ್ಯಂ ಕಾಲಕೂಟಾಭಂ ಭವೇದ್ಭಗವತಃ ಕೃತಂ ॥ ೨೬ ॥**

**ತಸ್ಮಾತ್ಸರ್ವಾತ್ಮನಾ ತ್ಯಾಜ್ಯಃ ಸ್ತ್ರಿಯಾ ಸ್ಪರ್ಶಃ ಶಿಲೋಪರಿ ।**
**ಕುರ್ವತೀ ಯಾತಿ ನರಕಂ ಯಾವದಿಂದ್ರಾಶ್ಚತುರ್ದಶ ॥ ೨೭ ॥**

**ಅಪಿ ಪಾಪಸಮಾಚಾರೋ ಬ್ರಹ್ಮಹತ್ಯಾಯುತೋಽಪಿ ವಾ ।**
**ಶಾಲಿಗ್ರಾಮಶಿಲಾತೋಯಂ ಪೀತ್ವಾ ಯಾತಿ ಪರಾಂ ಗತಿಂ ॥ ೨೮ ॥**

**ತುಲಸೀ ಚಂದನಂ ವಾರಿ ಶಂಖೋ ಘಂಟಾಥ ಚಕ್ರಕಂ ।**
**ಶಿಲಾ ತಾಮ್ರಸ್ಯ ಪಾತ್ರಂ ತು ವಿಷ್ಣೋರ್ನಾಮ ಪದಾಮೃತಂ ॥ ೨೯ ॥**

**ಪದಾಮೃತಂ ತು ನವಭಿಃ ಪಾಪರಾಶಿಪ್ರದಾಹಕಂ ।**
**ವದಂತಿ ಮುನಯಶ್ಶಾಂತಾಃ ಸರ್ವಶಾಸ್ತ್ರಾರ್ಥಕೋವಿದಾಃ ॥ ೩೦ ॥**

**ಸರ್ವತೀರ್ಥಪರಿಸ್ನಾನಾತ್ಸರ್ವಕ್ರತುಸಮರ್ಚನಾತ್ ।**
**ಪುಣ್ಯಂ ಭವತಿ ತದ್ರಾಜನ್ ಬಿಂದೌ ಬಿಂದೌ ತದದ್ಭುತಂ ॥ ೩೧ ॥**

---

೨೬. ಹೆಂಗಸರು ಸಾಲಿಗ್ರಾಮಕ್ಕೆ ಅರ್ಪಿಸಿದ ಚಂದನವು ವಿಷವೂ, ಕುಂಕುಮ ಕೇಸರಿಯು ವಜ್ರವೂ, ನೈವೇದ್ಯವು ಕಾಲಕೂಟವೂ ಆಗಿ ಪರಿಣಮಿಸುತ್ತದೆ.

೨೭. ಆದ್ದರಿಂದ ಹೆಂಗಸರು ಸರ್ವಪ್ರಕಾರದಿಂದಲೂ ಸಾಲಿಗ್ರಾಮವನ್ನು ಮುಟ್ಟಬಾರದು. ಮುಟ್ಟಿದರೆ ಹದಿನಾಲ್ಕುಜನ ಇಂದ್ರರು ಹೋಗುವವರೆಗೂ ನರಕವನ್ನು ಹೊಂದುತ್ತಾಳೆ.

೨೮. ಬ್ರಹ್ಮಹತ್ಯೆಯೇ ಮೊದಲಾದ ಪಾಪಗಳನ್ನು ಮಾಡಿದ್ದರೂ ಸಾಲಿಗ್ರಾಮದ ತೀರ್ಥವನ್ನು ಕುಡಿದರೆ ಮುಕ್ತಿಯನ್ನು ಹೊಂದುತ್ತಾನೆ.

೨೯-೩೦. ತುಳಸಿ, ಚಂದನ, ನೀರು, ಶಂಖ, ಘಂಟೆ, ಚಕ್ರ, ಸಾಲಿಗ್ರಾಮ, ತಾಮ್ರಪಾತ್ರೆ, ವಿಷ್ಣುವಿನನಾಮ, ಈ ಒಂಭತ್ತೂ ಪಾಪರಾಶಿಗಳನ್ನು ನಾಶಮಾಡುತ್ತವೆ ಎಂದು ಸರ್ವಶಾಸ್ತ್ರಜ್ಞರಾದ ಮುನಿಗಳು ಹೇಳುತ್ತಾರೆ.

೩೧. ಸಪ್ತತೀರ್ಥಗಳಲ್ಲಿ ಸ್ನಾನದ, ಸಮಸ್ತ ಯಾಗಗಳನ್ನು ಮಾಡಿದ ಪುಣ್ಯಗಳು ಆ ನೀರಿನ (ತೀರ್ಥದ) ಬಿಂದುಬಿಂದುವಿಗೂ ಉಂಟಾಗುತ್ತದೆ. ಇದು ಆಶ್ಚರ್ಯವು.

ಶಾಲಗ್ರಾಮಶಿಲಾ ಯತ್ರ ಪೂಜ್ಯತೇ ಪುರುಷೋತ್ತಮೈಃ ।
ತತ್ರ ಯೋಜನಮಾತ್ರಂ ತು ತೀರ್ಥಕೋಟಿಸಮನ್ವಿತಂ ॥ ೩೨ ॥

ಶಾಲಗ್ರಾಮಾಃ ಸಮಾಃ ಪೂಜ್ಯಾಃ ಸಮೇಷು ದ್ವಿತಯಂ ನ ಹಿ ।
ವಿಷಮಾ ಏವ ಪೂಜ್ಯಂತೇ ವಿಷಮೇಷು ತ್ರಯಂ ನ ಹಿ ॥ ೩೩ ॥

ದ್ವಾರಾವತೀಭವಂ ಚಕ್ರಂ ತಥಾ ವೈ ಗಂಡಕೀಭವಂ ।
ಉಭಯೋಸ್ಸಂಗಮೋ ಯತ್ರ ತತ್ರ ಗಂಗಾ ಸಮುದ್ರಗಾ ॥ ೩೪ ॥

ರೂಕ್ಷಾಃ ಕುರ್ವಂತಿ ಪುರುಷಾನಾಯುಃ ಶ್ರೀಕೀರ್ತಿವರ್ಜಿತಾನ್ ।
ತಸ್ಮಾತ್ಸ್ನಿಗ್ಧಾ ಮನೋಹಾರಿರೂಪಿಣೋ ದದತಿ ಶ್ರಿಯಂ ॥ ೩೫ ॥

ಆಯುಷ್ಕಾಮೋ ನರೋ ಯಸ್ತು ಧನಕಾಮೋಽಪಿ ಯಃ ಪುಮಾನ್ ।
ಪೂಜಯನ್ಸರ್ವಮಾಪ್ನೋತಿ ಪಾರಲೌಕಿಕಮೈಹಿಕಂ ॥ ೩೬ ॥

---

೩೨. ಜನರು ಎಲ್ಲಿ ಸಾಲಿಗ್ರಾಮವನ್ನು ಪೂಜಿಸುತ್ತಾರೆಯೋ ಅಲ್ಲಿ ಹನ್ನೆರಡು ಮೈಲಿಗಳ ವರೆಗೂ ತೀರ್ಥಗಳ ಕೋಟಿಗಳಿವೆ.

೩೩. ಸಾಲಿಗ್ರಾಮವನ್ನು ಸಮಸಂಖ್ಯೆಯನ್ನಾಗಲಿ ವಿಷಮಸಂಖ್ಯೆಯನ್ನಾಗಲಿ ಪೂಜಿಸಬಹುದು. ಆದರೆ ಸಮಸಂಖ್ಯೆಯಲ್ಲಿ ಎರಡನ್ನೂ ವಿಷಮಸಂಖ್ಯೆಯಲ್ಲಿ ಮೂರನ್ನೂ ಪೂಜಿಸಬಾರದು.

೩೪. ದ್ವಾರಾವತಿಯಲ್ಲಿ ಹುಟ್ಟಿದ ಚಕ್ರ ಅಂಕಿತಸಾಲಿಗ್ರಾಮ, ಗಂಡಕಿಯಲ್ಲಿ ಹುಟ್ಟಿದ ಸಾಲಿಗ್ರಾಮ ಈ ಎರಡನ್ನು ಒಂದೆಡೆ ಸೇರಿಸಿ ಅಭಿಷೇಕಮಾಡಿದರೆ ಆ ತೀರ್ಥವು ಸಮುದ್ರಸಂಗಮವಾಗುವ ಗಂಗಾತೀರ್ಥವೆಂದು ಹೇಳಲ್ಪಡುತ್ತದೆ. ಅಷ್ಟೇ ಪುಣ್ಯವುಳ್ಳದ್ದು.

೩೫. ನೋಡಲು ಕಠಿಣವಾಗಿ ತರಿತರಿಯಾಗಿರುವ ಸಾಲಿಗ್ರಾಮಗಳು ಮನುಷ್ಯರ ಆಯುಸ್ಸು, ಐಶ್ವರ್ಯ, ಕೀರ್ತಿಗಳನ್ನು ನಾಶಮಾಡುತ್ತವೆ. ಆದ್ದರಿಂದ ನುಣುಪಾಗಿಯೂ ಮನೋಹರವಾಗಿಯೂ ಇರುವ ಸಾಲಿಗ್ರಾಮವನ್ನು ಪೂಜೆಮಾಡಿದರೆ ಸಂಪತ್ತು ಹೆಚ್ಚುತ್ತದೆ.

೩೬. ಆಯುಷ್ಕಾಮರು, ಧನಕಾಮರು, ಪೂಜಿಸಿದರೆ ಇಹಪರಸೌಖ್ಯಗಳೆರಡನ್ನೂ ಹೊಂದುತ್ತಾರೆ.

ಪ್ರಾಣಾಂತಕಾಲೇ ಪುಂಸಸ್ತು ಭವೇದ್ಭಾಗ್ಯವಶೋ ನೃಪ ।
ವಾಚಿ ನಾಮ ಹರೇಃ ಪುಣ್ಯಂ ಶಿಲಾ ಹೃದಿ ತದಂತಿಕೇ ॥ ೩೭ ॥

ಗಚ್ಛತ್ಸು ಪ್ರಾಣಮಾರ್ಗೇಷು ಯಸ್ಯ ವಿಸ್ರಂಭತೋಽಪಿ ಚೇತ್ ।
ಶಾಲಗ್ರಾಮಶಿಲಾ ಸ್ಫೂರ್ತಿಸ್ತಸ್ಯ ಮುಕ್ತಿರ್ನ ಸಂಶಯಃ ॥ ೩೮ ॥

ಪುರಾ ಭಗವತಾ ಪ್ರೋಕ್ತಮಂಬರೀಷಾಯ ಧೀಮತೇ ।
ಬ್ರಾಹ್ಮಣಾ ನ್ಯಾಸಿನಃ ಸ್ನಿಗ್ಧಾಃ ಶಾಲಗ್ರಾಮಶಿಲಾಸ್ತಥಾ ॥ ೩೯ ॥

ಸ್ವರೂಪತ್ರಿತಯಂ ಮಹ್ಯಮೇತದ್ಧಿ ಕ್ಷಿತಿಮಂಡಲೇ ।
ಪಾಪಿನಾಂ ಪಾಪನಿರ್ನಾಶಂ ಕರ್ತುಂ ಧೃತಮುದಂಚತಾ ॥ ೪೦ ॥

ನಿಂದಂತಿ ಪಾಪಿನೋ ಯೇ ವಾ ಶಾಲಗ್ರಾಮಶಿಲಾಂ ಸಕೃತ್ ।
ಕುಂಭೀಪಾಕೇ ಪ್ರಪಚ್ಯಂತೇ ಯಾವದಾಭೂತಸಂಪ್ಲವಂ ॥ ೪೧ ॥

ಪೂಜಾಂ ಸಮುದ್ಯತಂ ಕರ್ತುಂ ಯೋ ವಾರಯತಿ ಮೂಢಧೀಃ ।
ತಸ್ಯ ಮಾತಾ ಪಿತಾ ಬಂಧುವರ್ಗಾ ನರಕಭಾಗಿನಃ ॥ ೪೨ ॥

---

೩೭. ಮನುಷ್ಯನು ಪುಣ್ಯವಂತನಾಗಿದ್ದರೇನೆ ಸಾಯುವಾಗ ಬಾಯಲ್ಲಿ ಹರಿ ನಾಮ ಹೊರಡುವುದು. ಹೃದಯದಲ್ಲಿ ಅಥವಾ ಹತ್ತಿರದಲ್ಲಿ ಸಾಲಿಗ್ರಾಮ ಶಿಲೆ ಇರುವುದು. ಇಲ್ಲದಿದ್ದರೆ ಇಲ್ಲ.

೩೮. ಪ್ರಾಣ ಹೋಗುತ್ತಿರುವಾಗ ಪ್ರೀತಿಯಿಂದ ಸಾಲಿಗ್ರಾಮ ಸ್ಮರಣೆ ಮಾಡಿದರೆ ಅವನಿಗೆ ಮುಕ್ತಿ ಬರುತ್ತದೆ.

೩೯-೪೦. ಬ್ರಾಹ್ಮಣರು, ಸನ್ಯಾಸಿಗಳು, ಸಾಲಿಗ್ರಾಮಗಳು, ಈ ಮೂರು ರೂಪವೂ ನನ್ನದು. ಭೂಮಿಯಲ್ಲಿ ಈ ಮೂರು ರೂಪದಿಂದಿದ್ದೇನೆ. ಇವರಿಂದ ಪಾಪಿಗಳ ಪಾಪವನ್ನು ನಾಶಮಾಡುತ್ತೇನೆ. ಅದಕ್ಕೆ ಈ ಮೂರು ರೂಪವು ಎಂದು ಅಂಬರೀಷನಿಗೆ ಭಗವಂತನು ಹೇಳಿರುತ್ತಾನೆ.

೪೧. ಸಾಲಿಗ್ರಾಮವನ್ನು ಒಂದಾವರ್ತಿ ನಿಂದಿಸಿದವರೂ ಅವರನ್ನು ಪ್ರಳಯದ ನಾಶವಾಗುವವರೆಗೂ ಕುಂಭೀಪಾಕದಲ್ಲಿ ಬೇಯಿಸುತ್ತಾರೆ.

೪೨. ಸಾಲಿಗ್ರಾಮದ ಪೂಜೆಯನ್ನು ಮಾಡುವುದನ್ನು ತಪ್ಪಿಸುವವರ ಅವರ ತಾಯಿತಂದೆ ಬಂಧುವರ್ಗಗಳೂ, ಅವನೂ ನರಕಕ್ಕೆ ಹೋಗುತ್ತಾರೆ.

ಯೋ ವೈ ಕಥಯತಿ ಪ್ರೇಷ್ಠಂ ಶಾಲಗ್ರಾಮಾರ್ಚನಂ ಕುರು ।
ಸ ಕೃತಾರ್ಥೋ ನಯತ್ಯಾಶು ವೈಕುಂಠಂ ಸ್ವೀಯಪೂರ್ವಜಾನ್ ॥ ೪೩ ॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಮುನಯೋ ವೀತರಾಗಾಶ್ಚ ಕಾಮಕ್ರೋಧವಿವರ್ಜಿತಾಃ ॥ ೪೪ ॥

ಪುರಾ ಕೀಕಟಸಂಜ್ಞೇ ವೈ ದೇಶೇ ಧರ್ಮವಿವರ್ಜಿತೇ ।
ಆಸೀತ್ಪುಲ್ಕಸಜಾತೀಯೋ ನರಶ್ಶಬರಸಂಜ್ಞಿತಃ ॥ ೪೫ ॥

ನಿತ್ಯಂ ಜಂತುವಧೋದ್ಯುಕ್ತಃ ಶರಾಸನಧರೋ ಮುಹುಃ ।
ತೀರ್ಥಂ ಪ್ರತಿ ಯಿಯಾಸೂನಾಂ ಬಲಾದ್ಧರತಿ ಜೀವಿತಂ ॥ ೪೬ ॥

ಅನೇಕಪ್ರಾಣಿಹತ್ಯಾಕೃತ್ ಪರಸ್ವನಿರತಃ ಸದಾ ।
ಸದಾ ರಾಗಾದಿಸಂಯುಕ್ತಃ ಕಾಮಕ್ರೋಧಾದಿಸಂಯುತಃ ॥ ೪೭ ॥

---

೪೩. ಯಾವನಾದರೂ ಮತ್ತೊಬ್ಬನಿಗೆ ಉತ್ತಮವಾದ ಸಾಲಿಗ್ರಾಮಾರ್ಚನೆಯನ್ನು ಮಾಡೆಂದು ಹೇಳಿದರೆ ಆ ಹೇಳಿದವನು ಕೃತಾರ್ಥನಾಗಿ ಅವನೂ ಅವನ ಬಂಧುಗಳೂ ವೈಕುಂಠಕ್ಕೆ ಹೋಗುತ್ತಾರೆ.

೪೪. ಎಲೈ! ಕಾಮಕ್ರೋಧವರ್ಜಿತರಾದ ಋಷಿಗಳೇ, ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ; ಕೇಳಿ.

೪೫. ಪೂರ್ವದಲ್ಲಿ ಧರ್ಮರಹಿತವಾದ ಕೀಕಟದೇಶದಲ್ಲಿ ಒಬ್ಬ ಚಂಡಾಲ ಜಾತಿಗೆ ಸೇರಿದ ಬೇಡನಿದ್ದನು.

೪೬. ಅವನು ಯಾವಾಗಲೂ ಬಿಲ್ಲುಬಾಣಗಳನ್ನು ಹಿಡಿದು ಜಂತುಗಳನ್ನು ಕೊಲ್ಲುತ್ತ ತೀರ್ಥಯಾತ್ರಿಕರನ್ನು ಕೊಲ್ಲುತ್ತಿದ್ದನು.

೪೭. ಅನೇಕ ಪ್ರಾಣಿಗಳನ್ನು ಕೊಲ್ಲುತ್ತ ಪರರ ಹಣವನ್ನು ಅಪಹರಿಸುತ್ತ ಕಾಮಕ್ರೋಧಾದಿಗಳಿಂದ ಕೂಡಿದ್ದನು.

ವಿಚರತ್ಯನಿಶಂ ಭೀಮೋ ವನೇ ಪ್ರಾಣಿವಧಂಕರಃ ।
ವಿಷಸಂಸಕ್ತಬಾಣಾಗ್ರರೂಢಚಾಪಗುಣೋದ್ಧುರಃ ॥ ೪೮ ॥

ಸ ಕದಾ ಪರ್ಯಟನ್ ವ್ಯಾಧಃ ಪ್ರಾಣಿಮಾತ್ರಭಯಂಕರಃ ।
ಕಾಲಂ ಪ್ರಾಪ್ತಂ ನ ಜಾನಾತಿ ಸಮೀಪೇ ಮುಗ್ಧಮಾನಸಃ ॥ ೪೯ ॥

ಯಮದೂತಾಸ್ತು ಸಂಪ್ರಾಪ್ತಾಃ ಪಾಶಮುದ್ಗರಪಾಣಯಃ ।
ತಾಮ್ರಕೇಶಾ ದೀರ್ಘನಖಾ ಲಂಬದಂಷ್ಟ್ರಾ ಭಯಾನಕಾಃ ॥ ೫೦ ॥

ಶ್ಯಾಮಾ ಲೋಹಸ್ಯ ನಿಗಡಾನ್ ಬಿಭ್ರತೋ ಮೋಹಕಾರಕಾಃ ।
ಬಧ್ನಂತು ಪಾಪಿನಂ ಹ್ಯೇನಂ ಪ್ರಾಣಿಮಾತ್ರಭಯಂಕರಂ ॥ ೫೧ ॥

ಏತಸ್ಯ ಜಿಹ್ವಾಂ ಬೃಹತೀಮಹಂ ನಿಷ್ಕಾಸಯಾಮ್ಯತಃ ।
ಏಕೋ ವದತಿ ಚೈಕಸ್ಯ ಚಕ್ಷುರುತ್ಪಾಟಯಾಮ್ಯಹಂ ॥ ೫೨ ॥

ಏಕೋ ವದತಿ ಚೈಕಸ್ಯ ಕರೌ ಕೃಂತಾಮಿ ಪಾಪಿನಃ ।
ಅನ್ಯೋ ವದತ್ಯಹಂ ಕರ್ಣೌ ಕರ್ತಯಾಮಿ ದುರಾತ್ಮನಃ ॥ ೫೩ ॥

---

೪೮. ಬಾಣದ ತುದಿಗೆ ವಿಷವನ್ನು ಸವರಿ ಅದರಿಂದ ಪ್ರಾಣಿಗಳನ್ನು ಹೊಡೆಯುತ್ತ ಭಯಂಕರವಾದ ಕಾಡಿನಲ್ಲಿ ಸಂಚರಿಸುತ್ತಿದ್ದನು.

೪೯. ಪ್ರಾಣಿಗಳಿಗೆ ಭಯಂಕರನಾಗಿ ಆತನು ಸುತ್ತುತ್ತ ದಷ್ಟನಾಗಿ ಕಾಲಕಳೆಯುವನ್ನು ತಿಳಿಯದೆ ಸುತ್ತುತ್ತಿದ್ದನು.

೫೦-೫೧. ಅವನನ್ನು ಸತ್ತಮೇಲೆ ಕೊಂಡುಹೋಗಲು ಪಾಶ ಮುದ್ಗರಗಳನ್ನು ಹಿಡಿದುಕೊಂಡು ಕೆಂಚುಗೂದಲುಳ್ಳ, ಉದ್ದವಾದ ಉಗುರುಳ್ಳ, ಕೋರೆದಾಡೆಯುಳ್ಳ, ಭಯಂಕರರಾದ ಕಬ್ಬಿಣದ ಬೇಡಿಗಳುಳ್ಳ ಯಮದೂತನು ಈ ಪಾಪಿಯನ್ನು ಕಟ್ಟಲು ಬಂದರು.

೫೨-೫೩. ಅವರಲ್ಲಿ ಒಬ್ಬನು ಇವನ ದೊಡ್ಡದಾದ ನಾಲಿಗೆಯನ್ನು ಕತ್ತರಿಸುತ್ತೇನೆಂದೂ, ಮತ್ತೊಬ್ಬನು ಕಣ್ಣನ್ನು ಕೀಳುತ್ತೇನೆಂದೂ, ಮಗದೊಬ್ಬನು ಕೈಗಳನ್ನು ಕತ್ತರಿಸುತ್ತೇನೆಂದೂ, ಇನ್ನೊಬ್ಬನು ಕಿವಿಗಳನ್ನು ಕತ್ತರಿಸುತ್ತೇನೆಂದೂ ಎನ್ನುತ್ತಿದ್ದರು.

ಕದಾಚಿನ್ಮನಸಾ ನಾಯಂ ಪ್ರಾಣಿಮಾತ್ರೋಪಕಾರಕಃ ।
ಪರದಾರಪರದ್ರವ್ಯಪರದ್ರೋಹಪರಾಯಣಃ ॥ ೫೪ ॥

ಏವಂ ವದಂತಸ್ಸಭ್ರೃಶಂ ದಂತೈರ್ದತನಿಪೀಡಕಾಃ ।
ಆಗತ್ಯ ತಂ ದುರಾತ್ಮಾನಂ ಸಾಯುಧಾಸ್ತಸ್ಥುರುನ್ಮದಾಃ ॥ ೫೫ ॥

ಏಕೋ ದೂತಸ್ತದಾ ಸರ್ಪರೂಪಂ ಧೃತ್ವಾsದಶತ್ಪದೇ ।
ಸ ದಷ್ಟಮಾತ್ರಃ ಸಹಸಾ ಗತಾಸುಃ ಪರ್ಯಜಾಯತ ॥ ೫೬ ॥

ತದಾ ತಂ ಲೋಹಪಾಶೇನ ಬದ್ಧ್ವಾ ಶಮನಕಿಂಕರಾಃ ।
ಕಶಾಭಿಸ್ತಾಡಯಾಮಾಸುರ್ಮುದ್ಗರೈಃ ಪ್ರಾಹರಂಸ್ತಥಾ ॥ ೫೭ ॥

ಅಹೋ ದುಷ್ಟ ದುರಾತ್ಮಂಸ್ತ್ವಂ ಕದಾಚಿನ್ನಾಚರಶ್ಶುಭಂ ।
ಮನಸಾಪಿ ಯತಸ್ತ್ವಾಂ ವೈ ಕ್ಷೇಪ್ಸ್ಯಾಮೋ ರೌರವೇಷು ಚ ॥ ೫೮ ॥

ತ್ವನ್ಮಾಂಸಂ ವಾಯಸಾ ರೌದ್ರಾ ಭಕ್ಷ್ಯಯಿಷ್ಯಂತಿ ವೈ ಕ್ರುಧಾ ।
ಆ ಜನ್ಮತಸ್ತು ಭವತಾ ನ ಕೃತಂ ಹರಿಸೇವನಂ ॥ ೫೯ ॥

---

೫೪-೫೫. ಅವರು ಬರುತ್ತಲೇ, ಈ ಬೇಡನು ಮನಸ್ಸಿನಿಂದಲೂ ಕೂಡ ಪ್ರಾಣಿಗಳಿಗೆ ಹಿತವನ್ನೆಣಿಸಿದವನಲ್ಲ ಪರರ ದ್ರವ್ಯ, ಹೆಂಗಸರುಗಳನ್ನು ಅಪಹರಿಸಿ ಪರದ್ರೋಹದಲ್ಲಿ ಆಸಕ್ತನಾಗಿದ್ದನು. ಎಂದು ಹಲ್ಲುಹಲ್ಲು ಕಡಿಯುತ್ತ ಆಯುಧ ಪಾಣಿಗಳಾಗಿ ನಿಂತರು.

೫೬. ಅವರಲ್ಲಿ ಒಬ್ಬ ದೂತನು ಸರ್ಪರೂಪವನ್ನು ಹೊಂದಿ ಕಾಲನ್ನು ಕಚ್ಚಿದನು. ಕಚ್ಚಿದೊಡನೆಯೇ ಸತ್ತುಹೋದನು.

೫೭. ಆಗ ಬೇಡಿಯಿಂದ ಅವನನ್ನು ಕಟ್ಟಿ ಚಾವಟಿಯಿಂದ ಹೊಡೆಯುತ್ತ ಹೊರಟರು.

೫೮. ಎಲೈ! ದುಷ್ಟನೇ, ನೀನು ಒಂದು ಸಾರಿಯಾದರೂ ಮನಸ್ಸಿನಿಂದ ಲಾದರೂ ಶುಭವನ್ನು ಮಾಡಲೇ ಇಲ್ಲ. ನಿನ್ನನ್ನು ರೌರವಾದಿನರಕಗಳಲ್ಲಿ ಹಾಕುತ್ತೇವೆ.

೫೯. ನಿನ್ನ ಮಾಂಸವನ್ನು ಕಾಗೆಗಳೂ ಕೋಪದಿಂದ ತಿನ್ನುತ್ತವೆ. ಹುಟ್ಟಿದ ಮೊದಲು ಹರಿಸೇವೆಯನ್ನೇ ಮಾಡಿದವನಲ್ಲ.

ತ್ವಯಾ ಪುತ್ರಕಳತ್ರಾದ್ಯಾ ದ್ರೋಹಂ ಕೃತ್ವಾ ಸುಪೋಷಿತಾಃ ।
ನ ಕದಾಚಿತ್ ಸ್ಮೃತೋ ದೇವಃ ಪಾಪಹಾರೀ ಜನಾರ್ದನಃ ॥ ೬೦ ॥

ತಸ್ಮಾತ್ತ್ವಾಂ ಲೋಹಶಂಕೌ ವಾ ಕುಂಭೀಪಾಕೇತಿ ರೌರವೇ ।
ಧರ್ಮರಾಜಾಜ್ಞಯಾ ಸರ್ವೇ ನೇಷ್ಯಾಮೋ ಬಹುತಾಡನೈಃ ॥ ೬೧ ॥

ಏವಮುಕ್ತ್ವಾ ಯದಾ ನೇತುಂ ಸಮ್ಯೈಚ್ಛನ್ಯಮಕಿಂಕರಾಃ ।
ತಾವತ್ಪ್ರಾಪ್ತೋ ಮಹಾವಿಷ್ಣುಚರಣಾಬ್ಜಪರಾಯಣಃ ॥ ೬೨ ॥

ಯಮದೂತಾಸ್ತದಾ ದೃಷ್ಟಾ ವೈಷ್ಣವೇನ ಮಹಾತ್ಮನಾ ।
ಪಾಶಮುದ್ಗರದಂಡಾದಿದುಷ್ಟಾಯುಧಧರಾ ಗಣಾಃ ॥ ೬೩ ॥

ಪುಲ್ಕಸಂ ಲೋಹನಿಗಡೈರ್ಬದ್ಧ್ವಾ ಗಂತುಂ ಸಮುದ್ಯತಾಃ ।
ಬಂಧ ಬಂಧ ಗ್ರಸಚ್ಛಿಂಧಿ ಭಿಂದಿ ಭಿಂದೀತಿ ವಾದಿನಃ ॥ ೬೪ ॥

---

೬೦. ನೀನು ದ್ರೋಹಮಾಡುತ್ತಲೇ ಹೆಂಡತಿಮಕ್ಕಳನ್ನು ಕಾಪಾಡಿದೆ. ಪಾಪಹಾರಿಯಾದ ಜನಾರ್ದನವನ್ನು ಒಂದುಬಾರಿಯೂ ಸೇವಿಸಲೇ ಇಲ್ಲ.

೬೧. ಆದ್ದರಿಂದ ನಿನ್ನನ್ನು ಯಮನ ಅಪ್ಪಣೆಯಂತೆ ನಾವೆಲ್ಲರೂ ಹೊಡೆಯುತ್ತಾ ಲೋಹಶಂಕುವಿನಲ್ಲೂ, ಕುಂಭೀಪಾಕದಲ್ಲಿಯೂ, ರೌರವನರಕದಲ್ಲಿಯೂ ಹಾಕುತ್ತೇವೆ.

೬೨. ಹೀಗೆ ಯಮಕಿಂಕರರು ಹೇಳುತ್ತಿರುವಾಗಲೇ ಅಲ್ಲಿಗೆ ವಿಷ್ಣುಭಕ್ತನೊಬ್ಬನು ಬಂದನು.

೬೩. ವೈಷ್ಣವನು ಈ ಕ್ರೂರವಾದ ಆಯುಧಗಳನ್ನು ಧರಿಸಿರುವ ಯಮದೂತರನ್ನು ನೋಡಿದನು.

೬೪. ಆ ಬೇಡನನ್ನು ಸರಪಣಿಗಳಿಂದ ಕಟ್ಟಿ ಹೊರಡಲುದ್ಯುಕ್ತರಾಗಿ ಕಟ್ಟು, ಕತ್ತರಿಸು, ಕಡಿ ಎಂದು ಹೇಳುತ್ತಿದ್ದರು.

ತದಾ ಕೃಪಾಳುಸ್ತಂ ಪ್ರೇಕ್ಷ್ಯ ಪದ್ಮನಾಭಪರಾಯಣಃ ।
ಅತ್ಯಂತಕೃಪಯಾ ಯುಕ್ತಂ ಚೇತಸ್ತತ್ರ ತದಾऽಕರೋತ್ ॥ ೬೫ ॥

ಅಸೌ ಮಹಾದುಷ್ಟಪೀಡಾಂ ಮಾ ಯಾತು ಮಮ ಸನ್ನಿಧೌ ।
ಮೋಚಯಾಮ್ಯಹಮದ್ಯೈವ ಯಮದೂತೇಭ್ಯ ಏವ ಚ ॥ ೬೬ ॥

ಇತಿ ಕೃತ್ವಾ ಮತಿಂ ತಸ್ಮೈ ಕೃಪಾಯುಕ್ತೋ ಮುನೀಶ್ವರಃ ।
ಶಾಲಗ್ರಾಮಶಿಲಾಂ ಹಸ್ತೇ ಗೃಹೀತ್ವಾಸ ಗತೋಽಂತಿಕೇ ॥ ೬೭ ॥

ತಸ್ಯ ಪಾದೋದಕಂ ಪುಣ್ಯಂ ತುಳಸೀದಳಮಿಶ್ರಿತಂ ।
ಮುಖೇ ವಿನಿಕ್ಷಿಪನ್ಕರ್ಣೇ ರಾಮನಾಮ ಜಜಾಪ ಹ ॥ ೬೮ ॥

ತುಲಸೀಂ ಮಸ್ತಕೇ ತಸ್ಯ ಧಾರಯಾಮಾಸ ವೈಷ್ಣವಃ ।
ಶಿಲಾಂ ಹೃದಿ ಮಹಾವಿಷ್ಣೋರ್ಧೃತ್ವಾ ಪ್ರಾಹ ಸ ವೈಷ್ಣವಃ ॥ ೬೯ ॥

ಗಚ್ಛಂತು ಯಮದೂತಾ ವೈ ಯಾತನಾಸು ಪರಾಯಣಾಃ ।
ಶಾಲಗ್ರಾಮಶಿಲಾಸ್ಪರ್ಶೋ ದಹತಾತ್ಪಾತಕಂ ಮಹತ್ ॥ ೭೦ ॥

---

೬೫. ಆಗ ದಯಾಳುವಾದ ವೈಷ್ಣವನು ನೋಡಿ ಬಹು ದಯಾವಂತನಾದನು.

೬೬-೬೭. ನಾನು ಇರುವಾಗ ಈ ದುಷ್ಟರ ಪೀಡೆಯಾಗಬಾರದು. ಇದನ್ನು ತಪ್ಪಿಸುತ್ತೇನೆ ಎಂದು ಆ ಮುನಿಯು ಸಾಲಿಗ್ರಾಮದ ಶಿಲೆಯನ್ನು ತೆಗೆದುಕೊಂಡು ಅವನ ಬಳಿಗೆ ಹೋದನು.

೬೮. ಆ ಸಾಲಿಗ್ರಾಮದ ತೀರ್ಥವನ್ನು ತುಳಸೀದಳದೊಡನೆ ಬಾಯಿಗೆ ಹಾಕಿ ತುಳಸಿಯನ್ನು ಕಿವಿಗೂ ಸಿಕ್ಕಿಸಿ ಕಿವಿಯಲ್ಲಿ ರಾಮನಾಮವನ್ನು ಹೇಳಿದನು.

೬೯. ಆ ವೈಷ್ಣವನು ತುಲಸಿಯನ್ನು ತಲೆಯಲ್ಲೂ ಇಟ್ಟು, ಸಾಲಿಗ್ರಾಮವನ್ನು ಅವನ ಎದೆಯಲ್ಲೂ ಇಟ್ಟು ಇಂತೆಂದನು.

೭೦. ಯಾತನೆ ಕೊಡತಕ್ಕ ಯಮದೂತರು ಹೋಗಲಿ. ಸಾಲಿಗ್ರಾಮದ ಕಲ್ಲಿನ ಸ್ಪರ್ಶದಿಂದ ಈತನ ಪಾಪವೆಲ್ಲ ನಾಶವಾಗಲಿ.

ಇತ್ಯುಕ್ತವತಿ ತಸ್ಮಿನ್ವೈ ಗಣಾ ವಿಷ್ಣೋರ್ಮಹಾದ್ಭುತಾಃ ।
ಆಯಯುಸ್ತಸ್ಯ ಸವಿಧೇ ಶಿಲಾಸ್ಪರ್ಶಹತಾಂಹಸಃ ॥ ೨೧ ॥

ಪೀತವಸ್ತ್ರಾಃ ಶಂಖಚಕ್ರಗದಾಪದ್ಮವಿರಾಜಿತಾಃ ।
ಆಗತ್ಯ ಮೋಚಯಾಮಾಸುರ್ಲೋಹಪಾಶಾದ್ದುರಾಸದಾತ್ ॥ ೨೨ ॥

ಮೋಚಯಿತ್ವಾ ಮಹಾಪಾಪಕಾರಕಂ ಪುಲ್ಕಸಂ ನರಂ ।
ಊಚುಃ ಕಿಮರ್ಥಂ ಬದ್ಧೋಽಯಂ ವೈಷ್ಣವಃ ಪೂಜ್ಯದೇಹಭೃತ್ ॥ ೨೩ ॥

ಕಸ್ಯಾಜ್ಞಾಕಾರಕಾ ಯೂಯಂ ಯದಧರ್ಮಪ್ರಕಾರಕಾಃ ।
ಇತಿ ವಾಕ್ಯಂ ಸಮಾಕರ್ಣ್ಯ ಜಗದುರ್ಯಮಕಿಂಕರಾಃ ॥ ೨೪ ॥

ಧರ್ಮರಾಜಾಜ್ಞಯಾ ಪ್ರಾಪ್ತಾ ನೇತುಂ ಪಾಪಿನಮುದ್ಯತಾಃ ।
ನಾಸೌ ಕದಾಚಿನ್ಮನಸಾ ಪ್ರಾಣಿಮಾತ್ರೋಪಕಾರಕಃ ॥ ೨೫ ॥

ಪ್ರಾಣಿಹತ್ಯಾಮಹಾಪಾಪಕಾರೀ ದುಷ್ಟಶರೀರಭೃತ್ ।
ಬಹುಶಸ್ತೀರ್ಥಯಾತ್ರಾಯಾಂ ಗಚ್ಛತೋಽಸೌ ವ್ಯಲುಂಠಯತ್ ॥ ೨೬ ॥

---

೨೧. ಹೀಗೆ ಮಾಡಿದುದರಿಂದ ಆತನ ಪಾಪವೆಲ್ಲವೂ ಹೋಗಲು ವಿಷ್ಣುಭಕ್ತರು ಅಲ್ಲಿಗೆ ಬಂದರು.

೨೨. ಬಿಳೀಬಟ್ಟೆ, ಶಂಖಚಕ್ರಗದೆಪದ್ಮದಿಂದ ಕೂಡಿ ಬಂದು ಈ ಯಮಪಾಶದಿಂದ ಬಿಡಿಸಿದರು.

೨೩. ಮಹಾಪಾಪಿಯಾದ ಆತನನ್ನು ಬಿಡಿಸಿ ಈ ವೈಷ್ಣವನನ್ನು ಏತಕ್ಕೆ ಕಟ್ಟಿದ್ದೀರಿ? ಎಂದರು.

೨೪. ಎಲೈ! ಅಧರ್ಮಿಗಳೇ, ನೀವು ಯಾರ ದೂತರು? ಎಂದು ಕೇಳಲು ಯಮಕಿಂಕರರು ಹೇಳಿದರು.

೨೫. ಈ ಪಾಪಿಯನ್ನು ಕರೆದುಕೊಂಡು ಹೋಗಲು ಧರ್ಮರಾಜನ ಅಪ್ಪಣೆಯಿಂದ ಬಂದಿದ್ದೇವೆ. ಇವನು ಮನಸ್ಸಿನಿಂದಲೂ ಪರೋಪಕಾರವನ್ನು ಮಾಡಿಲ್ಲ.

೨೬. ಪ್ರಾಣಿಹತ್ಯೆ ಮಾಡಿರುವುದರಿಂದ ಮಹಾಪಾಪಿಯು. ಇವನು ಅನೇಕ ಸಾರಿ ತೀರ್ಥಯಾತ್ರೆಗೆ ಹೋಗುತ್ತಿದ್ದವರನ್ನು ದೋಚಿರುತ್ತಾನೆ.

ಪರದಾರರತೋ ನಿತ್ಯಂ ಸರ್ವಪಾಪಾಧಿಕಾರಕಃ ।
ತಸ್ಮಾನ್ನೇತುಂ ವಯಂ ಪ್ರಾಪ್ತಾಃ ಪಾಪಿನಂ ಪುಲ್ಕಸಂ ನರಂ ॥ ೭೭ ॥

ಭವದ್ಭಿರ್ಮೋಚಿತಃ ಕಸ್ಮಾದಕಸ್ಮಾದಾಗತೈರಿಹ ॥ ೭೮ ॥

॥ ವಿಷ್ಣುದೂತಾ ಊಚುಃ ॥

ಬ್ರಹ್ಮಹತ್ಯಾದಿಕಂ ಪಾಪಂ ಪ್ರಾಣಿಕೋಟಿವಧೋದ್ಭವಂ ।
ಶಾಲಗ್ರಾಮಶಿಲಾಸ್ಪರ್ಶಃ ಸರ್ವಂ ದಹತಿ ತತ್ಕ್ಷಣಾತ್ ॥ ೭೯ ॥

ರಾಮೇತಿ ನಾಮ ಯಚ್ಛ್ರೋತ್ರೇ ವಿಶ್ರಂಭಾದಾಗತಂ ಯದಿ ।
ಕರೋತಿ ಪಾಪಸಂದಾಹಂ ತೂಲಂ ವಹ್ನಿಕಣೋ ಯಥಾ ॥ ೮೦ ॥

ತುಲಸೀ ಮಸ್ತಕೇ ಯಸ್ಯ ಶಿಲಾ ಹೃದಿ ಮನೋಹರಾ ।
ಮುಖೇ ಕರ್ಣೇಽಥವಾ ರಾಮನಾಮ ಮುಕ್ತಸ್ತದೈವ ಸಃ ॥ ೮೧ ॥

ತಸ್ಮಾದನೇನ ತುಲಸೀ ಮಸ್ತಕೇ ವಿಧೃತಾ ಪುರಾ ।
ಶ್ರಾವಿತಂ ರಾಮನಾಮಾಶು ಶಿಲಾ ಹೃದಿ ಸುಧಾರಿತಾ ॥ ೮೨ ॥

---

೭೭-೭೮. ಯಾವಾಗಲೂ ಪರರ ಹೆಂಡಿರಲ್ಲೇ ರಮಿಸುತ್ತಿದ್ದನು. ಸರ್ವ ಪಾಪಗಳಿಗೂ ಈತನೇ ಅಧಿಕಾರಿ. ಆದ್ದರಿಂದ ಈ ಪಾಪಿಯನ್ನು ತೆಗೆದುಕೊಂಡುಹೋಗಲು ಬಂದೆವು. ಅಕಸ್ಮಾತ್ತಾಗಿ ಬಂದ ನೀವು ಈತನನ್ನು ಏಕೆ ಬಿಡಿಸಿದಿರಿ?

೭೯. ವಿಷ್ಣುದೂತರು ಹೇಳಿದರು:—ಪ್ರಾಣಿಗಳನ್ನು ಕೊಂದ ಪಾಪವೂ ಬ್ರಹ್ಮಹತ್ಯಾದಿ ಪಾಪಗಳೂ ಕೂಡ ಸಾಲಿಗ್ರಾಮದ ಸ್ಪರ್ಶದಿಂದ ಒಡನೆಯೇ ನಾಶವಾಗುತ್ತದೆ.

೮೦. ರಾಮನೆಂಬ ನಾಮವು ಅಕಸ್ಮಾತ್ತಾಗಿ ಕಿವಿಗೆ ಬಿದ್ದರೂ ಬೆಂಕಿಯು ಹತ್ತಿಯನ್ನು ಸುಡುವಂತೆ ಪಾಪಗಳನ್ನು ಸುಡುತ್ತದೆ.

೮೧. ಯಾವನ ತಲೆಯಲ್ಲಿ ತುಳಸಿಯೂ, ಎದೆಯಲ್ಲಿ ಸಾಲಿಗ್ರಾಮವೂ ಇದ್ದು, ಬಾಯಿ ಅಥವಾ ಕಿವಿಯಲ್ಲಿ ರಾಮನಾಮವಿದೆಯೋ ಅವನು ಮುಕ್ತನು.

೮೨-೮೩. ಇವನು ತಲೆಯಲ್ಲಿ ತುಳಸಿಯನ್ನು ಧರಿಸಿ, ಎದೆಯಲ್ಲಿ ಸಾಲಿಗ್ರಾಮ

ತಸ್ಮಾತ್ಪಾಪಸಮೂಹೋಽಸ್ಯ ದಗ್ಧಃ ಪುಣ್ಯಕಳೇಬರಃ ।
ಯಾಸ್ಯತೇ ಪರಮಂ ಸ್ಥಾನಂ ಪಾಪಿನಾಂ ಯತ್ಸುದುರ್ಲಭಂ ॥ ೮೩ ॥

ವರ್ಷಾಯುತಂ ತತ್ರ ಭುಕ್ತ್ವಾ ಭೋಗಾನ್ ಸರ್ವಮನೋಹರಾನ್ ।
ಕಾಶ್ಯಾಂ ಜನ್ಮ ಸಮಾಸಾದ್ಯಾಽಽರಾಧ್ಯ ತಂ ಚ ಜಗದ್ಗುರುಂ ॥ ೮೪ ॥

ಪ್ರಾಪ್ಸ್ಯತೇ ಪರಮಂ ಸ್ಥಾನಂ ಸುರಾಸುರಸುದುರ್ಲಭಂ ।
ನ ಜ್ಞಾತೋ ಮಹಿಮಾ ಸಮ್ಯಕ್ ಶಿಲಾಯಾಃ ಪರಮೇಷ್ಠಿನಃ ॥ ೮೫ ॥

ದೃಷ್ಟ್ವಾ ಸ್ಪೃಷ್ಟ್ವಾರ್ಚಿತಾ ವಾಪಿ ಸರ್ವಪಾಪಹರಾ ಕ್ಷಣಾತ್ ।
ಇತ್ಯುಕ್ತ್ವಾ ವಿರತಾಸ್ಸರ್ವೇ ಮಹಾವಿಷ್ಣೋರ್ಗಣಾ ಮುದಾ ॥ ೮೬ ॥

ಯಾಮ್ಯಾಸ್ತೇ ಕಿಂಕರಾ ರಾಜ್ಞೇ ಕಥಯಾಮಾಸುರದ್ಭುತಂ ।
ವೈಷ್ಣವೋ ಹರ್ಷಮಾಪೇದೇ ರಘುನಾಥಪರಾಯಣಃ ॥ ೮೭ ॥

ಮುಕ್ತೋಽಸೌ ಯಮಪಾಶಾಚ್ಚ ಗಮಿಷ್ಯತಿ ಪರಂ ಪದಂ ।
ತದಾಜಗಾಮ ವಿಮಲಂ ಕಿಂಕಿಣೀಜಾಲಮಂಡಿತಂ ॥ ೮೮ ॥

---

ವನ್ನು ಧರಿಸಿ, ಕಿವಿಯಲ್ಲಿ ರಾಮನಾಮವನ್ನು ಕೇಳಿದನು. ಆದ್ದರಿಂದ ಪಾಪನಾಶವಾಗಿ ಪುಣ್ಯಶರೀರವಾಯಿತು. ಪಾಪಿಗಳಿಗೆ ದುರ್ಲಭವಾದ ಸ್ವರ್ಗವನ್ನು ಹೊಂದುತ್ತಾನೆ.

೮೪-೮೫. ಹತ್ತುಸಾವಿರ ವರ್ಷಗಳು ಅಲ್ಲಿ ಭೋಗವನ್ನು ಅನುಭವಿಸಿ ಕಾಶಿಯಲ್ಲಿ ಹುಟ್ಟಿ ವಿಶ್ವೇಶ್ವರನನ್ನು ಪೂಜಿಸಿ, ಸುರಾಸುರರಿಗೂ ದುರ್ಲಭವಾದ ಸ್ಥಾನವನ್ನು ಹೊಂದುತ್ತಾನೆ. ಸಾಲಿಗ್ರಾಮದ ಶಿಲೆಯ ಮಹಿಮೆಯು ಬ್ರಹ್ಮನಿಗೂ ಸರಿಯಾಗಿ ತಿಳಿಯದು

೮೬. ನೋಡಿದರೂ, ಮುಟ್ಟಿದರೂ, ಪೂಜಿಸಿದರೂ ಸರ್ವಪಾಪಹರವಾಗುತ್ತದೆ. ಹೀಗೆಂದು ಹೇಳಿ ಆ ವಿಷ್ಣುದೂತರರು ಸುಮ್ಮನಾದರು.

೮೭. ಯಮನ ಆಳುಗಳು ಈ ಅದ್ಭುತವನ್ನು ರಾಜನಿಗೆ ಹೇಳಿದರು. ಆ ವೈಷ್ಣವನು ಇದನ್ನು ಕೇಳಿ ಹರ್ಷಿತನಾದನು.

೮೮-೮೯. ಯಮಪಾಶದಿಂದ ಬಿಡಲ್ಪಟ್ಟು ಸ್ವರ್ಗವನ್ನು ಹೊಂದುತ್ತಾನೆನ್ನಲು,

ವಿಮಾನಂ ದೇವಲೋಕಾತ್ತು ಮನೋಹಾರಿ ಮಹಾದ್ಭುತಂ ।
ತತ್ರಾರುಹ್ಯ ಗತಸ್ಸ್ವರ್ಗಂ ಮಹಾಪುಣ್ಯನಿಷೇವಿತಂ ॥ ೭೯ ॥

ಭೋಗಾನ್ ಭುಕ್ತ್ವಾ ಸುವಿಪುಲಾನಾಜಗಾಮ ಮಹೀತಳಂ ।
ಕಾಶ್ಯಾಂ ಜನ್ಮ ಸಾಮಾಸಾದ್ಯ ಶುಚಿಬಾಡವಸತ್ಕುಲೇ ॥ ೯೦ ॥

ಆರಾಧ್ಯ ಜಗತಾಮೀಶಂ ಗತವಾನ್ಪರಮಂ ಪದಂ ।
ಸ ಪಾಪೀ ಸಾಧುಸಂಗತ್ಯಾ ಶಾಲಗ್ರಾಮಶಿಲಾಂ ಸ್ಪೃಶನ್ ॥ ೯೧ ॥

ಮಹಾಪೀಡಾವಿನಿರ್ಮುಕ್ತೋ ಗತವಾನ್ಪರ ಮಂ ಪದಂ ॥
ಮಯಾ ತೇಽಭಿಹಿತಂ ರಾಜನ್ ಶಾಲಗ್ರಾಮಶಿಲಾರ್ಚನಂ ।
ಶ್ರುತ್ವಾ ವಿಮುಚ್ಯತೇ ಪಾಪೈರ್ಭುಕ್ತಿಂ ಮುಕ್ತಿಂ ಚ ವಿಂದತಿ ॥ ೯೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಗಂಡಕೀಮಾಹಾತ್ಮ್ಯಂ ನಾಮ
ವಿಂಶೋಽಧ್ಯಾಯಃ

---

ಗಂಟೆ ಗೆಜ್ಜೆಗಳಿಂದ ಕೂಡಿದ ವಿಮಾನವು ದೇವಲೋಕದಿಂದ ಬಂದಿತು. ಅದರಲ್ಲಿ ಕುಳಿತು ಮಹಾ ಪುಣ್ಯಪ್ರದವಾದ ಸ್ವರ್ಗವನ್ನು ಹೊಂದಿದನು.

೯೦-೯೧. ಅಲ್ಲಿ ಬಹು ಭೋಗಗಳನ್ನು ಅನುಭವಿಸಿ ಭೂಲೋಕಕ್ಕೆ ಬಂದು ಕಾಶಿಯಲ್ಲಿ ಒಬ್ಬ ಶುಚಿಯಾದ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿ ಪರಮೇಶ್ವರನನ್ನು ಪೂಜಿಸಿ ಕೈಲಾಸವನ್ನು ಹೊಂದಿದನು. ಅವನು ಪಾಪಿಯಾದರೂ ಸಾಧುವಿನ ಸಹವಾಸದಿಂದ, ಸಾಲಿಗ್ರಾಮ ಶಿಲೆಯನ್ನು ಮುಟ್ಟಿದುದರಿಂದ ಈ ರೀತಿಯಾದನು.

೯೨. ಎಲೈ! ರಾಜನೇ, ಸಾಲಿಗ್ರಾಮದ ಶಿಲೆಯ ಪೂಜೆಯನ್ನು ಹೇಳಿದೆನು. ಇದನ್ನು ಕೇಳಿದರೆ ಪಾಪವನ್ನು ನಾಶಮಾಡಿಕೊಂಡು, ಆಹಾರವನ್ನು ಹೊಂದಿ ಕೊನೆಯಲ್ಲಿ ಮುಕ್ತಿಯನ್ನು ಹೊಂದುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಗಂಡಕೀಮಹಾತ್ಮ್ಯೆಯೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕವಿಂಶೋಽಧ್ಯಾಯಃ

॥ ಸುಮತಿರುವಾಚ ॥

ಏತನ್ಮಾಹಾತ್ಮ್ಯಮತುಳಂ ಗಂಡಕ್ಯಾಃ ಕರ್ಣಗೋಚರಂ ।
ಕೃತ್ವಾ ಕೃತಾರ್ಥಮಾತ್ಮಾನಮಮನ್ಯತ ನೃಪೋತ್ತಮಃ ॥ ೧ ॥

ಸ್ನಾತ್ವಾ ತೀರ್ಥೇ ಪಿತೄನ್ ಸರ್ವಾನ್ ಸಂತರ್ಪ್ಯ ಜಹೃಷೇ ಮಹಾನ್ ।
ಶಾಲಗ್ರಾಮಶಿಲಾಪೂಜಾಂ ಕುರ್ವನ್ ಬಾಡಬವಾಕ್ಯತಃ ॥ ೨ ॥

ಚತುರ್ವಿಂಶಚ್ಛಿಲಾಸ್ತತ್ರ ಗೃಹೀತ್ವಾ ಸ ನೃಪೋತ್ತಮಃ ।
ಪೂಜಯಾಮಾಸ ಚ ಪ್ರೇಮ್ಣಾ ಚಂದನಾದ್ಯುಪಚಾರಕೈಃ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯವು

೧. ಸುಮತಿಯು ಹೇಳಿದನು:—ಆ ರಾಜನು ಗಂಡಕಿಯ ಈ ಮಹಿಮೆಯನ್ನು ಕೇಳಿ ತಾನು ಧನ್ಯತೆಯನ್ನು ಹೊಂದಿದನು.

೨. ರತ್ನಗ್ರೀವನು ಆ ಬ್ರಾಹ್ಮಣನ ಮಾತಿನಂತೆ ಗಂಡಕಿಯಲ್ಲಿ ಸ್ನಾನಮಾಡಿ ಪಿತೃತರ್ಪಣಮಾಡಿ ಸಾಲಿಗ್ರಾಮ ಪೂಜೆಯನ್ನು ಮಾಡಿದನು.

೩. ಅಲ್ಲಿ ಇಪ್ಪತ್ತನಾಲ್ಕು ಸಾಲಿಗ್ರಾಮಗಳನ್ನು ತೆಗೆದುಕೊಂಡು ಪ್ರೀತಿಯಿಂದ ಪೂಜಿಸಿದನು.

ತತ್ರ ದಾನಾನಿ ದತ್ವಾ ಚ ದೀನಾಂಧೇಭ್ಯೋ ವಿಶೇಷತಃ ।
ಗಂತುಂ ಪ್ರಚಕ್ರಮೇ ರಾಜಾ ಪುರುಷೋತ್ತಮಮಂದಿರಂ ॥ ೪ ॥

ಏವಂ ಕ್ರಮೇಣ ಸಂಪ್ರಾಪ್ತೋ ಗಂಗಾಸಾಗರಸಂಗಮಂ ।
ಕೃತ್ವಾಕ್ಷಿಗೋಚರಂ ತಂ ಚ ಬ್ರಾಹ್ಮಣಂ ಪೃಷ್ಟವಾನ್ಮುದಾ ॥ ೫ ॥

ಸ್ವಾಮಿನ್ಸ್ವದ ಕಿಯದ್ದೂರೇ ನೀಲಾಖ್ಯಃ ಪರ್ವತೋ ಮಹಾನ್ ।
ಪುರುಷೋತ್ತಮಸಂವಾಸಃ ಸುರಾಸುರನಮಸ್ಕೃತಃ ॥ ೬ ॥

ತದಾ ಶ್ರುತ್ವಾ ಮಹದ್ವಾಕ್ಯಂ ರತ್ನಗ್ರೀವಸ್ಯ ಭೂಪತೇಃ ।
ಉವಾಚ ವಿಸ್ಮಯಾವಿಷ್ಟೋ ರಾಜಾನಂ ಪ್ರತಿ ಸಾದರಂ ॥ ೭ ॥

ರಾಜನ್ನೇತತ್ಸ್ಥಲಂ ನೀಲಪರ್ವತಸ್ಯ ನಮಸ್ಕೃತಂ ।
ಕಿಮರ್ಥಂ ದೃಶ್ಯತೇ ನೈವ ಮಹಾಪುಣ್ಯಫಲಪ್ರದಂ ॥ ೮ ॥

ಪುನಃ ಪುನರುವಾಚೇದಂ ಸ್ಥಲಂ ನೀಲಸ್ಯ ಭೂಭೃತಃ ।
ಕಥಂ ನ ದೃಶ್ಯತೇ ರಾಜನ್ ಪುರುಷೋತ್ತಮವಾಸಭೃತ್ ॥ ೯ ॥

---

೪. ಕುಂಟರು ಕುರುಡರಿಗೆ ದಾನಾದಿಗಳನ್ನು ಕೊಟ್ಟು ಪುರುಷೋತ್ತಮನ ಗುಡಿಗೆ ಹೊರಟನು.

೫. ಈರೀತಿ ಹೋಗಲು ಗಂಗಾಸಾಗರಸಂಗಮವು ಸಿಕ್ಕಿತು. ಅದನ್ನು ನೋಡಿ ಬ್ರಾಹ್ಮಣನನ್ನು ಕೇಳಿದನು.

೬. ಸ್ವಾಮಿ! ಆ ನೀಲಪರ್ವತವು ಇನ್ನೆಷ್ಟು ದೂರದಲ್ಲಿದೆ? ಎಂದನು.

೭. ಆ ರಾಜನ ಮಾತನ್ನು ಕೇಳಿ ಆಶ್ಚರ್ಯದಿಂದ ಬ್ರಾಹ್ಮಣನು ಇಂತೆಂದನು.

೮. ರಾಜನೇ! ಇದೇ ನೀಲಪರ್ವತದ ಜಾಗವು. ಮಹಾಪುಣ್ಯದ ಫಲವನ್ನು ಕೊಡುವ ಇದು ನಿನಗೇತಕ್ಕೆ ಕಾಣುವುದಿಲ್ಲ?

೯. ಇದೇ ಆ ನೀಲಪರ್ವತದ ಬೆಟ್ಟವು. ಪುರುಷೋತ್ತಮನ ಆವಾಸಸ್ಥಾನವು. ಅದೇಕೆ ಕಾಣುವುದಿಲ್ಲ? ಎಂದು ಪದೇಪದೇ ಕೇಳಿದನು.

**ಅತ್ರ ಸ್ನಾತಂ ಮಯಾ ಸಮ್ಯಗತ್ರ ಭಿಲ್ಲಾಕ್ಷಿಗೋಚರಾಃ ।**
**ಅನೇನೈವ ಪಥಾ ರಾಜನ್ನಾರೂಢಃ ಪರ್ವತೋಪರಿ　　॥ ೧೦ ॥**

**ಇತಿ ವಾಕ್ಯಂ ಸಮಾಕರ್ಣ್ಯ ವಿವ್ಯಥೇ ಮಾನಸೇ ನೃಪಃ ।**
**ನೀಲಭೂಧರದರ್ಶಾಯ ಕುರ್ವನ್ನುತ್ಕಂಠಿತಂ ಮನಃ　　॥ ೧೧ ॥**

**ಉವಾಚ ಚ ಕಥಂ ವಿಪ್ರ ದೃಶ್ಯೇತ ಪುರುಷೋತ್ತಮಃ ।**
**ಕಥಂ ವಾ ದೃಶ್ಯತೇ ನೀಲಸ್ತಮುಪಾಯಂ ವದಸ್ವ ನಃ　　॥ ೧೨ ॥**

**ತದಾ ವಾಕ್ಯಂ ಸಮಾಕರ್ಣ್ಯ ರತ್ನಗ್ರೀವಸ್ಯ ಭೂಪತೇಃ ।**
**ತಾಪಸಬ್ರಾಹ್ಮಣೋ ವಾಕ್ಯಮುವಾಚ ನೃಪ ವಿಸ್ಮಿತಃ　　॥ ೧೩ ॥**

**ಗಂಗಾಸಾಗರಸಂಯೋಗೇ ಸ್ನಾತ್ವಾಸ್ಮಾಭಿರ್ಮಹೀಪತೇ ।**
**ಸ್ಥಾತವ್ಯಂ ತಾವದೇವಾತ್ರ ಯಾವನ್ನೀಲೋ ನ ದೃಶ್ಯತೇ　　॥ ೧೪ ॥**

**ಗೀಯತೇ ಪಾಪಹಾ ದೇವಃ ಪುರುಷೋತ್ತಮಸಂಜ್ಞಿತಃ ।**
**ಕರಿಷ್ಯತೇ ಕೃಪಾಮಾಶು ಭಕ್ತವತ್ಸಲನಾಮಭೃತ್　　॥ ೧೫ ॥**

---

೧೦. ಇಲ್ಲೇ ಸ್ನಾನಮಾಡಿದೆನು. ಇಲ್ಲಿ ಭಿಲ್ಲರು ಕಂಡರು. ಈ ದಾರಿಯಿಂದಲೇ ಬೆಟ್ಟವನ್ನು ಹತ್ತಿದೆನು.

೧೧. ಆ ನೀಲಪರ್ವತವನ್ನು ನೋಡಲು ಆಶೆಪಟ್ಟು, ಈ ಮಾತನ್ನು ಕೇಳಿ ಮನಸ್ಸಿನಲ್ಲಿಯೇ ರಾಜನು ವ್ಯಥೆಪಟ್ಟನು.

೧೨. ಎಲೈ ! ಬ್ರಾಹ್ಮಣನೇ ಪುರುಷೋತ್ತಮನು ಹೇಗೆ ಕಾಣುತ್ತಾನೆ? ನೀಲಪರ್ವತವು ತಾನೆ ಹೇಗೆ ಕಾಣುತ್ತದೆ? ಅದಕ್ಕೆ ಉಪಾಯವನ್ನು ಹೇಳು.

೧೩. ಆ ಬ್ರಾಹ್ಮಣನು ರತ್ನಗ್ರೀವನ ಮಾತನ್ನು ಕೇಳಿ ಆಶ್ಚರ್ಯದಿಂದ ಇಂತೆಂದನು.

೧೪. ಈ ಗಂಗಾಸಾಗರ ಸಂಗಮದಲ್ಲಿ ಸ್ನಾನಮಾಡಿ ನೀಲಪರ್ವತವು ಕಾಣುವವರೆಗೂ ಕುಳಿತಿರಬೇಕು.

೧೫. ಅಲ್ಲಿಯವರೆಗೂ ಆ ಪುರುಷೋತ್ತಮನನ್ನು ಧ್ಯಾನಿಸುತ್ತಿರಬೇಕು. ಭಕ್ತವತ್ಸಲನಾದ ಸ್ವಾಮಿಯು ಜಾಗ್ರತೆಯಾಗಿ ಕೃಪೆಮಾಡುತ್ತಾನೆ.

ತ್ಯಜತ್ಯಸೌ ನ ವಾ ಭಕ್ತಾನ್ ದೇವದೇವಶಿರೋಮಣಿಃ ।
ಅನೇಕೇ ರಕ್ಷಿತಾ ಭಕ್ತಾಸ್ತದ್ಗಾಯಸ್ವ ಮಹಾಮತೇ ॥ ೧೬ ॥

ಇತಿ ವಾಕ್ಯಂ ಸಮಾಕರ್ಣ್ಯ ರಾಜಾ ವ್ಯಥಿತಚೇತಸಾ ।
ಸ್ನಾತ್ವಾ ಗಂಗಾಬ್ಧಿಸಂಯೋಗೇ ತತೋಽನಶನಮಾದಧಾತ್ ॥ ೧೭ ॥

ಕರಿಷ್ಯತಿ ಕೃಪಾಂ ಯರ್ಹಿ ದರ್ಶನೇ ಪುರುಷೋತ್ತಮಃ ।
ಪೂಜಾಂ ಕೃತ್ವಾಽಶನಂ ಕುರ್ಯಾಮನ್ಯಥಾಽನಶನಂ ವ್ರತಂ ॥ ೧೮ ॥

ಇತಿ ಕೃತ್ವಾ ಸ ನಿಯಮಂ ಗಂಗಾಸಾಗರರೋಧಸಿ ।
ಗಾಯನ್ ಹರಿಗುಣಗ್ರಾಮಮುಪವಾಸಮಥಾಚರತ್ ॥ ೧೯ ॥

ಜಯ ದೀನದಯಾಕರ ಪ್ರಭೋ
ಜಯ ದುಃಖಾಪಹ ಮಂಗಳಾಹ್ವಯ ।
ಜಯ ಭಕ್ತಜನಾರ್ತಿನಾಶಕ-
ಕೃತವಷ್ಮರ್ನ್ ಜಯ ದುಷ್ಟಘಾತಕ ॥ ೨೦ ॥

---

೧೬. ದೇವದೇವನು ಭಕ್ತರನ್ನು ಬಿಡುವುದಿಲ್ಲ. ಅನೇಕರನ್ನು ಕಾಪಾಡಿದ್ದಾನೆ. ಆದ್ದರಿಂದ ಅವನನ್ನು ಸ್ತೋತ್ರಮಾಡು.

೧೭. ಈ ಮಾತನ್ನು ಕೇಳಿ ರಾಜನು ದುಃಖಿಗೊಂಡು ಗಂಗಾಸಾಗರ ಸಂಗಮದಲ್ಲಿ ಸ್ನಾನಮಾಡಿ ಉಪವಾಸಮಾಡಿದನು.

೧೮. ಪುರುಷೋತ್ತಮನು ದರ್ಶನಕೊಟ್ಟರೆ ಪೂಜೆಮಾಡಿ ಊಟಮಾಡುತ್ತೇನೆ. ಇಲ್ಲದಿದ್ದರೆ ಅನಶನವಿರುತ್ತೇನೆ.

೧೯. ಈ ರೀತಿಯಾಗಿ ನಿಯಮಮಾಡಿಕೊಂಡು ಆ ಸಂಗಮದ ದಡದಲ್ಲಿ ಹರಿಗುಣಗಳನ್ನು ಗಾನಮಾಡುತ್ತ ಉಪವಾಸಮಾಡಿದನು.

೨೦. ದೀನರಲ್ಲಿ ದಯವಿಟ್ಟಿರುವವನೇ, ನಿನಗೆ ಜಯವಾಗಲಿ. ದುಃಖವನ್ನು ನಾಶಮಾಡುವವನೇ ನಿನಗೆ ಜಯವಾಗಲಿ. ಭಕ್ತರ ಕಷ್ಟವನ್ನು ನಾಶಮಾಡುವವನೇ, ನಿನಗೆ ಜಯವಾಗಲಿ. ಮಂಗಳಮೂರ್ತಿಯನ್ನು ಹೊಂದಿದವನೇ, ನಿನಗೆ ಜಯವಾಗಲಿ. ದುಷ್ಟರನ್ನು ನಾಶಮಾಡುವವನೇ, ನಿನಗೆ ಜಯವಾಗಲಿ.

ಅಂಬರೀಷಮಥ ವೀಕ್ಷ್ಯ ದುಃಖಿತಂ
ವಿಪ್ರಶಾಪಹತಸರ್ವಮಂಗಳಂ ।
ಧಾರಯನ್ನಿಜಕರೇ ಸುದರ್ಶನಂ
ಸ್ವಂ ರರಕ್ಷ ಜಠರಾಧಿವಾಸತಃ ॥ ೨೧ ॥

ದೈತ್ಯರಾಜಪಿತೃಕಾರಿತವ್ಯಥಃ
ಶೂಲಪಾಶಜಲವಹ್ನಿಪಾತನೈಃ ।
ಶ್ರೀ ನೃಸಿಂಹತನುಧಾರಿಣಾ ತ್ವಯಾ
ರಕ್ಷಿತಸ್ಸಪದಿ ಪಶ್ಯತಃ ಪಿತುಃ ॥ ೨೨ ॥

ಗ್ರಾಹವಕ್ತ್ರಪತಿತಾಂಘ್ರಿಮುದ್ಭಟಂ
ವಾರಣೇಂದ್ರಮತಿದುಃಖಪೀಡಿತಂ ।
ವೀಕ್ಷ್ಯ ಸಾಧು ಕರುಣಾರ್ದ್ರಮಾನಸ-
ಸ್ತ್ವಂ ಗರುತ್ಮತಿ ಕೃತಾರುಹಕ್ರಿಯಃ ॥ ೨೩ ॥

ತ್ಯಕ್ತಪಕ್ಷಿಪತಿರಾತ್ತಚಕ್ರಕೋ
ವೇಗಕಂಪಯುತಮಾಲಿಕಾಂಬರಃ ।
ಗೀಯಸೇಽಸುಭಿರಮುಷ್ಯ ನಕ್ರತೋ
ಮೋಚಕಸ್ಸಪದಿ ತದ್ವಿನಾಶಕಃ ॥ ೨೪ ॥

---

೨೧. ಬ್ರಾಹ್ಮಣ ಶಾಪವನ್ನು ಹೊಂದಿ, ಸಮಸ್ತವನ್ನು ನಾಶಮಾಡಿಕೊಂಡು ಅಂಬರೀಷನು ನಿನ್ನನ್ನು ಮರೆಹೋಗಲು, ನೀನು ಚಕ್ರವನ್ನು ಹಿಡಿದುಕೊಂಡು ಅವನ ಹೆಂಡತಿಯ ಹೊಟ್ಟೆಯಲ್ಲಿದ್ದುಕೊಂಡು ಅವನನ್ನು ಕಾಪಾಡಿದೆ.

೨೨. ಪ್ರಹ್ಲಾದನಿಗೆ ತನ್ನ ತಂದೆಯಾದ ಹಿರಣ್ಯಕಶಿಪುವು ಬಹು ತೊಂದರೆಯನ್ನು ಕೊಡುತ್ತಿರಲು, ನರಸಿಂಹಾವತಾರದಿಂದ ಆತನನ್ನು ಕಾಪಾಡಿದೆ.

೨೩. ಗಜರಾಜನು ಮೊಸಳೆಗೆ ಸಿಕ್ಕಿಕೊಂಡು ದುಃಖಪಡುತ್ತ ನಿನ್ನನ್ನು ಧ್ಯಾನಿಸಲು, ಕರುಣೆಯಿಂದ ಗರುಡನ ಮೇಲೆ ಬಂದು ಆತನನ್ನು ಕಾಪಾಡಿದೆ.

೨೪. ಗರುಡನ ಮೇಲೆ ಬಂದು ಇಳಿದು ಚಕ್ರವನ್ನು ಹಿಡಿದು, ಆ ಮೊಸಳೆಯನ್ನು ಕೊಂದು, ಅದರ ಪ್ರಾಣವನ್ನುಳಿಸಿ ಅದರಿಂದ ಹೊಗಳಲ್ಪಟ್ಟೆ.

ಯತ್ರ ಯತ್ರ ತವ ಸೇವಕಾರ್ದನಂ
ತತ್ರ ತತ್ರ ಬತ ದೇಹಧಾರಿಣಾ ।
ಪಾಲ್ಯತೇಽತ್ರ ಭವತಾ ತ್ವಯಾ ನಿಜಃ
ಪಾಪಹಾರಿಚರಿತ್ರೈರ್ಮನೋಹರೈಃ ॥ ೨೫ ॥

ದೀನನಾಥ ಸುರಮೌಳಿಹೀರಕೋ-
ದ್ಘೃಷ್ಟಪಾದತಳ ಭಕ್ತವಲ್ಲಭ ।
ಪಾಪಕೋಟಿಪರದಾಹಕ ಪ್ರಭೋ
ದರ್ಶಯಸ್ವ ಮಮ ಪಾದಪಂಕಜಂ ॥ ೨೬ ॥

ಪಾಪಕೃದ್ಯದಿ ಜನೋಽಹಮಾಗತೋ
ಮಾನಸೇ ತವ ತಥಾ ಹಿ ದರ್ಶಯ ।
ತಾವಕಾ ವಯಮಘೌಘನಾಶನ
ವಿಸ್ಮೃತಂ ನ ಹಿ ಸುರಾಸುರಾರ್ಚಿತ ॥ ೨೭ ॥

ಯೇ ವದಂತಿ ತವ ನಾಮ ನಿರ್ಮಲಂ
ತೇ ತರಂತಿ ಸಕಲಾಘಸಾಗರಂ ।
ಸಚ್ಛ್ರುತಿರ್ಯದಿ ಕೃತಾ ತದಾ ಮಯಾ
ಪ್ರಾಪ್ಯತಾಂ ಸಕಲದುಃಖಹಾರಕ ॥ ೨೮ ॥

---

೨೫. ಎಲ್ಲೆಲ್ಲಿ ನಿನ್ನ ಭಕ್ತರಿಗೆ ತೊಂದರೆಯುಂಟಾಗುತ್ತದೋ ಅಲ್ಲಲ್ಲಿ ನೀನು ಬಂದು ಅವರನ್ನು ಕಾಪಾಡುತ್ತೀಯೆ.

೨೬. ದೀನಬಂಧುವೆ! ದೇವತೆಗಳಿಂದ ನಮಸ್ಕರಿಸಲ್ಪಟ್ಟವನೇ! ಭಕ್ತವತ್ಸಲನೇ! ಪಾಪನಾಶಕನೆ! ನಿನ್ನ ಪಾದದರ್ಶನವನ್ನು ಕೊಡು.

೨೭. ನಾನು ಪಾಪಿಯಾದವನು ಬಂದಿರುವೆನೆಂದು ನೀನು ತಿಳಿದಿದ್ದರೆ ಪಾಪನಾಶಕವಾದ ನಿನ್ನ ಸ್ಮರಣೆಯನ್ನು ಬಿಟ್ಟಿಲ್ಲ. ಸ್ವರೂಪವನ್ನು ತೋರಿಸು. ನಾವು ನಿನ್ನ ಸೇವಕರು ಬಂದಿದ್ದೇವೆ.

೨೮. ನಿನ್ನ ನಾಮಸ್ಮರಣೆಯನ್ನು ಮಾಡಿದವರು ಪಾಪದಿಂದ ಮುಕ್ತರಾಗುತ್ತಾರೆ. ಎಂಬ ವೇದದ ಮಾತು ನಿಜವಾದರೆ ದುಃಖಹಾರಕನಾದ ನೀನು ದರ್ಶನ ಕೊಡು.

॥ ಸುಮತಿರುವಾಚ

ಏವಂ ಗಾಯನ್ಗುಣಾನ್ ರಾತ್ರೌ ದಿವಾಪಿ ಚ ಮಹೀಪತಿಃ ।
ಕ್ಷಣಮಾತ್ರಂ ನ ವಿಶ್ರಾಂತೋ ನಿದ್ರಾಮಾಪ ನ ವೈ ಸುಖಂ ॥ ೨೯ ॥

ಗಾಯನ್ಗಚ್ಛನ್ಗುಣಾಂಸ್ತಿಷ್ಠನ್ ವದತ್ಯೇತದಹರ್ನಿಶಂ ।
ದರ್ಶಯಸ್ವ ಕೃಪಾನಾಥ ಸ್ವತನುಂ ಪುರುಷೋತ್ತಮ ॥ ೩೦ ॥

ಏವಂ ರಾಜ್ಞಃ ಪಂಚದಿನಂ ಗತಂ ಗಂಗಾಬ್ಧಿಸಂಗಮೇ ।
ತದಾ ಕೃಪಾಬ್ಧಿಃ ಕೃಪಯಾ ಚಿಂತಯಾಮಾಸ ಗೋಪತಿಃ ॥ ೩೧ ॥

ಅಸೌ ರಾಜಾ ಮದೀಯೇನ ಗಾನೇನ ವಿಗತಾಘಕಃ ।
ಪಶ್ಯತಾನ್ಮಾಮಕೀಂ ಪ್ರೇಷ್ಠಾಂ ಸುರಾಸುರನಮಸ್ಕೃತಾಂ ॥ ೩೨ ॥

ಇತಿ ಸಂಚಿಂತ್ಯ ಭಗವಾನ್ ಕೃಪಾಪೂರಿತಮಾನಸಃ ।
ಸನ್ಯಾಸಿವೇಷಮಾಸ್ಥಾಯ ಯಯೌ ರಾಜ್ಞೋಂತಿಕಂ ವಿಭುಃ ॥ ೩೩ ॥

---

೨೯. ಸುಮತಿಯು ಹೇಳಿದನು :—ಹೀಗೆ ಆತನ ಗುಣಗಳನ್ನು ಗಾನ ಮಾಡುತ್ತ ರಾತ್ರಿಹಗಲೂ ಆ ರಾಜನು ವಿಶ್ರಾಂತಿ, ನಿದ್ರೆ, ಸುಖಗಳನ್ನು ಹೊಂದಲೇ ಇಲ್ಲ.

೩೦. ಗಾನಮಾಡುತ್ತ ಹೋಗುತ್ತ ಬರುತ್ತ ಕೂಡುತ್ತ ನಿಲ್ಲುತ್ತ ಸದಾ ಕಾಲದಲ್ಲಿಯೂ ಆತನ ಗುಣಗಳನ್ನೇ ಹೇಳುತ್ತ, ನಿನ್ನ ದರ್ಶನವನ್ನು ಕೊಡು, ಎನ್ನುತ್ತಿದ್ದನು.

೩೧. ಹೀಗೆ ಆ ಗಂಗಾಸಾಗರಸಂಗಮದಲ್ಲಿ ಐದು ದಿನ ಕಳೆಯಿತು. ಆಗ ಸ್ವಾಮಿಯು ಹೀಗೆಂದು ಯೋಚಿಸಿದನು.

೩೨. ಈ ರಾಜನು ನನ್ನ ಗುಣಗಾನದಿಂದ ಪಾಪವನ್ನು ಕಳೆದುಕೊಂಡು ಇದ್ದಾನೆ. ದೇವದಾನವರಿಂದ ನಮಸ್ಕೃತವಾದ ನನ್ನ ಮೂರ್ತಿಯನ್ನು ನೋಡಲಿ.

೩೩. ಹೀಗೆ ಯೋಚಿಸಿ ಭಗವಂತನು ಕೃಪೆಮಾಡಿ ಸನ್ಯಾಸಿವೇಷವನ್ನು ಹೊಂದಿ ರಾಜನ ಬಳಿಗೆ ಬಂದನು.

ತತ್ರ ಗತ್ವಾ ಮಹಾರಾಜ ತ್ರಿದಂಡೀ ಯತಿವೇಷಧೃಕ್ ।
ಭಕ್ತ್ಯಾನುಕಂಪಯಾ ಪ್ರಾಪ್ತೋ ವೀಕ್ಷಿತಸ್ತಾಪಸೇನ ಹಿ ॥ ೩೪ ॥

ಓಂ ನಮೋ ವಿಷ್ಣವೇತ್ಯುಕ್ತ್ವಾ ನಮಶ್ಚಕ್ರೇ ನೃಪೋತ್ತಮಃ ।
ಅರ್ಘ್ಯೈಃ ಪಾದ್ಯಾಸನೈಃ ಪೂಜಾಂ ಚಕಾರ ಹರಿಮಾನಸಃ ॥ ೩೫ ॥

ಉವಾಚ ಭಾಗ್ಯಮತುಲಂ ಯದ್ಭವಾನಕ್ಷಿಗೋಚರಃ ।
ಅತಃ ಪರಂ ದಾಸ್ಯತೇ ನೋ ಗೋವಿಂದೋ ನಿಜದರ್ಶನಂ ॥ ೩೬ ॥

ಇತಿ ಶ್ರುತ್ವಾ ತು ತದ್ವಾಕ್ಯಂ ಸನ್ಯಾಸೀ ನಿಜಗಾದ ತಂ ।
ರಾಜನ್ ಶೃಣುಷ್ವ ಕಥಿತಂ ಮಮ ವಾಕ್ಯಂ ವಿನಿಸ್ಸೃತಂ ॥ ೩೭ ॥

ಅಹಂ ಜ್ಞಾನೇನ ಜಾನಾಮಿ ಭೂತಂ ಭವ್ಯಂ ಭವಚ್ಚ ಯತ್ ।
ತಸ್ಮಾದಹಂ ಬ್ರುವೇ ಕಿಂಚಿಚ್ಛೃಣುಷ್ವೈಕಾಗ್ರಮಾನಸಃ ॥ ೩೮ ॥

ಶ್ವೋ ಮಧ್ಯಾಹ್ನೇ ಹರಿರ್ದಾತಾ ದರ್ಶನಂ ಬ್ರಹ್ಮದುರ್ಲಭಂ ।
ಪಂಚಭಿಸ್ಸ್ವಜನೈಸ್ಸಾಕಂ ಯಾಸ್ಯಸೇ ಪರಮಂ ಪದಂ ॥ ೩೯ ॥

---

೩೪. ಹೀಗೆ ತ್ರಿದಂಡಿಯಾಗಿ ಅಲ್ಲಿಗೆ ಹೋಗಲು ಆ ತಾಪಸನು ಅವನನ್ನು ನೋಡಿದನು.

೩೫. "ಓಂ ನಮೋ ವಿಷ್ಣವೇ" ಎಂದು ಹೇಳಿ ರಾಜನು ನಮಸ್ಕರಿಸಿದನು. ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು.

೩೬. ನಿನ್ನನ್ನು ನೋಡಿದುದು ನನ್ನ ಮಹಾಭಾಗ್ಯವು. ನಿನ್ನ ದರ್ಶನವಾದ ಮೇಲೆ ಗೋವಿಂದನು ನಿಶ್ಚಯವಾಗಿಯೂ ದರ್ಶನವನ್ನು ಕೊಡುತ್ತಾನೆ ಎಂದನು.

೩೭. ಈ ಮಾತನ್ನು ಕೇಳಿ ಸನ್ಯಾಸಿಯು ರಾಜನೇ! ನಾನು ಹೇಳುವುದನ್ನು ಕೇಳು, ಎಂದನು.

೩೮. ರಾಜನೇ, ನಾನು ಜ್ಞಾನದೃಷ್ಟಿಯಿಂದ ಭೂತಭವಿಷ್ಯದ್ವರ್ತಮಾನಗಳನ್ನು ಬಲ್ಲೆನು. ಆದ್ದರಿಂದ ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೩೯. ನಾಳೆ ಮಧ್ಯಾಹ್ನ ಹರಿಯು ಬಂದು ದರ್ಶನಕೊಡುತ್ತಾನೆ. ನೀನು ಪರಮಪದವನ್ನು ಐದು ಜನಗಳೊಂದಿಗೆ ಹೊಂದುತ್ತೀಯೆ

ತ್ವಮಮಾತ್ಯಶ್ಚ ಮಹಿಳಾ ತವ ತಾಪಸಬಾಡಬಃ ।
ಪುರೇ ತವ ಕರಂಬಾಖ್ಯಃ ಸಾಧುಶ್ಚ ತಂತುವಾಯಕಃ ॥ ೪೦ ॥

ಏತೈಸ್ತ್ವಂ ಪಂಚಭಿಸ್ತಸ್ಮಿನ್ನೀಲೇ ಪರ್ವತಸತ್ತಮೇ ।
ಯಾಸ್ಯಸೇ ಬ್ರಹ್ಮದೇವೇಂದ್ರವಂದಿತೇ ಸುರಪೂಜಿತೇ ॥ ೪೧ ॥

ಇತ್ಯುಕ್ತ್ವಾಽದೃಶ್ಯತಾಂ ಪ್ರಾಪ್ತೋ ಯತಿಃ ಕ್ವಾಪಿ ನ ದೃಶ್ಯತೇ ।
ತದಾಕರ್ಣ್ಯ ನೃಪೋ ಹರ್ಷಂ ಪ್ರಾಪ ಚಾಶು ಸವಿಸ್ಮಯಂ ॥ ೪೨ ॥

॥ ರಾಜೋವಾಚ ॥

ಸ್ವಾಮಿನ್ ಕೋಽಸೌ ಸಮಾಗತ್ಯ ಸನ್ಯಾಸೀ ಮಾಂ ಯದೂಚಿವಾನ್ ।
ನ ದೃಶ್ಯತೇ ಪುನಃ ಕುತ್ರ ಗತೋಽಸೌ ಚಿತ್ತಹರ್ಷದಃ ॥ ೪೩ ॥

॥ ತಾಪಸ ಉವಾಚ ॥

ರಾಜಂಸ್ತವ ಮಹಾಪ್ರೇಮ್ಣಾಽಕೃಷ್ಟಚಿತ್ತಸ್ಸಮಭ್ಯಗಾತ್ ।
ಪುರುಷೋತ್ತಮನಾಮಾಯಂ ಸರ್ವಪಾಪಪ್ರಣಾಶನಃ ॥ ೪೪ ॥

---

೪೦-೪೧. ನೀನು, ನಿನ್ನ ಮಂತ್ರಿ, ನಿನ್ನ ಹೆಂಡತಿ, ಬ್ರಾಹ್ಮಣತಾಪಸ, ನಿನ್ನ ಊರಿನ ಕರಂಬನೆಂಬ ನೆಯ್ಗೆಯವನು. ಈ ಐದು ಜನಗಳೊಂದಿಗೆ ಆ ನೀಲಪರ್ವತವನ್ನು ಹೊಂದುತ್ತೀಯೆ.

೪೨. ಹೀಗೆ ಹೇಳಿ ಆ ಋಷಿಯು ಅದೃಶ್ಯನಾದನು. ರಾಜನು ಕೇಳಿ ಸಂತೋಷಪಟ್ಟನು.

೪೩. ರಾಜನು ಹೇಳಿದನು:—ಸ್ವಾಮಿಾ, ನನ್ನ ಬಳಿಗೆ ಬಂದು ಮಾತನಾಡಿದ ಆ ಸನ್ಯಾಸಿಯಾರು? ಅವನೆಲ್ಲಿ ಹೋದನೆಂದೇ ಗೊತ್ತಾಗಲಿಲ್ಲವಲ್ಲ?

೪೪. ತಾಪಸನು ಹೇಳಿದನು:—ರಾಜನೇ, ನಿನ್ನಲ್ಲಿರುವ ಪ್ರೇಮದಿಂದ ಆ ಪುರುಷೋತ್ತಮನು ಇಲ್ಲಿಗೆ ಬಂದಿದ್ದನು.

ಶ್ವೋ ಮಧ್ಯಾಹ್ನೇ ಪುರೋ ಭಾವೀ ಭವಿಷ್ಯತಿ ಮಹಾಗಿರಿಃ ।
ತಮಾರುಹ್ಯ ಹರಿಂ ದೃಷ್ಟ್ವಾ ಕೃತಾರ್ಥಸ್ತ್ವಂ ಭವಿಷ್ಯಸಿ ॥ ೪೫ ॥

ಇತಿ ವಾಕ್ಯಸುಧಾಪೂರನಾಶಿತಸ್ವಾಂತ ಸಂಜ್ವರಃ ।
ಹರ್ಷಂ ಯಮಾಪ ಸ ನೃಪೋ ಬ್ರಹ್ಮಾಪಿ ನ ಹಿ ವೇತ್ತಿ ತಂ ॥ ೪೬ ॥

ತದಾ ದುಂದುಭಯೋ ನೇದುರ್ವೀಣಾಪಣವಗೋಮುಖಾಃ ।
ಮಹಾನಂದಸ್ತದಾ ಹ್ಯಾಸೀದ್ರಾಜರಾಜಸ್ಯ ಚೇತಸಿ ॥ ೪೭ ॥

ಗಾಯನ್ ಹರಿಂ ಕ್ಷಣಂ ತಿಷ್ಠನ್ನೃತ್ಯನ್ ಜಲ್ಪನ್ ಹಸನ್ಬ್ರುವನ್ ।
ಆನಂದಂ ಪ್ರಾಪ ಸುಘನಂ ಸರ್ವಸಂತಾಪನಾಶನಂ ॥ ೪೮ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಸನ್ಯಾಸಿದರ್ಶನಂ ನಾಮ ಏಕವಿಂಶೋಽಧ್ಯಾಯಃ**

---

೪೫. ನಾಳೆ ಮಧ್ಯಾಹ್ನಕ್ಕೆ ಆ ನೀಲಪರ್ವತವು ಕಾಣಿಸುತ್ತದೆ. ಅದನ್ನು ಹತ್ತಿ ಹರಿಯನ್ನು ನೋಡಿ ಕೃತಾರ್ಥನಾಗುತ್ತೀಯೆ.

೪೬. ಈ ಮಾತನ್ನು ಕೇಳಿ ದುಃಖಹೋಗಿ ಅವನು ಹೊಂದಿದ ಸಂತೋಷವನ್ನು ಆ ಬ್ರಹ್ಮನೂ ತಿಳಿಯಲಾರನು.

೪೭. ಆಗ ದೇವದುಂದುಭಿಗಳು ವೀಣೆ ಮುಂತಾದುವು ಧ್ವನಿಗೈದುವು. ಆ ರಾಜನ ಮನಸ್ಸಿನಲ್ಲಿ ಬಹು ಸಂತೋಷವಾಯಿತು.

೪೮. ಸಮಸ್ತ ದುಃಖವನ್ನು ನಾಶಮಾಡುವ ಸ್ವಾಮಿಯನ್ನು ನೋಡಿದುದರಿಂದ ಆ ರಾಜನು ಸಂತೋಷಸಮುದ್ರದಲ್ಲಿ ಮುಳುಗಿ, ಕ್ಷಣಕಾಲ ಹಾಗೆಯೇ ನಿಂತು ಗಾನಗಳಿಂದಲೂ, ಸ್ತೋತ್ರಗಳಿಂದಲೂ, ವಾಕ್ಯಗಳಿಂದಲೂ ಆ ಹರಿಯನ್ನು ಸ್ತೋತ್ರ ಮಾಡುತ್ತಾ ಮಹದಾನಂದವನ್ನು ಹೊಂದಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ಸನ್ಯಾಸಿದರ್ಶನವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದ್ವಾವಿಂಶೋಽಧ್ಯಾಯಃ

॥ ಸುಮತಿರುವಾಚ ॥

**ಅಥ ಸರ್ವದಿನಂ ನೀತ್ವಾ ಹರಿಸ್ಮರಣಕೀರ್ತನೈಃ ।**
**ರಾತ್ರೌ ಸುಷ್ವಾಪ ಗಂಗಾಯಾ ರೋಧಸ್ಯುರುಫಲಪ್ರದೇ ॥ ೧ ॥**

**ದದರ್ಶ ಸ್ವಪ್ನಮಧ್ಯೇ ತು ಸ ಸ್ವಾತ್ಮಾನಂ ಚತುರ್ಭುಜಂ ।**
**ಶಂಖಚಕ್ರಗದಾಪದ್ಮಶಾಂರ್ಙ್ಗಕೋದಂಡಧಾರಿಣಂ ॥ ೨ ॥**

**ನೃತ್ಯಂತಂ ಪುರುಷೋತ್ತಮಸ್ಯ ಪುರತಃ ಶರ್ವಾದಿದೇವೈಸ್ಸಹ**
**ಶ್ರೀಮದ್ಭಿಸ್ಸ್ವತನೂಯುಕ್ತೈರರಿಗದಾಂಬೂಜಾಬ್ಜಹೇತ್ಯಾದಿಭಿಃ ।**
**ವಿಷ್ವಕ್ಸೇನವರೈರ್ಗಣೈಃ ಸ್ವತನುಭಿಶ್ರೀಶಂ ಸದೋಪಾಸಿತಂ**
**ದೃಷ್ಟ್ವಾ ವಿಸ್ಮಯಮಾಪ ಲೋಕವಿಷಯಂ ಹರ್ಷಂ ತಥಾತ್ಯದ್ಭುತಂ ॥ ೩ ॥**

---

## ಇಪ್ಪತ್ತೆರಡನೆಯ ಅಧ್ಯಾಯವು

೧. ಸುಮತಿಯು ಹೇಳಿದನು:—ಹರಿಕೀರ್ತನೆಯಿಂದ ಆ ದಿನವೆಲ್ಲವನ್ನೂ ಕಳೆದು, ರಾತ್ರಿಯಲ್ಲಿ ಆ ಗಂಗಾನದಿಯ ದಡದಲ್ಲಿಯೇ ಇದ್ದು ರಾತ್ರಿಯನ್ನು ಕಳೆದನು

೨. ನಿದ್ದೆಯ ಮಧ್ಯದಲ್ಲಿ ಸ್ವಪ್ನವಾಗಲು ಅದರಲ್ಲಿ ತನ್ನನ್ನು ಚತುರ್ಭುಜವನ್ನು ಹೊಂದಿದಂತೆಯೂ ಶಂಖಚಕ್ರಗದಾದಿಗಳನ್ನು ಹೊಂದಿದಂತೆಯೂ ಕಂಡನು.

೩. ಸ್ವಾಮಿಯ ಎದುರಿನಲ್ಲಿ ಶರ್ವಾದಿಗಳೊಡನೆ ತಾನು ಚತುರ್ಭುಜವನ್ನು ಹೊಂದಿ, ಅದರಲ್ಲಿ ವಿಷ್ಣುವಿನ ಆಯುಧಗಳನ್ನು ಹಿಡಿದು ವಿಷ್ವಕ್ಸೇನನೊಡನೆಯೂ ಕುಣಿಯುತ್ತ ಅವನನ್ನು ಆರಾಧಿಸುತ್ತಿರುವುದನ್ನು ಕಂಡು ಆಶ್ಚರ್ಯಹೊಂದಿದನು.

ದದತಂ ಮನಸೋಽಭೀಷ್ಟಂ ಪುರಷೋತ್ತಮಸಂಜ್ಞಿತಂ ।
ಆತ್ಮಾನಂ ಚ ಕೃಪಾಪಾತ್ರಮಮನ್ಯತ ಮಹಾಮತಿಃ ॥ ೪ ॥

ಇತ್ಯೇವಂ ಸ್ವಪ್ನವಿಷಯೇ ದದರ್ಶ ನೃಪಸತ್ತಮಃ ।
ಪ್ರಾತಃ ಪ್ರಬುದ್ಧೋ ವಿಪ್ರಾಯ ಜಗಾದ ಸ್ವಪ್ನವೀಕ್ಷಿತಂ ॥ ೫ ॥

ತಚ್ಛ್ರುತ್ವಾ ಬಾಡಬೋ ಧೀಮಾನ್ ಕಥಯಾಮಾಸ ವಿಸ್ಮಿತಃ ।
ರಾಜಂಸ್ತ್ವಯಾಸೌ ದೃಷ್ಟೋ ಯಃ ಪುರುಷೋತ್ತಮಸಂಜ್ಞಿತಃ ॥ ೬ ॥

ದಾಸ್ಯತೇ ಶಂಖಚಕ್ರಾದಿಚಿಹ್ನಿತಾಂ ಸ್ವತನುಂ ಹರಿಃ ।
ಇತಿ ಶ್ರುತ್ವಾ ತು ತದ್ವಾಕ್ಯಂ ರತ್ನಗ್ರೀವೋ ಮಹಾಮನಾಃ ॥ ೭ ॥

ದಾಪಯಾಮಾಸ ದಾನಾನಿ ದೀನಾನಾಂ ಮಾನಸೋಚಿತಂ ।
ಸ್ನಾತ್ವಾ ಗಂಗಾಬ್ಧಿಸಂಯೋಗೇ ತರ್ಪಯಿತ್ವಾ ಪಿತೄನ್ಸುರಾನ್ ॥ ೮ ॥

ಗಾಯನ್ ಹರಿಗುಣಗ್ರಾಮಂ ಪ್ರತ್ಯೈಕ್ಷತ ಚ ದರ್ಶನಂ ।
ತತೋ ಮಧ್ಯಾಹ್ನಸಮಯೇ ದಿವಿ ದುಂದುಭಯೋ ಮುಹುಃ ॥ ೯ ॥

---

೪. ಇಷ್ಟವಾದುದನ್ನು ಕೊಡುವಂತಿರುವ ಸ್ವಾಮಿಯನ್ನು ಅವನ ಕೃಪೆಗೆ ತಾನು ಪಾತ್ರನಾದಂತಿರುವುದನ್ನು ನೋಡಿದನು.

೫. ಈ ರೀತಿಯಾದ ಸ್ವಪ್ನವನ್ನು ರಾಜನು ಕಂಡು ಎದ್ದು ಪ್ರಾತಃಕಾಲದಲ್ಲಿ ಸ್ವಪ್ನವಿಷಯವನ್ನು ಆ ಬ್ರಾಹ್ಮಣನಿಗೆ ತಿಳಿಸಿದನು.

೬. ಅದನ್ನು ಕೇಳಿ ಬ್ರಾಹ್ಮಣನು ಎಲೈ! ರಾಜನೇ, ನೀನು ಕಂಡವನು ಪುರುಷೋತ್ತಮನು. ಅವನು ತುಷ್ಟನಾಗಿ ನಿನಗೆ ಶಂಖಚಕ್ರಾದಿಗಳಿಂದ ಕೂಡಿದ ತನ್ನ ದೇಹವನ್ನು ಕೊಡುತ್ತಾನೆ ಎಂದು ಆಶ್ಚರ್ಯದಿಂದ ಹೇಳಿದನು.

೭-೮. ರತ್ನಗ್ರೀವನು ಈ ಮಾತನ್ನು ಕೇಳಿ ಮನಸ್ಸಿನಲ್ಲಿದ್ದ ದಾನಗಳನ್ನು ಬಡವರಿಗೂ ಕುಂಟಕುರುಡರಿಗೂ ಕೊಟ್ಟನು. ಗಂಗಾಸಾಗರಸಂಯೋಗದಲ್ಲಿ ಸ್ನಾನ ಮಾಡಿ, ಪಿತೃಗಳಿಗೆ ತರ್ಪಣಮಾಡಿ, ಹರಿಧ್ಯಾನವನ್ನು ಮಾಡುತ್ತಾ ದರ್ಶನವನ್ನು ಎದುರುನೋಡುತ್ತಿದ್ದನು.

೯-೧೦. ಆಮೇಲೆ ಮಧ್ಯಾಹ್ನದಲ್ಲಿ ಅಂತರಿಕ್ಷದಲ್ಲಿ ದೇವದುಂದುಭಿಗಳು

ಜಘ್ನುಸ್ಸುರಕರಾಘಾತಬಹುಶಬ್ದಸುಶಬ್ದಿತಾಃ ।
ಅಕಸ್ಮಾತ್ ಪುಷ್ಪವೃಷ್ಟಿಶ್ಚ ಬಭೂವ ನೃಪಮಸ್ತಕೇ ॥ ೧೦ ॥

ಧನ್ಯೋಽಸಿ ನೃಪವರ್ಯ ತ್ವಂ ನೀಲಂ ಪಶ್ಯಾಕ್ಷಿಗೋಚರಂ ।
ಶೃಣೋತೀತಿ ಯದಾ ವಾಕ್ಯಂ ನೃಪೋ ದೇವಪ್ರಣೋದಿತಂ ॥ ೧೧ ॥

ತದಾ ಸ ಸೂರ್ಯಕೋಟೀನಾಮಧಿಕಾಂತಿಧರೋ ದ್ಭುತಃ ।
ರಾಜ್ಞೋಽಕ್ಷಿಗೋಚರೋ ಜಾತೋ ನೀಲನಾಮಾ ಮಹಾಗಿರಿಃ ॥ ೧೨ ॥

ರಾಜತೈಃ ಕಾಂಚನೈಶ್ಶೃಂಗೈಸ್ಸಮಂತಾತ್ಪರಿರಾಜಿತಃ ।
ಕಿಮಗ್ನಿಃ ಪ್ರಜ್ವಲತ್ಯೇಷ ದ್ವಿತೀಯಃ ಕಿಮು ಭಾಸ್ಕರಃ ॥ ೧೩ ॥

ಕಿಮಯಂ ವೈದ್ಯುತಃ ಪುಂಜೋಽಹ್ಯಕಸ್ಮಾತ್ ಸ್ಥಿರಕಾಂತಿಧೃತ್ ।
ತಾಪಸಬ್ರಾಹ್ಮಣೋ ದೃಷ್ಟ್ವಾ ನೀಲಪ್ರಸ್ಥಂ ಪಶೋಭಿತಂ ॥ ೧೪ ॥

ರಾಜ್ಞೇ ನಿವೇದಯಾಮಾಸ ಏಷ ಪುಣ್ಯೋ ಮಹಾಗಿರಿಃ ।
ತುಚ್ಛ್ರುತ್ವಾ ನೃಪತಿಶ್ರೇಷ್ಠಃ ಶಿರಸಾ ಪ್ರಣನಾಮ ಹ ॥ ೧೫ ॥

---

ಮೊಳಗಿದವು. ಅನಿರೀಕ್ಷಿತವಾಗಿ ರಾಜನ ತಲೆಯ ಮೇಲೆ ಪುಷ್ಪವೃಷ್ಟಿಯಾಯಿತು.

೧೧. ಎಲೈ ರಾಜನೇ, ನೀನೇ ಧನ್ಯನು. ನೀಲಪರ್ವತವು ಕಣ್ಣಿಗೆ ಕಾಣುತ್ತಿದೆ. ನೋಡು, ಎಂದು ದೇವತೆಗಳು ಹೇಳಿದ ಮಾತನ್ನು ಕೇಳಿದನು.

೧೨. ಆಗ ಕೋಟಿಸೂರ್ಯರ ಕಾಂತಿಯುಳ್ಳ ನೀಲವೆಂಬ ಪರ್ವತವು ರಾಜನಿಗೆ ಕಂಡಿತು.

೧೩. ಬೆಳ್ಳಿ ಚಿನ್ನದ ಶಿಖರಗಳಿಂದ ಎಲ್ಲ ಕಡೆಯಲ್ಲೂ ಪ್ರಕಾಶಿಸುತ್ತಿದ್ದಿತು. ಅದನ್ನು ನೋಡಿ ಇದೇನು ಅಗ್ನಿಯೋ? ಎರಡನೆಯ ಸೂರ್ಯನೋ? ಅಥವಾ ಸ್ಥಿರತೆಯನ್ನು ಹೊಂದಿದ ಮಿಂಚುಗಳ ಗುಂಪೋ ಎನ್ನುವಂತೆ ಪ್ರಕಾಶಿಸುತ್ತಿದ್ದಿತು.

೧೪-೧೫. ಆ ತಾಪಸಬ್ರಾಹ್ಮಣನು ನೋಡಿ ಇದೇ ಆ ಬೆಟ್ಟವೆಂದು ರಾಜನಿಗೆ ತಿಳಿಸಿದನು. ಅದನ್ನು ಕೇಳಿ ರಾಜನು ತಲೆಯಿಂದ ನಮಸ್ಕರಿಸಿದನು.

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ನೀಲೋ ಮೇ ದೃಷ್ಟಿಗೋಚರಃ ।
ಅಮಾತ್ಯೋ ರಾಜಪತ್ನೀ ಚ ಕರಂಬಸ್ತಂತುವಾಯಕಃ ॥ ೧೬ ॥

ನೀಲದರ್ಶನಸಂಹೃಷ್ಟಾ ಬಭೂವುಃ ಪುರುಷರ್ಷಭ ।
ಪಂಚೈತೇ ವಿಜಯೇ ಕಾಲೇ ನೀಲಪರ್ವತಮಾರುಹನ್ ॥ ೧೭ ॥

ಮಹಾದುಂದುಭಿನಿರ್ಘೋಷಾನ್ ಶೃಣ್ವಂತೋ ಹ್ಯಮರೈಃ ಕೃತಾನ್ ।
ತಸ್ಯೋಪರಿತನೇ ಶೃಂಗೇ ಚಿತ್ರಪಾದಪರಾಜಿತೇ ॥ ೧೮ ॥

ದದರ್ಶ ಹಾಟಕಾಬದ್ಧಂ ದೇವಾಲಯಮನುತ್ತಮಂ ।
ಬ್ರಹ್ಮಾಗತ್ಯ ಸದಾ ಪೂಜಾಂ ಕರೋತಿ ಪರಮೇಷ್ಠಿನಃ ॥ ೧೯ ॥

ನೈವೇದ್ಯಂ ಕುರುತೇ ಯತ್ರ ಹರಿಸಂತೋಷಕಾರಕಂ ।
ದೃಷ್ಟ್ವಾಥ ತತ್ರ ವಿಮಲಂ ದೇವಾಯತನಮದ್ಭುತಂ ॥ ೨೦ ॥

ಪ್ರವಿವೇಶ ಪರೀವಾರೈಃ ಪಂಚಭಿಸ್ಸಹ ಸಂವೃತಃ ।
ತತ್ರ ದೃಷ್ಟ್ವಾ ಜಾತರೂಪೇ ಮಹಾಮಣಿವಿಚಿತ್ರಿತೇ ॥ ೨೧ ॥

---

೧೬-೧೭. ನೀಲಪರ್ವತವು ಕಂಡುದರಿಂದ ಧನ್ಯನಾದೆನು. ಕೃತಕೃತ್ಯನಾದೆನು ಎಂದನು. ಆ ಮಂತ್ರಿ, ರಾಜನ ಹೆಂಡತಿ, ಕರಂಬನೆಂಬ ನೆಯ್ಗೆಯವನು, ರಾಜ, ಈ ತಾಪಸಬ್ರಾಹ್ಮಣ ಐವರೂ ಪರ್ವತವನ್ನು ನೋಡಿ ಸಂತೋಷಪಟ್ಟು ವಿಜಯವೆಂಬ ಮುಹೂರ್ತದಲ್ಲಿ ಪರ್ವತವನ್ನು ಹತ್ತಿದರು.

೧೮. ದೇವತೆಗಳು ಮಾಡಿದ ದುಂದುಭಿಗಳ ಧ್ವನಿಯನ್ನು ಕೇಳುತ್ತ ಆ ಬೆಟ್ಟದ ಮೇಲಿನ ಶಿಖರದ ತುದಿಯಲ್ಲಿ ಹಾಟಕಮಣಿಯಿಂದ ಚಿತ್ರಿತವಾದ ದೇವಾಲಯವನ್ನು ನೋಡಿದನು.

೧೯. ಬ್ರಹ್ಮನೇ ಬಂದು ಅಲ್ಲಿ ಪುರುಷೋತ್ತಮನ ಪೂಜೆಯನ್ನು ಮಾಡುತ್ತಾನೆ. ಆ ಹರಿಗೆ ಇಷ್ಟವಾದ ನೈವೇದ್ಯಗಳನ್ನು ಮಾಡುತ್ತಾನೆ.

೨೦—೨೨. ಅಲ್ಲಿ ಆ ಪವಿತ್ರವಾದ ಆಶ್ಚರ್ಯಕರವಾದ ದೇವಸ್ಥಾನವನ್ನು ನೋಡಿ ಐದು ಜನಗಳೂ ಒಳಕ್ಕೆ ಪ್ರವೇಶಿಸಿದರು ಅಲ್ಲಿ ಚಿನ್ನದಿಂದಲೂ ಉತ್ತಮವಾದ ಮಣಿಗಳಿಂದಲೂ ಪ್ರಕಾಶಿಸುವ ಸಿಂಹಾಸನದಲ್ಲಿ ಚತುರ್ಭುಜನಾಗಿ ಕುಳಿತು

**ಸಿಂಹಾಸನೇ ವಿರಾಜಂತಂ ಚತುರ್ಭುಜಮನೋಹರಂ ।**
**ಚಂಡಪ್ರಚಂಡವಿಜಯಜಯಾದಿಭಿರುಪಾಸಿತಂ ॥ ೨೨ ॥**

**ಪ್ರಣನಾಮ ಸಪತ್ನೀಕೋ ರಾಜಾ ಸೇವಕಸಂಯುತಃ ।**
**ಪ್ರಣಮ್ಯ ಪರಮಾತ್ಮಾನಂ ಮಹಾರಾಜಂ ನೃಪೋತ್ತಮಃ ॥ ೨೩ ॥**

**ಸ್ನಾಪಯಾಮಾಸ ವಿಧಿವತ್ ವೇದೋಕ್ತೈಸ್ಸ್ನಾನಮಂತ್ರಕೈಃ ।**
**ಅರ್ಘ್ಯಪಾದ್ಯಾದಿಕಂ ಚಕ್ರೇ ಪ್ರೀತೇನ ಮನಸಾ ನೃಪಃ ॥ ೨೪ ॥**

**ಚಂದನೇನ ವಿಲಿಪ್ಯೈನಂ ವಸ್ತ್ರೇ ಚ ವಿನಿವೇದ್ಯ ಚ ।**
**ಧೂಪಮಾರಾರ್ತಿಕಂ ಕೃತ್ವಾ ಸರ್ವಸ್ವಾದುಮನೋಹರಂ ॥ ೨೫ ॥**

**ನೈವೇದ್ಯಂ ಭಗವನ್ಮೂರ್ತ್ಯೈ ನ್ಯವೇದಯದಥೋ ನೃಪಃ ॥ ೨೬ ॥**

**ಪ್ರಣಮ್ಯ ಚ ಸ್ತುತಿಂ ಚಕ್ರೇ ತಾಪಸಬ್ರಾಹ್ಮಣೇನ ಚ ।**
**ಯಥಾಮತಿ ಗುಣಗ್ರಾಮಗುಂಫಿತಸ್ತೋತ್ರಸಂಚಯೈಃ ॥ ೨೭ ॥**

**॥ ರಾಜೋವಾಚ ॥**

**ಏಕಸ್ತ್ವಂ ಪುರುಷಸ್ಸಾಕ್ಷಾದ್ಭಗವಾನ್ಪ್ರಕೃತೇಃ ಪರಃ ।**
**ಕಾರ್ಯಕಾರಣತೋ ಭಿನ್ನೋ ಮಹತ್ತತ್ತ್ವಾದಿಪೂಜಿತಃ ॥ ೨೮ ॥**

---

ಚಂಡಪ್ರಚಂಡಜಯವಿಜಯರಿಂದ ಸೇವಿಸಲ್ಪಡುತ್ತಿರುವ ಸ್ವಾಮಿಗೆ ಎಲ್ಲರೊಡನೆಯೂ ನಮಸ್ಕರಿಸಿದನು.

೨೩-೨೪. ರಾಜನು ಆ ಸ್ವಾಮಿಯನ್ನು ನಮಸ್ಕರಿಸಿ, ಪಂಚಾಮೃತಗಳಿಂದ ಸ್ನಾನಮಾಡಿಸಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು.

೨೫-೨೬. ಚಂದನವನ್ನು ಲೇಪಿಸಿ, ವಸ್ತ್ರಗಳನ್ನು ಹೊದ್ದಿಸಿ, ಧೂಪವನ್ನು ಹಾಕಿ, ಆರತಿಯನ್ನು ಬೆಳಗಿ ನೈವೇದ್ಯವನ್ನು ಸಮರ್ಪಿಸಿದನು.

೨೭. ಆ ತಾಪಸಬ್ರಾಹ್ಮಣನೊಡನೆ ತನ್ನ ಬುದ್ಧಿಗೆ ಸಿಲುಕಿದಷ್ಟು ಗುಣಗಳಿಂದ ಸ್ತೋತ್ರವನ್ನು ಮಾಡಿದನು.

೨೮. ರಾಜನು ಹೇಳಿದನು:—ನೀನೊಬ್ಬನೇ ಪುರುಷನು. ಭಗವಂತನು. ಪ್ರಕೃತಿಗಿಂತ ಬೇರೆಯಾದವನು. ನೀನು ಕಾರ್ಯಕಾರಣಗಳಿಗನುಸಾರವಾಗಿ ಭೇದವನ್ನು ಹೊಂದುತ್ತೀಯೆ. ಮಹದಾದಿತತ್ತ್ವಗಳಿಂದ ಕೂಡಿರುತ್ತೀಯೆ.

ತ್ವನ್ನಾಭಿಕಮಲಾಜ್ಜಜ್ಞೇ ಬ್ರಹ್ಮಾ ಸೃಷ್ಟಿವಿಚಕ್ಷಣಃ ।
ತಥಾ ಸಂಹಾರಕರ್ತಾ ಚ ರುದ್ರಸ್ತ್ವನ್ನೇತ್ರಸಂಭವಃ ॥ ೨೯ ॥

ತ್ವಯಾಜ್ಞಪ್ತಾಃ ಕರೋತ್ಯಸ್ಯ ವಿಶ್ವಸ್ಯ ಪರಿಚೇಷ್ಟಿತಂ ।
ತ್ವತ್ತೋ ಜಾತಂ ಪುರಾಣಾದ್ಯಂ ಜಗತ್‌ಸ್ಥಾಸ್ನು ಚರಿಷ್ಣು ಚ ।
ಚೇತನಾಶಕ್ತಿಮಾವಿಶ್ಯ ತ್ವಮೇನಂ ಚೇತಯಸ್ಯಹೋ ॥ ೩೦ ॥

ತವ ಜನ್ಮ ತು ನಾಸ್ತ್ಯೇವ ನಾಂತಸ್ತವ ಜಗತ್ಪತೇ ।
ವೃದ್ಧಿಕ್ಷಯಪರೀಣಾಮಾಸ್ತ್ವಯಿ ಸಂತ್ಯೇವ ನೋ ವಿಭೋ ॥ ೩೧ ॥

ತಥಾಪಿ ಭಕ್ತರಕ್ಷಾರ್ಥಂ ಧರ್ಮಸ್ಥಾಪನಹೇತವೇ ।
ಕರೋಷಿ ಜನ್ಮಕರ್ಮಾಣಿ ಹ್ಯನುರೂಪಗುಣಾನಿ ಚ ॥ ೩೨ ॥

ತ್ವಯಾ ಮಾತ್ಸ್ಯಂ ವಪುರ್ಧೃತ್ವಾ ಶಂಖಸ್ತು ನಿಹತೋಽಸುರಃ ।
ವೇದಾಸ್ಸುರಕ್ಷಿತಾ ಬ್ರಹ್ಮನ್ ಮಹಾಪುರುಷ ಪೂರ್ವಜ ॥ ೩೩ ॥

---

೨೯. ಸೃಷ್ಟಿಮಾಡುವ ಬ್ರಹ್ಮನು ನಿನ್ನ ನಾಭಿಕಮಲದಿಂದ ಹುಟ್ಟಿದನು. ಅಂತೆಯೇ ಸೃಷ್ಟಿನಾಶಕನಾದ ರುದ್ರನು ನಿನ್ನ ಕಣ್ಣಿನಿಂದ ಹುಟ್ಟಿದವನು. ನಿನ್ನ ಅಪ್ಪಣೆಯಂತೆ ಪ್ರಪಂಚವನ್ನು ನಡೆಸುತ್ತಾರೆ.

೩೦. ನಿನ್ನಿಂದಲೇ ಪುರಾಣಾದಿಗಳು ಹುಟ್ಟಿದುವು. ನಿನ್ನಿಂದಲೇ ಚರಾಚರ ಜಗತ್ತು ಇರತಕ್ಕದ್ದು. ಚೇತನಾಶಕ್ತಿಯನ್ನು ಹೊಂದಿ ಪ್ರಪಂಚವೆಲ್ಲವನ್ನು ಪ್ರಾಣವುಳ್ಳದ್ದನ್ನಾಗಿ ಮಾಡಿದ್ದೀಯೆ.

೩೧. ನಿನಗೆ ಹುಟ್ಟುಸಾವುಗಳಿಲ್ಲ. ವೃದ್ಧಿಕ್ಷಯ ವ್ಯತ್ಯಾಸಗಳೊಂದೂ ನಿನಗೆ ಇಲ್ಲವೇ ಇಲ್ಲ.

೩೨. ಆದರೂ ಕೂಡ ಭಕ್ತರ ರಕ್ಷಣೆಗೋಸ್ಕರವೂ, ಧರ್ಮವನ್ನು ಸ್ಥಾಪಿಸುವುದಕ್ಕೂ, ಯೋಗ್ಯವಾದ ಜನ್ಮಗಳನ್ನು ಕರ್ಮಗಳನ್ನೂ ಹೊಂದುತ್ತೀಯೆ.

೩೩-೩೪. ನೀನು ಮತ್ಸ್ಯಾವತಾರವನ್ನು ಮಾಡಿ ಶಂಖನೆಂಬ ರಾಕ್ಷಸನನ್ನು

ಶೇಷೋ ನ ವೇತ್ತಿ ಮಹ ತೇ ಭಾರತ್ಯಪಿ ಮಹೇಶ್ವರಿ ।
ಕಿಮುತಾನ್ಯೇ ಮಹಾವಿಷ್ಣೋ ಮಾದೃಶಾಸ್ತು ಕುಬುದ್ಧಯಃ ॥ ೩೪ ॥

ಮನಸಾ ತ್ವಾಂ ನ ಚಾಪ್ನೋತಿ ವಾಗಿಯಂ ಪರಮೇಶ್ವರೀ ।
ತಸ್ಮಾದಹಂ ಕಥಂ ತ್ವಾಂ ವೈ ಸ್ತೋತುಂ ಸ್ಯಾಮೀಶ್ವರಃ ಪ್ರಭೋ ॥ ೩೫ ॥

ಇತಿ ಸ್ತುತ್ವಾ ಸ ಶಿರಸಾ ಪ್ರಣಾಮಮಕರೋನ್ಮುಹುಃ ।
ಗದ್ಗದಸ್ವರಸಂಯುಕ್ತೋ ರೋಮಹರ್ಷಾಂಕಿತಾಂಗಕಃ ॥ ೩೬ ॥

ಇತಿ ಸ್ತುತ್ಯಾ ಪ್ರಹೃಷ್ಟಾತ್ಮಾ ಭಗವಾನ್ಪುರುಷೋತ್ತಮಃ ।
ಉವಾಚ ವಚನಂ ಸತ್ಯಂ ರಾಜಾನಂ ಪ್ರತಿ ಸಾರ್ಥಕಂ ॥ ೩೭ ॥

॥ ಶ್ರೀ ಭಗವಾನುವಾಚ ॥

ತವ ಸ್ತುತ್ಯಾತಿಹರ್ಷೋಽಭೂನ್ಮಮ ರಾಜನ್ಮಹಾಮತೇ ।
ಜಾನೀಹಿ ತ್ವಂ ಮಹಾರಾಜ ಮಾಂ ಚ ಪ್ರಕೃತಿತಃ ಪರಂ ॥ ೩೮ ॥

---

ಕೊಂಡೆ. ವೇದಗಳನ್ನು ಕಾಪಾಡಿದೆ. ನಿನ್ನ ತೇಜಸ್ಸುಗಳನ್ನು ಶೇಷ, ಸರಸ್ವತಿ, ಪಾರ್ವತೀಯರೇ ತಿಳಿಯದಿರುವಾಗ ನನ್ನಂತಹವರು ಹೇಗೆ ತಿಳಿದಾರು?

೩೫. ಸರಸ್ವತಿಯು ಮನಸ್ಸಿನಿಂದಲೂ ನಿನ್ನ ಗುಣಗಳನ್ನು ಪೂರ್ತಿ ಹೊಗಳಲು ಅಸಮರ್ಥಳಾಗಿರುವಾಗ ನಾನು ಸ್ತೋತ್ರಮಾಡಲು ಹೇಗೆ ಸಮರ್ಥನಾದೇನು?

೩೬. ಹೀಗೆಂದು ಹೊಗಳುತ್ತಾ ಗದ್ಗದಸ್ವರದಿಂದ ಕೂಡಿ ರೋಮಾಂಚಿತನಾಗಿ ಪುನಃಪುನಃ ನಮಸ್ಕರಿಸಿದನು.

೩೭. ಈ ಸ್ತುತಿಯಿಂದ ಸಂತುಷ್ಟನಾದ ಪುರುಷೋತ್ತಮನು ರಾಜನನ್ನು ಕುರಿತು ಇಂತೆಂದನು.

೩೮. ಭಗವಂತನು ಹೇಳಿದನು:— ಎಲೈ! ದೊರೆಯೇ, ನಿನ್ನ ಸ್ತುತಿಯಿಂದ ಬಹಳ ಸಂತೋಷವಾಯಿತು. ನನ್ನನ್ನು ಪ್ರಕೃತಿಗಿಂತಲೂ ಬೇರೆಯವನನ್ನಾಗಿ ತಿಳಿ.

ನೈವೇದ್ಯಭಕ್ಷಣಂ ತ್ವಂ ಹಿ ಶೀಘ್ರಂ ಕುರು ಮನೋಹರಂ ।
ಚತುರ್ಭುಜತ್ವಂ ಪ್ರಾಪ್ತಸ್ಸ್ವರ್ಗಂ ಗಂತಾಸಿ ಪರಮಂ ಪದಂ ॥ ೩೯ ॥

ತ್ವತ್ಕೃತಸ್ತುತಿರತ್ನೇನ ಯೋ ಮಾಂ ಸ್ತೋಷ್ಯತಿ ಮಾನವಃ ।
ತಸ್ಯಾಪಿ ದರ್ಶನಂ ದಾಸ್ಯೇ ಭುಕ್ತಿಮುಕ್ತಿಪ್ರದಂ ಪರಂ ॥ ೪೦ ॥

ಇತ್ಯೇವಂ ವಚನಂ ರಾಜಾ ಶ್ರುತ್ವಾ ಭಗವತೇರಿತಂ ।
ನೈವೇದ್ಯಭಕ್ಷಣಂ ಚಕ್ರೇ ಚತುರ್ಭಿಸ್ಸಹ ಸೇವಕೈಃ ॥ ೪೧ ॥

ತತೋ ವಿಮಾನಂ ಸಂಪ್ರಾಪ್ತಂ ಕಿಂಕಿಣೀಜಾಲಸಂಯುತಂ ।
ಅಪ್ಸರೋವೃಂದಸಂಸೇವ್ಯಂ ಸರ್ವಭೋಗಸಮನ್ವಿತಂ ॥ ೪೨ ॥

ಪುರುಷೋತ್ತಮಸಂಜ್ಞಂ ಚ ಪಶ್ಯನ್ರಾಜಾ ಸ ಧಾರ್ಮಿಕಃ ।
ವವಂದೇ ಚರಣೌ ತಸ್ಯ ಕೃಪಾಪಾತ್ರಕೃತಾತ್ಮಕಃ ॥ ೪೩ ॥

---

೩೯. ನೀನು ಜಾಗ್ರತೆಯಾಗಿ ನೈವೇದ್ಯವನ್ನು ತಿನ್ನು. ಚತುರ್ಭುಜನಾಗಿ ಸ್ವರ್ಗವನ್ನು ಹೊಂದುತ್ತೀಯೆ.

೪೦. ನೀನು ಮಾಡಿದ ಈ ಸ್ತುತಿಯಿಂದ ನನ್ನನ್ನು ಸ್ತೋತ್ರಮಾಡಿದರೆ ಅವನಿಗೂ ಸಂತೋಷಪಟ್ಟು ದರ್ಶನವನ್ನು ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುತ್ತೇನೆ.

೪೧. ಈ ಮಾತನ್ನು ಕೇಳಿ ದೊರೆಯು ಮಿಕ್ಕ ನಾಲ್ವರೊಡನೆಯೂ ನೈವೇದ್ಯವನ್ನು ತಿಂದನು.

೪೨. ಅನಂತರ ಗಂಟೆಗೆಜ್ಜೆಗಳುಳ್ಳ, ಅಪ್ಸರಸ್ತ್ರೀಯರು ಸೇವಿಸುತ್ತಿರುವ, ಎಲ್ಲಾ ಸುಖಗಳೂ ಉಳ್ಳ ವಿಮಾನವು ಬಂದಿತು.

೪೩. ಆ ರಾಜನು ಪುರುಷೋತ್ತಮನನ್ನು ನೋಡಿ ಕೃಪೆಗೆ ಪಾತ್ರನಾಗಿ ಆತನ ಪಾದಗಳನ್ನು ನಮಸ್ಕರಿಸಿದನು.

ತದಾಜ್ಞಯಾ ವಿಮಾನೇ ಸ ಆರುಹ್ಯ ಮಹಿಳಾಯುತಃ ।
ಜಗಾಮ ಪಶ್ಯತಸ್ತಸ್ಯ ದಿವಿ ವೈಕುಂಠಮುದ್ಭುತಂ ॥ ೪೪ ॥

ಮಂತ್ರೀ ಧರ್ಮಪರೋ ರಾಜ್ಞಃ ಸರ್ವಧರ್ಮವಿದುತ್ತಮಃ ।
ಯಯೌ ಸಾಕಂ ವಿಮಾನೇನ ಲಲನಾವೃಂದಸೇವಿತಃ ॥ ೪೫ ॥

ತಾಪಸಬ್ರಾಹ್ಮಣಸ್ತತ್ರ ಸರ್ವತೀರ್ಥಾವಗಾಹಕಃ ।
ಚತುರ್ಭುಜತ್ವಂ ಸಂಪ್ರಾಪ್ತೋ ಯಯೌ ದೇವೈರ್ವಿಮಾನಿಭಿಃ ॥ ೪೬ ॥

ಕರಂಬೋಽಪಿ ಮಹಾರಾಜ ಗಾನಪುಣ್ಯೇನ ದರ್ಶನಂ ।
ಪ್ರಾಪ್ತೋ ಯಯೌ ಸುರಾವಾಸಂ ಸರ್ವದೇವಾದಿದುರ್ಲಭಂ ॥ ೪೭ ॥

ಸರ್ವೇ ಪ್ರಚಲಿತಾ ವಿಷ್ಣುಲೋಕಂ ಪರಮಮುದ್ಭುತಂ ।
ಚತುರ್ಭುಜಾಶ್ಶಂಖಚಕ್ರಗದಾಪಾಥೋಜಧಾರಿಣಃ ॥ ೪೮ ॥

ಸರ್ವೇ ಮೇಘಶ್ರಿಯುಶ್ಯ್ಮುದ್ಧಾ ಲಸದಂಭೋಜಪಾಣಯಃ ।
ಹಾರಕೇಯೂರಕಟಕೈರ್ಭೂಷಿತಾಂಗಾ ಯಯುರ್ದಿವಂ ॥ ೪೯ ॥

---

೪೪. ಆ ಸ್ವಾಮಿಯ ಆಜ್ಞೆಯಿಂದ ಹೆಂಡತಿಯೊಡನೆ ವಿಮಾನಕ್ಕೆ ಹತ್ತಿ ಅವನು ನೋಡುತ್ತಿರುವಂತೆಯೇ ಉತ್ತಮವಾದ ವೈಕುಂಠವನ್ನು ಹೊಂದಿದನು.

೪೫. ಸರ್ವಧರ್ಮಗಳನ್ನು ಬಲ್ಲ ರಾಜನ ಮಂತ್ರಿಯು ಅವರೊಡನೆ ವಿಮಾನದಲ್ಲಿ ಹೊರಟನು.

೪೬. ಸರ್ವತೀರ್ಥಗಳಲ್ಲೂ ಸ್ನಾನಮಾಡಿದ ಆ ಬ್ರಾಹ್ಮಣನು ಚತುರ್ಭುಜನಾಗಿ ವಿಮಾನದಲ್ಲಿ ಹೋದನು.

೪೭. ಕರಂಡನು ಗಾನಮಾಡಿದ ಪುಣ್ಯದಿಂದ ದೇವತೆಗಳಿಗೂ ದುರ್ಲಭವಾದ ಸ್ವರ್ಗವನ್ನು ಹೊಂದಿದನು.

೪೮. ಎಲ್ಲರೂ ಚತುರ್ಭುಜರಾಗಿ ಶಂಖಚಕ್ರಗದಾಪದ್ಮಗಳನ್ನು ಧರಿಸಿ ವಿಷ್ಣುಲೋಕವನ್ನು ಕುರಿತು ಹೊರಟರು.

೪೯. ಎಲ್ಲರೂ ನೀಲಮೇಘದಂತೆ ವರ್ಣವುಳ್ಳವರಾಗಿ ಕೈಯಲ್ಲಿ ಪದ್ಮವನ್ನು ಹಿಡಿದು ಹಾರ ಮುಂತಾದುವುಗಳಿಂದ ಭೂಷಿತರಾಗಿ ವೈಕುಂಠಕ್ಕೆ ಹೊರಟರು.

ತದ್ವಿಮಾನಾವಲೀರ್ದೃಷ್ಟ್ವಾ ಲೋಕೈಃ ಪ್ರಕೃತಿಭಿಸ್ತದಾ ।
ದುಂದುಭೀನಾಂ ತು ನಿರ್ಘೋಷಸ್ತೈಃ ಕೃತಃ ಕರ್ಣಗೋಚರಃ ॥ ೫೦ ॥

ತತ್ರೈಕೋ ಬ್ರಾಹ್ಮಣೋ ಹ್ಯಾಸೀದ್ವಿಷ್ಣುಪಾದಾಬ್ಜವಲ್ಲಭಃ ।
ಗತಸ್ತದ್ವಿರಹಾಕೃಷ್ಟಚೇತಾ ಜಾತಶ್ಚತುರ್ಭುಜಃ ॥ ೫೧ ॥

ತಚ್ಚಿತ್ರಂ ವೀಕ್ಷ್ಯ ತೇ ಲೋಕಾಃ ಪ್ರಶಂಸಂತೋ ಮಹೋದಯಂ ।
ಗಂಗಾಸಾಗರಸಂಯೋಗೇ ಸ್ನಾತ್ವಾಗುಸ್ತಂ ಪುರಂ ಪ್ರತಿ ॥ ೫೨ ॥

ಅಹೋ ಭಾಗ್ಯಂ ಭೂಮಿಪತೇ ರತ್ನಗ್ರೀವಸ್ಯ ಸನ್ಮತೇಃ ।
ಜಗಾಮಾನೇನ ದೇಹೇನ ತದ್ವಿಷ್ಣೋಃ ಪರಮಂ ಪದಂ ॥ ೫೩ ॥

ರಾಜನ್ನಸೌ ನೀಲಗಿರಿಃ ಪುರುಷೋತ್ತಮಸತ್ಕೃತಃ ।
ಯಂ ವೀಕ್ಷ್ಯೈವ ವ್ರಜಂತ್ಯದ್ಧಾ ವೈಕುಂಠಂ ಪರಮಾಯನಂ ॥ ೫೪ ॥

ಏತನ್ನೀಲಸ್ಯ ಮಹಾತ್ಮ್ಯಂ ಯಶ್ಶೃಣೋತಿ ಸುಭಾಗ್ಯವಾನ್ ।
ಯಶ್ಶ್ರಾವಯತಿ ಲೋಕಾನ್ವೈ ತೌ ಗಚ್ಛೇತಾಂ ಪರಂ ಪದಂ ॥ ೫೫ ॥

---

೫೦. ಆ ವಿಮಾನಗಳ ಪಂಕ್ತಿಯನ್ನು ಜನಗಳು ನೋಡಿದರು. ದುಂದುಭಿಗಳ ಧ್ವನಿಯನ್ನು ಕೇಳಿದರು.

೫೧. ಆಗ ಅಲ್ಲೊಬ್ಬ ಬ್ರಾಹ್ಮಣನಿದ್ದನು. ಅವನು ವಿಷ್ಣುಭಕ್ತನು. ಈ ಭಕ್ತರ ಸಹವಾಸ ತಪ್ಪಿದುದರಿಂದ ದುಃಖಪಡುತ್ತಾ ಚತುರ್ಭುಜನಾದನು.

೫೨. ಅದನ್ನು ನೋಡಿ ಜನಗಳು ಹೊಗಳುತ್ತ ಆ ಗಂಗಾಸಾಗರಸಂಯೋಗದಲ್ಲಿ ಸ್ನಾನಮಾಡಿ ಊರಿಗೆ ಹೋದರು.

೫೩. ರತ್ನಗ್ರೀವನ ಭಾಗ್ಯವನ್ನೇನೆಂದು ಹೇಳಲಿ? ಈ ದೇಹದಿಂದಲೇ ವೈಕುಂಠವನ್ನು ಹೊಂದಿದನು!

೫೪. ಎಲೈ! ದೊರೆಯೇ, ಈ ನೀಲಗಿರಿಯು ಪುರುಷೋತ್ತಮನಿಂದ ಗೌರವಿಸಲ್ಪಟ್ಟಿದೆ. ಇದನ್ನು ನೋಡಿದರೇನೇ ವೈಕುಂಠವು ಸಿಕ್ಕುತ್ತದೆ.

೫೫. ಈ ನೀಲಪರ್ವತದ ಮಹಿಮೆಯನ್ನು ಕೇಳಿದವನು ವೈಕುಂಠವನ್ನು ಹೊಂದುತ್ತಾನೆ.

ಏತಚ್ಛ್ರುತ್ವಾ ತು ದುಃಸ್ವಪ್ನೋ ನಶ್ಯತಿ ಸ್ಮೃತಿಮಾತ್ರತಃ ।
ಪಾಂತ್ರೇ ಸಂಸಾರನಿಸ್ತಾರಂ ದದಾತಿ ಪುರುಷೋತ್ತಮಃ ॥ ೫೬ ॥

ಯೋಽಸೌ ನೀಲಾಧಿವಾಸೀ ಚ ಸ ರಾಮಃ ಪುರುಷೋತ್ತಮಃ ।
ಸೀತಾ ಸಾಕ್ಷಾನ್ಮಹಾಲಕ್ಷ್ಮೀಃ ಸರ್ವಕಾರಣಕಾರಣಂ ॥ ೫೭ ॥

ಹಯಮೇಧಂ ಚರಿತ್ವಾ ಸ ಲೋಕಾನ್ಸರ್ವಾ ಪಾವಯಿಷ್ಯತಿ ।
ಯನ್ನಾಮ ಬ್ರಹ್ಮಹತ್ಯಾಯಾಃ ಪ್ರಾಯಶ್ಚಿತ್ತೇ ಪ್ರದಿಶ್ಯತೇ ॥ ೫೮ ॥

ಇದಾನೀಂ ತ್ವದ್ಧಯಃ ಪ್ರಾಪ್ತೋ ನೀಲೇ ಪರ್ವತಸತ್ತಮೇ ।
ಪುರುಷೋತ್ತಮದೇವಂ ತ್ವಂ ನಮಸ್ಕುರು ಮಹಾಮತೇ ॥ ೫೯ ॥

ತತ್ರ ನಿಷ್ಪಾಪಿನೋ ಭೂತ್ವಾ ಯಾಸ್ಯಾಮಃ ಪರಮಂ ಪದಂ ।
ಯಸ್ಯ ಪ್ರಸಾದಾದ್ಬಹವೋ ನಿಸ್ತೀರ್ಣಾ ಭವಸಾಗರಾತ್ ॥ ೬೦ ॥

---

೫೬. ಇದನ್ನು ಕೇಳಿ ಸ್ಮರಿಸಿಕೊಂಡರೇನೇ ದುಃಸ್ವಪ್ನವು ನಾಶವಾಗುತ್ತದೆ. ಕೊನೆಯಲ್ಲಿ ಸಂಸಾರದಿಂದ ಮುಕ್ತಿಯನ್ನು ಹೊಂದುತ್ತಾನೆ.

೫೭. ನೀಲಪರ್ವತದಲ್ಲಿರುವ ಪುರುಷೋತ್ತಮನೇ ಶ್ರೀರಾಮನು. ಸೀತೆಯೇ ಮಹಾಲಕ್ಷ್ಮಿಯು. ಕಾರಣಗಳಿಗೂ ಆಕೆಯೇ ಕಾರಣಳು.

೫೮. ಆ ರಾಮನು ಅಶ್ವಮೇಧಯಜ್ಞವನ್ನು ಮಾಡಿ ಲೋಕಗಳನ್ನು ಪವಿತ್ರವನ್ನಾಗಿ ಮಾಡುತ್ತಾನೆ. ಆ ಸ್ವಾಮಿಯ ನಾಮಸ್ಮರಣೆಯು ಬ್ರಹ್ಮಹತ್ಯಮಾಡಿದವರ ಪ್ರಾಯಶ್ಚಿತ್ತವೆಂದು ಹೇಳಲ್ಪಟ್ಟಿದೆ.

೫೯. ಈಗ ನಿನ್ನ ಕುದುರೆಯು ನೀಲಪರ್ವತಕ್ಕೆ ಬಂದಿದೆ. ಅಲ್ಲಿರುವ ಪುರುಷೋತ್ತಮನನ್ನು ನೀನು ನಮಸ್ಕರಿಸು.

೬೦. ಯಾವ ಸ್ವಾಮಿಯ ದರ್ಶನದಿಂದ ಬಹು ಜನಗಳು ಸಂಸಾರದಿಂದ ನಿವೃತ್ತರಾಗಿ ಪರಮಪದವನ್ನು ಹೊಂದಿದರೋ ಅಂತಹ ಸ್ವಾಮಿಯನ್ನು ದರ್ಶನಮಾಡಿ ಪಾಪವನ್ನು ಕಳೆದುಕೊಂಡು ಪರಮಪದವನ್ನು ಹೊಂದೋಣ.

ಏವಂ ಪ್ರವದತಸ್ತಸ್ಯ ಪ್ರಾಪ್ತೋಽಶ್ವೋ ನೀಲಪರ್ವತಂ ।
ವಾಯುವೇಗೇನ ಪೃಥಿವೀಂ ಕುರ್ವನ್ ಸಂಕ್ಷುಣ್ಣಮಂಡಲಾಂ ॥ ೬೧ ॥

ತದಾ ರಾಜಾಪಿ ತತ್ಪೃಷ್ಠಚಾರೀ ನೀಲಾಭಿಧಂ ಗಿರಿಂ ।
ಪ್ರಾಪ್ತೋ ಗಂಗಾಬ್ಧಿಸಂಯೋಗೇ ಸ್ನಾತ್ವಾಗಾತ್ಪುರುಷೋತ್ತಮಂ ॥ ೬೨ ॥

ಸ್ತುತ್ವಾ ನತ್ವಾ ಚ ತಂ ದೇವಂ ಸುರಾಸುರನಮಸ್ಕೃತಂ ।
ಜಾತಂ ಕೃತಾರ್ಥಮಾತ್ಮಾನಮನುಮನ್ಯತ ಸ ಶತ್ರುಹಾ ॥ ೬೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ನೀಲಗಿರಿಮಹಿಮವರ್ಣನಂ
ನಾಮ ದ್ವಾವಿಂಶೋಽಧ್ಯಾಯಃ

---

೬೧. ಹೀಗೆ ಹೇಳುತ್ತಿರುವಾಗಲೇ ಆ ಕುದುರೆಯು ವಾಯುವೇಗದಿಂದ ಸುತ್ತುತ್ತಾ ಆ ನೀಲಪರ್ವತಕ್ಕೆ ಬಂದಿತು.

೬೨. ಆಗ ಶತ್ರುಘ್ನನೂ ಕೂಡ ಆ ಕುದುರೆಯ ಹಿಂದೆ ಹೋಗಿ ಗಂಗಾಸಾಗರ ಸಂಗಮದಲ್ಲಿ ಸ್ನಾನಮಾಡಿ ಪುರುಷೋತ್ತಮನ ದರ್ಶನಕ್ಕೆ ಹೋದನು.

೬೩ ಸುರಾಸುರರಿಂದ ನಮಸ್ಕೃತನಾದ ಆ ಪುರುಷೋತ್ತಮನನ್ನು ನಮಸ್ಕರಿಸಿ, ಸ್ತುತಿಸಿ ತನ್ನನ್ನು ಕೃತಾರ್ಥನನ್ನಾಗಿ ಮಾಡಿಕೊಂಡನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ನೀಲಗಿರಿಮಹಿಮಾವರ್ಣನವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರಯೋವಿಂಶೋಽಧ್ಯಾಯಃ

---

॥ ಶೇಷ ಉವಾಚ ॥

ಕ್ಷಣಂ ಸ್ಥಿತ್ವಾ ತೃಣಾನ್ಯತ್ತ್ವಾ ಯಯೌ ವಾಜೀ ಮನೋಜವಃ ।
ವೀರಶ್ರೇಣೀವೃತಃ ಪತ್ರಂ ಭಾಲೇ ಧೃತ್ವಾ ಸಚಾಮರಃ ॥ ೧ ॥

ಶತ್ರುಘ್ನೇನ ಸುವೀರೇಣ ಲಕ್ಷ್ಮೀನಿಧಿನೃಪೇಣ ಚ ।
ಪುಷ್ಕಲೇನೋಗ್ರವಾಹೇಣ ಪ್ರತಾಪಾಗ್ರ್ಯೇಣ ರಕ್ಷಿತಃ ॥ ೨ ॥

ಯಯೌ ಪುರೀಂ ಸ ಚಕ್ರಾಂಕಾಂ ಸುಬಾಹುಪರಿರಕ್ಷಿತಾಂ ।
ಅನೇಕವೀರಕೋಟೀಭೀ ರಕ್ಷಿತೋಽನುಗತಃ ಪ್ರಭೋ ॥ ೩ ॥

ತದಾ ಪುತ್ರೋಽಸ್ಯ ದಮನೋ ಮೃಗಯಾಮಾಸ್ಥಿತೋ ಮಹಾನ್ ।
ದದರ್ಶಾಶ್ವಂ ಭಾಲಪತ್ರಂ ಚಂದನಾದಿಕಚರ್ಚಿತಂ ॥ ೪ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧-೩. ಶೇಷನು ಹೇಳಿದನು:—ಯಾಗದ ಕುದುರೆಯು ಅಲ್ಲಿ ಹುಲ್ಲು ಮೇಯ್ದು ನೀರು ಕುಡಿದು ಹೊರಟಿತು. ಜೊತೆಯಲ್ಲಿ ವೀರರು ಹೊರಟರು. ಹಣೆಯಲ್ಲಿ ಪತ್ರವನ್ನು ಕಟ್ಟಿದ್ದರು. ಶತ್ರುಘ್ನ, ಲಕ್ಷ್ಮೀನಿಧಿ, ಪುಷ್ಕಳ, ಪ್ರತಾಪಾಗ್ರ್ಯ ಇವರು ರಕ್ಷಕರಾಗಿದ್ದರು. ಸುಬಾಹುವೆಂಬ ರಾಜನು ಕಾಪಾಡುತ್ತಿದ್ದ ಚಕ್ರಪುರಿಗೆ ಹೋಯಿತು.

೪. ಸುಬಾಹುವಿನ ಮಗನಾದ ದಮನನೆಂಬುವನು ಬೇಟೆಗೆ ಹೋಗಿದ್ದನು. ಅವನು ಚಂದನವನ್ನು ಬಳಿದು ಹಣೆಯಲ್ಲಿ ಪಟ್ಟವನ್ನು ಕಟ್ಟಿದ್ದ ಆ ಕುದುರೆಯನ್ನು ನೋಡಿದನು.

ವಿಲೋಕ್ಯ ಸೇವಕಂ ಪ್ರಾಹ ಕಸ್ಯಾಶ್ವೋ ಮೇಽಕ್ಷಿಗೋಚರಃ ।
ಭಾಲೇ ಪತ್ರಂ ಧೃತಂ ಕಿನ್ನು ಚಾಮರಂ ಕಿಂತು ಶೋಭನಂ ॥ ೫ ॥

ಇತಿ ರಾಜ್ಞೋ ವಚಶ್ಶ್ರುತ್ವಾ ಸೇವಕಃ ಪ್ರಯಯೌ ತತಃ ।
ಯತ್ರಾಸೌ ವರ್ತತೇ ವಾಜೀ ಭಾಲಪತ್ರಸುಶೋಭನಃ ॥ ೬ ॥

ಗೃಹೀತ್ವಾ ತಂ ಕೇಶಸಂಘೇ ರತ್ನಮಾಲಾವಿಭೂಷಿತಂ ।
ನಿನಾಯ ಪಾರ್ಶ್ವಗಂ ಭೂಪಸ್ಯ ಸುಬಾಹುಕುಲಧಾರಿಣಃ ॥ ೭ ॥

ಸ ಪತ್ರಂ ವಾಚಯಾಮಾಸ ಸುಂದರಾಕ್ಷರಶೋಭನಂ ।
ಅಯೋಧ್ಯಾಧಿಪತಿಶ್ಚಾಸೀದ್ರಾಜಾ ದಶರಥೋ ಬಲೀ ॥ ೮ ॥

ತಸ್ಯಾತ್ಮಜೋ ರಾಮಚಂದ್ರಃ ಸರ್ವಶೂರಶಿರೋಮಣಿಃ ।
ನಾನ್ಯೋಽಸ್ತಿ ತತ್ಸಮಃ ಪೃಥ್ವ್ಯಾಂ ಧನುರ್ಧರಣವಿಕ್ರಮಃ ॥ ೯ ॥

ತೇನಾಸೌ ಮೋಚಿತೋ ವಾಜೀ ಚಂದನಾದಿಕಚರ್ಚಿತಃ ।
ತಂ ಪಾಲಯತಿ ಧರ್ಮಾತ್ಮಾ ಶತ್ರುಘ್ನಃ ಸರ್ವವೀರಹಾ ॥ ೧೦ ॥

---

೫. ಆ ಕುದುರೆಯನ್ನು ನೋಡಿ ಸೇವಕನನ್ನು ಕುರಿತು ಇದು ಯಾರ ಕುದುರೆ? ಹಣೆಯಲ್ಲಿ ಕಟ್ಟಿರುವುದೇನು? ಚಾಮರವನ್ನೇಕೆ ಕಟ್ಟಿದ್ದಾರೆ? ಎಂದು ಕೇಳಿದನು.

೬. ರಾಜಪುತ್ರನ ಈ ಮಾತನ್ನು ಕೇಳಿ ಆಳು ಆ ಕುದುರೆಯಿದ್ದಲ್ಲಿಗೆ ಹೋಗಿ ಅದನ್ನು ಹಿಡಿದುಕೊಂಡು ಬಂದನು.

೭. ಆ ಕುದುರೆಯ ಜುಟ್ಟನ್ನು ಹಿಡಿದುಕೊಂಡು ಆ ದಮನನ ಹತ್ತಿರಕ್ಕೆ ಎಳೆದುಕೊಂಡು ಹೋದನು.

೮-೯. ಅವನು ಅದರ ಹಣೆಯಲ್ಲಿ ಬರೆದಿದ್ದುದನ್ನು ಓದಿದನು. ಅದರಲ್ಲಿ ಹೀಗಿದ್ದಿತು. ಅಯೋಧ್ಯೆಯಲ್ಲಿ ರಾಜನಾದ ದಶರಥನಿದ್ದನು. ಅವನ ಮಗನಾದ ಶೂರಾಗ್ರಣಿಯಾದ ರಾಮಚಂದ್ರನು ಇರುವನು. ಅವನಂತೆ ಶೂರರು ಭೂಮಿಯಲ್ಲೇ ಇಲ್ಲ.

೧೦. ಆ ರಾಮಚಂದ್ರನು ಈ ಕುದುರೆಯನ್ನು ಬಿಟ್ಟಿದ್ದಾನೆ. ಅದನ್ನು ಶೂರನಾದ ಶತ್ರುಘ್ನನು ಕಾಪಾಡುತ್ತಿದ್ದಾನೆ.

ಯಸ್ಯ ಶೂರಾ ವಯಂ ವೀರಾ ಧನುರ್ಹಸ್ತಾ ವಯಂ ತ್ವಿತಿ ।
ತೇ ಗೃಹ್ಣಂತು ಬಲಾದ್ವಾಹಂ ರತ್ನಮಾಲಾವಿಭೂಷಿತಂ ॥ ೧೧ ॥

ಮೋಚಯಿಷ್ಯತಿ ಶತ್ರುಘ್ನಃ ಸರ್ವವೀರಶಿರೋಮಣಿಃ ।
ಅನ್ಯಥಾ ಪಾದಯೋಸ್ತಸ್ಯ ಪ್ರಣತಿಂ ಯಾಂತು ಧನ್ವಿನಃ ॥ ೧೨ ॥

ಇತ್ಯಭಿಪ್ರಾಯಮಾಲೋಕ್ಯ ಜಗಾದ ನೃಪನಂದನಃ ।
ರಾಮ ಏವ ಧನುರ್ಧಾರೀ ನ ವಯಂ ಕ್ಷತ್ರಿಯಾಸ್ಸ್ಮೃತಾಃ ॥ ೧೩ ॥

ತಾತೇ ಮಮ ಸ್ಥಿತೇ ಪೃಥ್ವ್ಯಾಂ ಕೋಽಯಂ ಗರ್ವೋ ಮಹಾಭುವಿ ।
ಪ್ರಾಪ್ನೋತು ಗರ್ವಸ್ಯ ಫಲಂ ಮಮ ನಿರ್ಮುಕ್ತಸಾಯಕೈಃ ॥ ೧೪ ॥

ಅದ್ಯ ಮೇ ನಿಶಿತಾ ಬಾಣಾಃ ಶತ್ರುಘ್ನಂ ಕಿಂಶುಕಂ ಯಥಾ ।
ಪುಷ್ಪಿತಂ ವಿದಧತ್ವದ್ಯಾ ಕ್ಷತಾವೃತಶರೀರಕಂ ॥ ೧೫ ॥

ದಾರಯಂತು ಕಪೋಲಾಂಶ್ಚ ಸಾಯಕಾ ಮಮ ದಂತಿನಾಂ ।
ಅಶ್ವಾನ್ಪಶ್ಯಂತು ಶತಶೋ ರುಧಿರೌಘಪರಿಪ್ಲುತಾನ್ ॥ ೧೬ ॥

---

೧೧-೧೨. ಯಾರಿಗೆ, ನಾವು ವೀರರು, ಶೂರರು, ಧನುಸ್ಸನ್ನು ಹಿಡಿದಿದ್ದೇವೆ ಎಂಬ ಹೆಮ್ಮೆಯಿದೆಯೋ ಅವರು ಈ ಕುದುರೆಯನ್ನು ಕಟ್ಟಬಹುದು. ವೀರನಾದ ಶತ್ರುಘ್ನನು ಯುದ್ಧಮಾಡಿ ಕುದುರೆಯನ್ನು ಬಿಡಿಸಿಕೊಳ್ಳುತ್ತಾನೆ. ಹಾಗಿಲ್ಲದಿದ್ದರೆ ಅವರು ಶತ್ರುಘ್ನನಿಗೆ ನಮಸ್ಕರಿಸಿ ಸಮ್ಮನಿರಲಿ.

೧೩—೧೬. ಈ ಅಭಿಪ್ರಾಯವನ್ನು ರಾಜಪುತ್ರನು ನೋಡಿ ಇಂತೆಂದನು. ರಾಮನೊಬ್ಬನೇ ಧನುರ್ಧಾರಿಯು ನಾವು ಒಬ್ಬರೂ ಕ್ಷತ್ರಿಯರೇ ಅಲ್ಲ ಎಂದು ತಿಳಿದಿದ್ದಾನೆ. ನಮ್ಮ ತಂದೆಯು ಭೂಮಿಯಲ್ಲಿರುವಾಗ್ಯೆ ಈ ಗರ್ವವನ್ನು ಯಾವನು ತಾನೆ ಹೊಂದಿಯಾನು? ಆ ಗರ್ವಕ್ಕೆ ತಕ್ಕ ಫಲವನ್ನು ನನ್ನ ಬಾಣಗಳಿಂದ ಅನುಭವಿಸಲಿ. ನಾನು ಬಿಟ್ಟ ಬಾಣಗಳು ಆ ಶತ್ರುಘ್ನನ ದೇಹವನ್ನು ಮುತ್ತುಗದಮರವು ಹೂಬಿಟ್ಟು ಕೆಂಪಗೆ ಕಾಣುವಂತೆ ಗಾಯಗಳಿಂದ ಕೆಂಪಗೆ ಕಾಣಲಿ. ಆನೆಗಳ ಕೆನ್ನೆಗಳನ್ನು ಸೀಳಲಿ. ಅವರ ಕುದುರೆಗಳನ್ನು ರಕ್ತದಿಂದ ನೆನೆದವುಗಳನ್ನಾಗಿ ಮಾಡೋಣ.

ಪಿಬಂತು ಯೋಗಿನೀಸಂಘಾ ರುಧಿರಾಣಿ ನೃಮಸ್ತಕೈಃ ।
ಶಿವಾ ಭವಂತು ಸಂತುಷ್ಟಾ ಮದ್ವೈರಿಕ್ರವ್ಯಭಕ್ಷಣೈಃ ॥ ೧೭ ॥

ಪಶ್ಯಂತು ಸುಭಟಾಸ್ತಸ್ಯ ಮಮ ಬಾಹುಬಲಂ ಮಹತ್ ।
ಕೋದಂಡದಂಡನಿರ್ಮುಕ್ತಾಃ ಶರಕೋಟೀರ್ವಿಮುಂಚತಃ ॥ ೧೮ ॥

ಇತ್ಥಮುಕ್ತ್ವಾ ಮಹೀಪಸ್ಯ ತನುಜೋ ದಮನಾಭಿದಃ ।
ಸ್ವಪುರಂ ಪ್ರೇಷಯಿತ್ವಾ ತಂ ಪ್ರಹೃಷ್ಟೋಽಭವದುದ್ಭಟಃ ॥ ೧೯ ॥

ಸೇನಾಪತಿಮುವಾಚೇದಂ ಸಜ್ಜೀಕುರು ಮಹಾಮತೇ ।
ಸೇನಾಂ ಪರಿಮಿತಾಂ ಮಹ್ಯಂ ವೈರಿವೃಂದನಿವಾರಣೇ ॥ ೨೦ ॥

ಸಜ್ಜಾಂ ಸೇನಾಂ ವಿಧಾಯಾಶು ಸಮ್ಮುಖೋ ರಣಮಂಡಲೇ ।
ಸ್ಥಿತವಾನ್ಯಾವದತ್ಯುಗ್ರಸ್ತಾವತ್ಪ್ರಾಪ್ತಾ ಹಯಾನುಗಾಃ ॥ ೨೧ ॥

ಕ್ವಾಸೌ ಹಯೋ ಮಹಾರಾಜ್ಞೋ ಭಾಲಪತ್ರೇಣ ಚಿಹ್ನಿತಃ ।
ಪಪ್ರಚ್ಛುಸ್ತೇ ತು ಚಾನ್ಯೋನ್ಯಮತಿವ್ಯಾಕುಲಿತಾ ಮುಹುಃ ॥ ೨೨ ॥

---

೧೭. ಯೋಗಿನಿಯರ ಗುಂಪು ಅವರ ರಕ್ತವನ್ನು ಕುಡಿಯಲಿ. ನರಿಗಳು ಅವರ ಮಾಂಸಭಕ್ಷಣದಿಂದ ತೃಪ್ತಿಹೊಂದಲಿ.

೧೮. ಸುಭಟರೆಲ್ಲರೂ ನನ್ನ ಬಾಹುಬಲವನ್ನು ನೋಡಲಿ. ನಾನು ಧನುಸ್ಸಿನಿಂದ ಬಿಡುತ್ತಿರುವ ಬಾಣಗಳ ಗುಂಪನ್ನು ನೋಡಲಿ.

೧೯. ಈರೀತಿ ಹೇಳಿ ಆ ರಾಜಪುತ್ರನಾದ ದಮನನು ಅದನ್ನು ತನ್ನ ಪಟ್ಟಣಕ್ಕೆ ಕಳುಹಿಸಿಬಿಟ್ಟನು.

೨೦-೨೧. ನಾವು ಯುದ್ಧಮಾಡಲು ಬೇಕಾದಷ್ಟು ಸೈನ್ಯವನ್ನು ಸಿದ್ಧಮಾಡು, ಎಂದು ಹೇಳಲು, ಆ ಸೇನಾಪತಿಯು ಹಾಗೇ ಮಾಡಿಕೊಂಡು ಸಿದ್ಧನಾದನು. ಅಷ್ಟರೊಳಗೆ ಕುದುರೆಯ ಕಾವಲುಗಾರರು ಬಂದರು.

೨೨. ರಾಜನ ಯಾಗದ ಕುದುರೆಯು ಎಲ್ಲಿ ಹೋಯಿತು? ಎಂದು ಒಬ್ಬರಿಗೊಬ್ಬರು ವ್ಯಾಕುಲಿತರಾಗಿ ಮಾತನಾಡಿಕೊಳ್ಳುತ್ತಿದ್ದರು.

ತಾವದ್ದದರ್ಶ ಪುರತಃ ಪ್ರತಾಪಾಗ್ರ್ಯಃ ಪರಂತಪಃ ।
ಸಜ್ಜೀಭೂತಂ ತು ಕಟಕಂ ವೀರಶಬ್ದನಿನಾದಿತಂ ॥ ೨೩ ॥

ತತ್ರಾವರ್ದ ಭಟಾಃ ಕೇಚಿನ್ನೀತೋಽಶ್ವೋಽನೇನ ಭೂಪತೇ ।
ಅನ್ಯಥಾ ಸಮ್ಮುಖಸ್ತಿಷ್ಠೇತ್ ಕಥಂ ವೀರೋ ಬಲಾನುಗಃ ॥ ೨೪ ॥

ಇತ್ಯಾಕರ್ಣ್ಯ ಪ್ರತಾಪಾಗ್ರ್ಯಃ ಪ್ರೇಷಯಾಮಾಸ ಸೇವಕಂ ।
ಸ ಗತ್ವಾ ತತ್ರ ಪಪ್ರಚ್ಛ ಕುತ್ರಾಶ್ವೋ ರಾಮಭೂಪತೇಃ ॥ ೨೫ ॥

ಕೇನ ನೀತೋ ಕುತೋ ನೀತೋ ರಾಮಂ ಜಾನಾತಿ ನೋ ಕುಧೀಃ ।
ಯಂ ಶಕ್ರಪ್ರಮುಖಾ ದೇವಾ ಬಲಿಮಾಹಾಯ ಸನ್ನತಾಃ ॥ ೨೬ ॥

ತಸ್ಯ ವೈ ಧರ್ಮರಾಜಸ್ಯ ಕುಪಿತಂ ತು ಬಲಂ ಮಹತ್ ।
ಸರ್ವಥಾ ಹಿ ಗ್ರಸಿಷ್ಯೇತ ಪ್ರಣತಿಂ ಚೇನ್ನ ಯಾಸ್ಯತಿ ॥ ೨೭ ॥

ಇತ್ಥಮುಕ್ತಂ ಸಮಾಕರ್ಣ್ಯ ತದಾ ರಾಜಸುತೋ ಬಲೀ ।
ತಂ ವೈ ಧಿಕ್ಕಾರಯಾಮಾಸ ವಾಚಂ ಜಾಲೇನ ದುರ್ಮನಾಃ ॥ ೨೮ ॥

---

೨೩. ಅಷ್ಟರಲ್ಲಿ ವೀರರು ವೀರಧ್ವನಿಯನ್ನು ಮಾಡುತ್ತಾ ಸಿದ್ಧರಾಗಿರುವುದನ್ನು ಪ್ರತಾಪಾಗ್ರ್ಯನು ಮುಂದೆ ನೋಡಿದನು.

೨೪. ಅಲ್ಲಿರತಕ್ಕ ಭಟರಲ್ಲಿ ಕೆಲವರು ಇವನೇ ಕುದುರೆಯನ್ನು ಹಿಡಿದಿದ್ದಾನೆ. ಇಲ್ಲದಿದ್ದರೆ ಎದುರಿಗೆ ಸಿದ್ಧನಾಗಿ ನಿಲ್ಲುತ್ತಿರಲಿಲ್ಲ.

೨೫. ಇದನ್ನು ಪ್ರತಾಪಾಗ್ರ್ಯನು ಕೇಳಿ ಸೇವಕನನ್ನು ಕಳುಹಿಸಿದನು. ಆ ಸೇವಕನು ಹೋಗಿ, ರಾಮಚಂದ್ರನ ಕುದುರೆ ಎಲ್ಲಿ? ಯಾರು ತೆಗೆದುಕೊಂಡು ಹೋದರು? ಏಕೆ? ಅವನು ರಾಮನನ್ನು ತಿಳಿಯನು.

೨೬-೨೭. ಯಾವ ರಾಮಚಂದ್ರನಿಗೆ ಇಂದ್ರಾದಿ ದೇವತೆಗಳೂ ಕೂಡ ಕಪ್ಪವನ್ನು ತಂದುಕೊಡುತ್ತಾರೆಯೋ ಅಂತಹ ರಾಮಚಂದ್ರನ ಸೈನ್ಯವು ಕೋಪಗೊಂಡರೆ. ಆ ಶತ್ರುಗಳು ಶರಣಾಗತರಾಗದಿದ್ದರೆ ಅವರನ್ನು ನುಂಗಿಬಿಡುತ್ತದೆ

೨೮. ಇದನ್ನು ಕೇಳಿ ದಮನನು ಈ ಮಾತಿನಿಂದ ಕೋಪಗೊಂಡು ಅವನನ್ನು ಬಯ್ದನು.

ಮಯಾ ನೀತೋ ಯಜ್ಞಹಯಃ ಪತ್ರಚಿಹ್ನಾದ್ಯಲಂಕೃತಃ ।
ಯೇ ಶೂರಾಸ್ತೇ ತು ಮಾಂ ಜಿತ್ವಾ ಮೋಚಯಂತು ಬಲಾದಿಹ ॥ ೨೯ ॥

ಸೇವಕಸ್ತದ್ವಚಶ್ಶ್ರುತ್ವಾ ರೋಷಪೂರ್ಣೋ ಹಸನ್ ಯಯೌ ।
ರಾಜ್ಞೇ ನಿವೇದಯಾಮಾಸ ಯಥಾವದುಪವರ್ಣಿತಂ ॥ ೩೦ ॥

ತಚ್ಛ್ರುತ್ವಾ ರೋಷತಾಮ್ರಾಕ್ಷಃ ಪ್ರತಾಪಾಗ್ರ್ಯೋ ಮಹಾಬಲಃ ।
ಯಯೌ ಯೋದ್ಧುಂ ರಾಜಪುತ್ರಂ ಮಹಾವೀರಪುರಸ್ಕೃತಂ ॥ ೩೧ ॥

ರಥೇನ ಕನಕಾಂಗೇನ ಚತುರ್ವಾಜಿಸುಶೋಭಿನಾ ।
ಸುಕೂಬರೇಣ ಸರ್ವಾಸ್ತ್ರಪೂರಿತೇನ ಯಯೌ ಬಲೀ ॥ ೩೨ ॥

ಧನುಷ್ಟಂಕಾರಯಾಮಾಸ ಮಹಾಬಲಸಮನ್ವಿತಃ ।
ಪುನಃ ಪುನರ್ಜಹಾಸೋಚ್ಚೈಃ ಕೋಪಾದುದ್ಗಮಿತಾಶ್ರುಕಃ ॥ ೩೩ ॥

ಅಶ್ವಚಾರಾ ಗಜಾರೂಢಾಃ ಖಡ್ಗೋಲ್ಲಸಿತಪಾಣಯಃ ।
ಅನ್ವಯುಸ್ತೇ ಪ್ರತಾಪಾಗ್ರ್ಯಂ ರೋಷಪೂರ್ಣಾಕುಲೇಕ್ಷಣಂ ॥ ೩೪ ॥

---

೨೯. ನಾನು ನಿಮ್ಮ ಯಜ್ಞದ ಕುದುರೆಯನ್ನು ಹಿಡಿದಿದ್ದೇನೆ. ಶೂರರಿದ್ದರೆ ನನ್ನನ್ನು ಜಯಿಸಿ ಬಿಡಿಸಿಕೊಳ್ಳಬಹುದು.

೩೦. ಆಳು ಆ ಮಾತನ್ನು ಕೇಳಿ ಕೋಪದಿಂದ ನಗುತ್ತ ಹೋಗಿ ರಾಜನಿಗೆ ಎಲ್ಲವನ್ನು ತಿಳಿಸಿದನು.

೩೧. ಅದನ್ನು ಕೇಳಿ ಕೋಪಗೊಂಡು ಪ್ರತಾಪಾಗ್ರ್ಯನು ಯುದ್ಧಮಾಡಲು ಹೊರಟನು.

೩೨. ನಾಲ್ಕು ಕುದುರೆಗಳು ಕಟ್ಟಿದ, ಅಸ್ತ್ರಗಳು ಸಿದ್ಧವಾದ ರಥದಿಂದ ಹೊರಟನು.

೩೩-೩೪. ಕೋಪದಿಂದ ಕಣ್ಣನ್ನು ಕೆಂಡದಂತೆ ಮಾಡಿಕೊಂಡು ಧನುಸ್ಸನ್ನು ಟಂಕಾರಮಾಡುತ್ತ ಹೊರಟನು. ಕುದುರೆಯ ರಾವುತರು, ಆನೆಯವರು, ಇವರೆಲ್ಲರೂ ತಮ್ಮ ತಮ್ಮ ಖಡ್ಗಗಳನ್ನು ತೆಗೆದುಕೊಂಡು ಅವನನ್ನು ಅನುಸರಿಸಿದರು.

ಹಸ್ತಿನಃ ಪತ್ತ್ರಯಶ್ಚೈವ ಕೋಟಿಶಃ ಪ್ರಧನೋದ್ಯತಾಃ ।
ಚಿರಕಾಲಮಭೀಪ್ಸಂತೋ ರಣಂ ವೀರೇಣ ಕಾರಿತಂ ॥ ೩೫ ॥

ತದೋದ್ಯತಂ ಸಮಾಜ್ಞಾಯ ರಿಪುಸೈನ್ಯಂ ನೃಪಾತ್ಮಜಃ ।
ಪ್ರತ್ಯುಜ್ಜಗಾಮ ವೀರಾಗ್ರ್ಯೋ ಮಹಾಬಲಪರೀವೃತಃ ॥ ೩೬ ॥

ಸನ್ನದ್ಧಃ ಕವಚೀ ಖಡ್ಗೀ ಶರಾಸನಧರೋ ಯುವಾ ।
ಲೀಲಯೈವ ಯಯೌ ಯೋದ್ಧುಂ ಮೃಗರಾಡ್ಗಜಯೂಥಕಂ ॥ ೩೭ ॥

ತದಾ ಯೋಧಾಃ ಪ್ರಕುಪಿತಾಃ ಪರಸ್ಪರವಧೈಷಿಣಃ ।
ಛಿಂದಿ ಭಿಂದೀತಿ ಭಾಷಂತೋ ರಣಕಾರ್ಯವಿಶಾರದಾಃ ॥ ೩೮ ॥

ಪತ್ತ್ರಯಃ ಪತ್ತಿಸಂಘೇನ ಗಜಾರೂಢಾಶ್ಚ ಸಾದಿಭಿಃ ।
ರಥಾರೂಢಾ ರಥಸ್ಥೈಶ್ಚ ವಾಹಾರೂಢಾಶ್ವಸಂಸ್ಥಿತೈಃ ॥ ೩೯ ॥

---

೩೫. ಆನೆಗಳೂ, ಕುದುರೆಗಳೂ, ಕೋಟಿಗಟ್ಟಲೆಯಾಗಿ ಯುದ್ಧಕ್ಕೆ ಹೊರಟವು.

೩೬. ಈರೀತಿ ಬಂದ ಸೈನ್ಯವನ್ನು ನೋಡಿ ವೀರನಾದ ದಮನನು ವೀರರಿಂದ ಕೂಡಿಕೊಂಡು ಸಿದ್ಧನಾದನು.

೩೭. ಕವಚ, ಖಡ್ಗ, ಬಿಲ್ಲು, ಬಾಣಗಳನ್ನು ಧರಿಸಿ ಸುಮ್ಮಾನದಿಂದ ಸಿಂಹವು ಆನೆಯ ಮೇಲೆ ಬೀಳುವುದಕ್ಕೆ ಹೋಗುವಂತೆ ಹೋದನು.

೩೮. ಆಗ ಯೋಧರುಗಳು ಕೋಪಗೊಂಡು ಕತ್ತರಿಸು, ಚೂರುಚೂರು ಮಾಡು, ಎಂಬುದಾಗಿ ಕೂಗಲು ಮೊದಲು ಮಾಡಿದರು.

೩೯. ಕಾಲಾಳುಗಳು ಕಾಲಾಳುಗಳೊಡನೆಯೂ ಆನೆಯವರು ಆನೆಯವ ರೊಡನೆಯೂ ರಥಿಕರು ರಥಿಕರೊಡನೆಯೂ ಕುದುರೆಯವರು ಕುದುರೆಯವರೊಡ ನೆಯೂ ಎದುರಿಸಿದರು.

ಗಜಾ ಭಿನ್ನಾ ದ್ವಿಧಾ ಜಾತಾ ಹಯಾಶ್ಚ ದ್ವಿದಳೀಕೃತಾಃ ।
ಅನೇಕರಕ್ತಧಾರಾಭಿರ್ಮೇದಿನೀ ಪೂರಿತಾ ಹ್ಯಭೂತ್ ॥ ೪೦ ॥

ತದಾ ಪ್ರಕುಪಿತೋ ರಾಜಾ ಪ್ರತಾಪಾಗ್ರ್ಯೋ ಮಹಾಬಲಃ ।
ಸ್ವಸೈನ್ಯಕದನೋದ್ಯುಕ್ತಂ ರಾಜಪುತ್ರಂ ಸಮೀಕ್ಷ್ಯ ಚ ॥ ೪೧ ॥

ಉವಾಚ ಸಾರಥಿಂ ತತ್ರ ಪ್ರಾಪಯಾಶ್ವಾನ್ಯತೋ ಮಮ ।
ಸೈನ್ಯಸ್ಯ ಕದನಾಸಕ್ತೋ ರಾಜಪುತ್ರೋ ಮಹಾಬಲಃ ॥ ೪೨ ॥

ಅಥ ವೀರಶಿರೋರತ್ನನಮಿತಾಂಘ್ರಿರ್ನೃಪಾತ್ಮಜಃ ।
ಯಯೌ ಸಮ್ಮುಖಮೇವಾಸ್ಯ ಪ್ರತಾಪಾಗ್ರ್ಯಸ್ಯ ವೀರವಾ್ ॥ ೪೩ ॥

ಸಾರಥಿಃ ಪ್ರಾಪಯಾಮಾಸ ಪ್ರತಾಪಾಗ್ರ್ಯಸ್ಯ ವಾಜಿನಃ ।
ಯತ್ರಾಸೌ ದಮನೋ ವೀರಃ ಸರ್ವಶೂರಶಿರೋಮಣಿಃ ॥ ೪೪ ॥

ಗತ್ವಾ ತಮಾಹ್ವಯಾಮಾಸ ರಾಜಪುತ್ರಂ ರಣೋದ್ಯತಂ ।
ರಥೇ ಪುರಟನಿರ್ಣಿಕ್ತೇ ತಿಷ್ಠನ್ ಕೋದಂಡದಂಡಭೃತ್ ॥ ೪೫ ॥

---

೪೦. ಆನೆಗಳೂ ಕುದುರೆಗಳೂ ಕಡಿಯಲ್ಪಟ್ಟು ರಕ್ತದಿಂದ ಭೂಮಿಯು ನೆನೆಯಿತು.

೪೧-೪೨ ಪ್ರತಾಪಾಗ್ರ್ಯನು ಕೋಪಗೊಂಡು ಸೈನ್ಯದೊಡನೆ ಸಿದ್ಧನಾಗಿ ಬಂದಿರುವ ಆ ದಮನನನ್ನು ನೋಡಿ, ಸಾರಥಿಗೆ ಆ ದಮನನಿರುವಲ್ಲಿಗೆ ರಥವನ್ನು ನಡಿಸೆಂದನು.

೪೩. ವೀರರಿಂದ ನಮಸ್ಕರಿಸಲ್ಪಡುವ ಆ ದಮನನೂ ಕೂಡ ಪ್ರತಾಪಾಗ್ರ್ಯನ ಎದುರಿಗೇ ಬಂದನು.

೪೪. ಪ್ರತಾಪಾಗ್ರ್ಯನ ಸಾರಥಿಯೂ ಕೂಡ ದಮನನೆದುರಿಗೆ ರಥವನ್ನು ಬಿಟ್ಟನು.

೪೫. ಹೋಗಿ ಪ್ರಕಾಶಮಾನವಾದ ರಥದಲ್ಲಿ ಕುಳಿತು ದಮನನನ್ನು ಕರೆದನು.

ರೇ ರಾಜಪುತ್ರಕಶಿಶೋ ತ್ವಯಾ ಬದ್ಧೋಽಶ್ವಸತ್ತಮಃ ।
ನ ಜ್ಞಾತೋಽಸ್ತಿ ಮಹಾರಾಜಃ ಸರ್ವವೀರೇಂದ್ರಸೇವಿತಃ ॥ ೪೬ ॥

ಯಸ್ಯ ಪ್ರತಾಪಂ ದೈತ್ಯೇಂದ್ರೋ ನ ಶಕ್ತಸ್ಸೋಢುಮದ್ಭುತಂ ।
ತಸ್ಯ ತ್ವಂ ವಾಜಿನಂ ನೀತ್ವಾಽಗಮಯಃ ಪುಟಭೇದನಂ ॥ ೪೭ ॥

ಮಾಂ ಜಾನೀಹಿ ಪುರಃ ಪ್ರಾಪ್ತಂ ಕಾಲರೂಪಂ ತು ವೈರಿಣಂ ।
ಮುಂಚಾಶ್ವಮರ್ಭ ಗಚ್ಛಾಶು ಬಾಲಕ್ರೀಡನಕಂ ಕುರು ॥ ೪೮ ॥

ಕಸ್ಯಾತ್ಮಜಸ್ತ್ವಂ ಕುತ್ರತ್ಯಃ ಕಥಂ ನೋಽದೀರ್ಘದರ್ಶಿನಾ ।
ಧೃತೋಽಶ್ವಸ್ತ್ವಥ ಸಂಜಾತಾ ಘೃಣಾ ಮಮ ಶಿಶೋ ತ್ವಯಿ ॥ ೪೯ ॥

ಇತ್ಥಮಾಕರ್ಣ್ಯ ದಮನಃ ಸ್ಮಿತಂ ಚಕ್ರೇ ಮಹಾಮನಾಃ ।
ಉವಾಚ ಚ ಪ್ರತಾಪಾಗ್ರ್ಯಂ ತೃಣೀಕುರ್ವಂಶ್ಚ ತದ್ಬಲಂ ॥ ೫೦ ॥

---

೪೬. ಎಲೋ! ರಾಜಪುತ್ರವಟು, ನೀನೇನೋ ಕುದುರೆಯನ್ನು ಕಟ್ಟಿದ್ದೀಯೆ. ಸರ್ವವೀರರಿಂದ ಸೇವಿಸಲ್ಪಡುತ್ತಿರುವ ಚಕ್ರವರ್ತಿಯಾದ ರಾಮಚಂದ್ರನನ್ನು ತಿಳಿಯೆ.

೪೭. ಯಾವನ ಪ್ರತಾಪವನ್ನು ರಾವಣನೂ ಕೂಡ ಸಹಿಸಲಶಕ್ತನಾದನೋ ಅವನ ಕುದುರೆಯನ್ನು ಹಿಡಿದು ಊರಿಗೆ ಕಳುಹಿಸಿದ್ದೀಯಲ್ಲ!

೪೮. ನಿನ್ನ ಮುಂದೆ ಬಂದಿರುವ ನನ್ನನ್ನು ಯಮರೂಪವಾದ ವೈರಿಯೆಂದು ತಿಳಿ. ಎಲೈ! ಮಗುವೆ, ಕುದುರೆಯನ್ನು ಬಿಟ್ಟು ಹುಡುಗರೊಡನೆ ಆಟವಾಡು.

೪೯. ನೀನಾರ ಮಗ? ಎಲ್ಲಿಯವನು? ಮುಂದಿನಾಲೋಚನೆಯಿಲ್ಲದೇ ಹೇಗೆ ಕುದುರೆಯನ್ನು ಕಟ್ಟಿ ಹಾಕಿದೆ? ಅಯ್ಯೋ! ನೀನು ಮಗುವಲ್ಲ! ನಿನ್ನಲ್ಲಿ ನನಗೆ ದಯೆ ಹುಟ್ಟುತ್ತದೆಯಲ್ಲ!

೫೦. ದಮನನು ಇದನ್ನು ಕೇಳಿ ನಕ್ಕು ವೈರಿಬಲವನ್ನು ಹುಲ್ಲಿಗಿಂತಲೂ ಕಡೆಯಾಗಿ ಕಾಣುತ್ತ ಪ್ರತಾಪಾಗ್ರ್ಯನಿಗೆ ಇಂತೆಂದನು.

॥ ದಮನ ಉವಾಚ ॥

ಮಯಾ ಬದ್ಧೋ ಬಲಾದಶ್ವೋ ನೀತಶ್ಚ ಪುಟಭೇದನಂ ।
ನಾರ್ಪಯಿಷ್ಯೇಽದ್ಯ ಸಪ್ರಾಣಃ ಕುರು ಯುದ್ಧಂ ಮಹಾಬಲ ॥ ೫೧ ॥

ತ್ವಯಾ ಯದುಕ್ತಂ ಬಾಲಸ್ತ್ವಂ ಗತ್ವಾ ಕ್ರೀಡನಕಂ ಕುರು ।
ತನ್ಮೇ ಪಶ್ಯ ಮಹಾರಾಜ ಕ್ರೀಡನಂ ರಣಮೂರ್ಧನಿ ॥ ೫೨ ॥

॥ ಶೇಷ ಉವಾಚ ॥

ಇತ್ಯುಕ್ತ್ವಾ ಸಗುಣಂ ಚಾಪಂ ವಿಧಾಯ ಸುಭುಜಾಂಗಜಃ ।
ಶರಾಣಾಂ ಶತಮಾಧತ್ತ ಪ್ರತಾಪಾಗ್ರ್ಯಸ್ಯ ವಕ್ಷಸಿ ॥ ೫೩ ॥

ಸಂಧಾಯ ಬಾಣಶತಕಂ ಶಂಖಂ ದಧ್ಮೌ ಪ್ರತಾಪವಾನ್ ।
ತೇನ ಶಂಖನಿನಾದೇನ ಕಾತರಾಣಾಂ ಭಯಂ ತ್ವಭೂತ್ ॥ ೫೪ ॥

ತಾಡಯಾಮಾಸ ಹೃದಯೇ ಬಾಣಾನಾಂ ಶತಕೇನ ಸಃ ।
ಪ್ರತಾಪಾಗ್ರ್ಯಃ ಪ್ರಚಿಚ್ಛೇದ ಲಘುಹಸ್ತಸ್ಸುಪರ್ವಣಃ ॥ ೫೫ ॥

---

೫೧. ದಮನನು ಹೇಳಿದನು:—ನಾನು ಬಲದಿಂದಲೇ ಕುದುರೆಯನ್ನು ಕಟ್ಟಿದ್ದೇನೆ. ಪಟ್ಟಣಕ್ಕೆ ಕಳುಹಿಸಿದ್ದೇನೆ. ಪ್ರಾಣವಿರುವವರೆಗೂ ಬಿಡುವುದಿಲ್ಲ. ಯುದ್ಧವನ್ನು ಮಾಡು.

೫೨. ನೀನು ಹುಡುಗನು ಹುಡುಗರೊಂದಿಗೆ ಆಟವಾಡು, ಎಂದೆಯಲ್ಲ! ಆ ಆಟವನ್ನು ಯುದ್ಧದಲ್ಲಿ ತೋರಿಸುತ್ತೇನೆ. ನೋಡು.

೫೩. ಶೇಷನು ಹೇಳಿದನು:—ಹೀಗೆಂದು ಹೇಳಿ ದಮನನು ಬಿಲ್ಲಿನ ಹೆದೆಯನ್ನು ಏರಿಸಿ ಪ್ರತಾಪಾಗ್ರ್ಯನ ಎದೆಗೆ ಗುರುಕಟ್ಟಿ ನೂರು ಬಾಣಗಳನ್ನು ಹೊಡೆದನು.

೫೪. ಬಾಣಗಳನ್ನು ಬಿಟ್ಟು ಆ ಪ್ರತಾಪಿಯು ಶಂಖವನ್ನು ಊದಿದನು. ಆ ಧ್ವನಿಯಿಂದ ಅಂಜುಬುರುಕರಿಗೆ ಭಯವುಂಟಾಯಿತು.

೫೫. ತನ್ನ ಎದೆಗೆ ಬಾಣವನ್ನು ಬಿಡಲು ಪ್ರತಾಪಾಗ್ರ್ಯನು ಅದನ್ನು ಕತ್ತರಿಸಿದನು.

ಸ ಬಾಣಚ್ಛೇದನಂ ದೃಷ್ಟ್ವಾ ಕುಪಿತೋ ವ್ಯಸೃಜಚ್ಛರಾನ್ ।
ಕಂಕಪಕ್ಷಾನ್ವಿತಾಂಸ್ತೀಕ್ಷ್ಣಾನ್ ಭಲ್ಲಾನ್ರಾಜಾತ್ಮಜೋ ಬಲೀ　　॥ ೫೬ ॥

ಆಕಾಶೇ ಭುವಿ ಮಧ್ಯೇ ಚ ಬಾಣಾ ದದೃಶಿರೇಂಚಿತಾಃ ।
ಸ್ವನಾಮಚಿಹ್ನಿತಾಸ್ತೀಕ್ಷ್ಣಾ ಧಾರಾಪಾತಸುಶೋಭಿತಾಃ　　॥ ೫೭ ॥

ಶರಾಸ್ತೇ ಬಾಹುಹೃದಯೇ ಲಗ್ನಾ ವಹ್ನಿಕಣಾನ್ ಬಹೂನ್ ।
ಸೃಜಂತಃ ಕುರ್ವತೇ ಸೈನ್ಯದಾಹನಂ ತದಭೂನ್ಮಹತ್　　॥ ೫೮ ॥

ಪ್ರತಾಪಾಗ್ರ್ಯಃ ಪ್ರಕುಪಿತಸ್ತಿಷ್ಠ ತಿಷ್ಠೇತಿ ಚ ಬ್ರುವನ್ ।
ಶರೇಣ ದಶಸಂಖ್ಯೇನ ತಾಡಯಾಮಾಸ ಮೂರ್ಧನಿ　　॥ ೫೯ ॥

ತೇ ಬಾಣಾ ರಾಜಪುತ್ರಸ್ಯ ಲಲಾಟೇ ಪರಿನಿಷ್ಠಿತಾಃ ।
ವಿರಾಜಂತಿ ಸ್ಮ ಚ ಮುನೇ ದಶ ಶಾಖಾಸ್ತರೋರಿವ　　॥ ೬೦ ॥

ತೇನ ಬಾಣಪ್ರಹಾರೇಣ ವಿವ್ಯಥೇ ನ ಮಹಾಮುನಾಃ ।
ಯಷ್ಟಿಕಾಪ್ರಹರೋ ಯದ್ವತ್ ಕುಂಜರಸ್ಸಪ್ತವರ್ಷಕಃ　　॥ ೬೧ ॥

---

೫೬. ಆ ಬಾಣಗಳನ್ನು ಕತ್ತರಿಸಿದುದನ್ನು ನೋಡಿ ಬಾಣಗಳನ್ನು ಬಿಟ್ಟು, ಮೊನೆಯಾದ ಭಲ್ಲೆಗಳನ್ನೂ ಬಿಟ್ಟನು.

೫೭. ಆ ದಮನನು ಬಿಟ್ಟ ಬಾಣಗಳು ಅವನ ಹೆಸರಿನಿಂದ ಶೋಭಿಸುತ್ತಾ ಆಕಾಶಭೂಮಿಗಳಲ್ಲೆಲ್ಲಾ ಕಾಣುತ್ತಿತ್ತು.

೫೮. ಆ ಬಾಣಗಳು ಕಿಡಿಗಳನ್ನುಗುಳುತ್ತಾ ತೋಳು ಎದೆಗಳಲ್ಲಿ ಚುಚ್ಚುತ್ತಾ ಸೈನ್ಯವನ್ನೆಲ್ಲಾ ನಾಶಮಾಡಿತು.

೫೯. ಪ್ರತಾಪಾಗ್ರ್ಯನು ಕೋಪಗೊಂಡು ನಿಲ್ಲುನಿಲ್ಲೆಂದು ಹೇಳುತ್ತಾ ಹತ್ತು ಬಾಣಗಳಿಂದ ಆ ದಮನನನ್ನು ಹೊಡೆದನು.

೬೦. ಆ ಬಾಣಗಳು ಆ ದಮನನ ಹಣೆಯಲ್ಲಿ ನೆಟ್ಟುಕೊಂಡು ಹತ್ತು ಕೊಂಬೆಗಳುಳ್ಳ ಮರದಂತೆ ಪ್ರಕಾಶಿಸಿತು.

೬೧. ಏಳುವರ್ಷದ ಆನೆಗೆ ದೊಣ್ಣೆಯಿಂದ ಹೊಡೆದರೆ ಹೇಗೆ ವ್ಯಥೆಪಡುವುದಿಲ್ಲವೋ ಅಂತೆಯೇ ಆ ಬಾಣದ ಏಟಿನಿಂದ ದಮನನು ಹೆಚ್ಚು ನೋವನ್ನು ಹೊಂದಲಿಲ್ಲ.

ಬಾಣಾನ್ಧನುಷಿ ಸಂಧಾಯ ಮುಮೋಚ ತ್ರಿಶತಾನ್ ಶುಭಾನ್ ।
ಸುವರ್ಣಪುಂಖರಚಿತಾನ್ ಮಹಾಕಾಲಾನಲೋಪಮಾನ್ ॥ ೬೨ ॥

ತೇ ಬಾಣಾಸ್ತು ಪ್ರತಾಪಾಗ್ರ್ಯವಕ್ಷೋ ಭಿತ್ವಾ ಗತಾ ಹ್ಯಧಃ ।
ಶೋಣಿತಾಕ್ತಾ ಯಥಾ ರಾಮಚಂದ್ರಭಕ್ತಿಪರಾಙ್ಮುಖಾಃ ॥ ೬೩ ॥

ಪ್ರತಾಪಾಗ್ರ್ಯಃ ಪ್ರಕುಪಿತಃ ಶರಾನ್ಮುಂಚನ್ ಸಹಸ್ರಶಃ ।
ಅಕರೋದ್ವಿರಥಂ ಸೂನುಂ ಸುಬಾಹೋಸ್ತತ್ಕ್ಷಣಾದ್ದ್ರುತಂ ॥ ೬೪ ॥

ಚತುರ್ಭಿಶ್ಚತುರೋ ವಾಹಾನ್ ದ್ವಾಭ್ಯಾಂ ಧ್ವಜಮಶಾತಯತ್ ।
ಏಕೇನ ಸಾರಥೇಃ ಕಾಯಾಚ್ಛಿರೋ ಮಹ್ಯಾಮಪಾತಯತ್ ॥ ೬೫ ॥

ಚತುರ್ಭಿಸ್ತಾಡಯಾಮಾಸ ತಂ ಸೂನುಂ ನೃಪತೇಃ ಪುನಃ ।
ತತ್ಕ್ಷಣಾಚ್ಚಾಪಮೇಕೇನ ಗುಣಯುಕ್ತಂ ಸಮಚ್ಛಿನತ್ ॥ ೬೬ ॥

ಸೋಽನ್ಯಂ ರಥಂ ಸಮಾರುಹ್ಯ ಹಯರತ್ನಸುಶೋಭಿತಂ ।
ಧನುಃ ಕರೇ ಸಮಾದಾಯ ಸಜ್ಜಂ ಚಕ್ರೇ ಮಹಾಮನಾಃ ॥ ೬೭ ॥

---

೬೨. ಆಗ ಕಾಲಾಗ್ನಿಯಂತಿರುವ ಬಾಣಗಳನ್ನು ತೆಗೆದು ಮುನ್ನೂರು ಬಾಣಗಳನ್ನು ಬಿಟ್ಟನು.

೬೩. ಆ ಬಾಣಗಳು ಅವನ ಎದೆಯನ್ನು ತೂತುಮಾಡಿಕೊಂಡು ರಕ್ತದೊಡನೆ ರಾಮಭಕ್ತಿಯಿಲ್ಲದವರು ಅಧೋಲೋಕಕ್ಕೆ ಹೋಗುವಂತೆ ಕೆಳಕ್ಕೆ ಬಿದ್ದುವು.

೬೪. ಪ್ರತಾಪಾಗ್ರ್ಯನು ಕೋಪಗೊಂಡು ಬಾಣಗಳನ್ನು ಬಿಟ್ಟು ಆ ದಮನನ ರಥವನ್ನು ನಾಶಮಾಡಿದನು.

೬೫. ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನೂ ಎರಡರಿಂದ ಧ್ವಜವನ್ನೂ ಒಂದು ಬಾಣದಿಂದ ಸಾರಥಿಯ ತಲೆಯನ್ನು ಕೆಳಗೆ ಕೆಡವಿದನು.

೬೬. ನಾಲ್ಕು ಬಾಣಗಳಿಂದ ಆ ದಮನನನ್ನು ನೋಯಿಸಿ ಒಂದು ಬಾಣದಿಂದ ಹಗ್ಗದೊಡನೆ ಬಿಲ್ಲನ್ನು ಕತ್ತರಿಸಿದನು.

೬೭. ಆ ದಮನನು ಮತ್ತೊಂದು ರಥಕ್ಕೆ ಹತ್ತಿ ಹೊಸ ಧನುಸ್ಸನ್ನು ತೆಗೆದುಕೊಂಡು ಸಿದ್ಧಪಡಿಸಿಕೊಂಡನು.

ಪ್ರತಾಪಾಗ್ರ್ಯಂ ಪ್ರತ್ಯುವಾಚ ತ್ವಯಾ ವಿಕ್ರಾಂತಮದ್ಭುತಂ ।
ಪಶ್ಯೇದಾನೀಂ ಪರಾಕ್ರಾಂತಂ ಧನುಷೋ ಮಮ ಸದ್ಭಟ ॥ ೬೮ ॥

ಏವಮುಕ್ತ್ವಾ ಸ ದಮನೋ ಬಾಣಾನ್ ದಶ ಸಮಾದದೇ ।
ಚತುರ್ಭಿಶ್ಚತುರೋ ವಾಹಾನ್ ನಿನಾಯ ಯಮಸಾದನಂ ॥ ೬೯ ॥

ಚತುರ್ಭಿಸ್ತಿಲಶಃ ಕೃತ್ತೋ ರಥಶ್ಚಕ್ರಸಮನ್ವಿತಃ ।
ಏಕೇನ ಹೃದಿ ವಿವ್ಯಾಧ ಬಾಣೇನೈಕೇನ ಸಾರಥಿಂ ॥ ೭೦ ॥

ಜಗರ್ಜ ಶಂಖಮಾಪೂರ್ಯ ಶಂಖಶಬ್ದಸಮನ್ವಿತಃ ।
ತತ್ಕರ್ಮ ಪೂಜಯಾಮಾಸ ಸಾಧು ವೀರ ಮಹಾಬಲ ॥ ೭೧ ॥

ಇತಿ ವಿಕ್ರಾಂತಮಾಲೋಕ್ಯ ಪ್ರತಾಪಾಗ್ರ್ಯೋ ರುಷಾನ್ವಿತಃ ।
ಅನ್ಯಂ ರಥಂ ಸಮಾಸ್ಥಾಯ ಯಯೌ ಯೋದ್ಧುಂ ನೃಪಾತ್ಮಜಂ ॥ ೭೨ ॥

ಉವಾಚ ವೀರ ಪಶ್ಯ ತ್ವಂ ಮಮ ವಿಕ್ರಾಂತಮದ್ಭುತಂ ।
ಇತ್ಯುಕ್ತ್ವಾಶು ಮುಮೋಚೌಘಾನ್ ಶರಾಣಾಂ ಶಿತಪರ್ವಣಾಂ ॥ ೭೩ ॥

---

೬೮. ದಮನನು, ಎಲೈ! ಪ್ರತಾಪಾಗ್ರ್ಯನೇ, ನೀನು ಅದ್ಭುತವಾದ ಪ್ರರಾಕ್ರಮವನ್ನು ತೋರಿಸಿದೆ. ಈಗ ನೋಡು ನನ್ನ ಧನಸ್ಸಿನ ಶಕ್ತಿಯನ್ನು ನೋಡು ಎಂದನು.

೬೯. ಹೀಗೆಂದು ಹೇಳಿ ಹತ್ತು ಬಾಣಗಳನ್ನು ತೆಗೆದು ನಾಲ್ಕು ಬಾಣಗಳಿಂದ ನಾಲ್ಕು ಕುದುರೆಗಳನ್ನು ಕೊಂದನು.

೭೦-೭೧. ನಾಲ್ಕು ಬಾಣಗಳಿಂದ ರಥವನ್ನು ಚಕ್ರಸಹಿತವಾಗಿ ಚೂರುಚೂರು ಮಾಡಿ, ಒಂದು ಬಾಣದಿಂದ ಸಾರಥಿಯನ್ನು ಕೊಂದು, ಒಂದು ಬಾಣವನ್ನು ಆ ಪ್ರತಾಪಾಗ್ರ್ಯನ ಎದೆಗೆ ಹೊಡೆದನು. ಅನಂತರ ಶಂಖವನ್ನು ಊದಿದನು. ಈ ಕೆಲಸವು ಬಹು ಯೋಗ್ಯವಾಗಿದೆ; ಎಂದು ಗೌರವಿಸಿದನು.

೭೨. ಈ ಪರಾಕ್ರಮವನ್ನು ನೋಡಿ ಪ್ರತಾಪಾಗ್ರ್ಯನು ಬೇರೆ ರಥವನ್ನು ಹತ್ತಿ ಯುದ್ಧಕ್ಕೆ ಬಂದನು.

೭೩. ಎಲೈ! ವೀರನೇ, ಬಹು ಶ್ಲಾಘ್ಯವಾಗಿ ಪರಾಕ್ರಮವನ್ನು ತೋರಿಸಿದೆ; ಎಂದು ಹೇಳುತ್ತಾ ಚೂಪಾಗಿರುವ ಬಾಣಗಳ ಗುಂಪನ್ನೇ ಈಚೆಗೆ ತೆಗೆದನು.

ಶರಾಸ್ಸರ್ವತ್ರ ದೃಶ್ಯಂತೇ ಕುಂಜರೇಷು ಹಯೇಷು ಚ ।
ಪರಬ್ರಹ್ಮೇವ ಸರ್ವತ್ರ ವ್ಯಾಪ್ತಾತ್ಮಾಂತರಗೋಚರಾಃ ॥ ೭೪ ॥

ತಂ ರಾಜಪುತ್ರಂ ಶಿತಬಾಣಕೋಟಿಭಿ
ರ್ವ್ಯಾಪ್ತಂ ವಿಧಾಯಾಶು ಜಗರ್ಜ ವಿಕ್ರಮೀ ।
ಸಂಹರ್ಷಯನ್ ಸ್ವೀಯಗಣಾನ್ ಪರಾನ್ಮಹಾನ್
ಕುರ್ವನ್ ಹೃದಾ ಶೂನ್ಯತಮಾನ್ ಗತಾಸುಕಾನ್ ॥ ೭೫ ॥

ಸ ರಾಜಪುತ್ರಶ್ಶಿತಸಾಯಕವ್ರಜೈಃ
ಸಂಪೂರ್ಣಮಾತ್ಮಾನಮವೇಕ್ಷ್ಯ ರೋಷಿತಃ ।
ಜಗ್ರಾಹ ಶಸ್ತ್ರಾಣಿ ದುರಂತವಿಕ್ರಮೋ
ಧನುಶ್ಚ ಧುನ್ವನ್ ಭುಜದಂಡಯೋರ್ಮಹಾನ್ ॥ ೭೬ ॥

ಚಕರ್ತ ಸರ್ವಾಣ್ಯಸ್ತ್ರಾಣಿ ಶಸ್ತ್ರಾಣಿ ಚ ಮಹಾಬಲಃ ।
ಏಷ ತಾಮ್ರೇಕ್ಷಣೋ ಮುಂಚನ್ ಶರಾನ್ ವೈರಿವಿದಾರಿಣಃ ॥ ೭೭ ॥

---

೭೪. ಎಲ್ಲಾ ಕಡೆಯಲ್ಲೂ ವ್ಯಾಪಿಸಿಕೊಂಡು ಒಳಗೆ ತಿಳಿಯುವ ಪರಬ್ರಹ್ಮನಂತೆ ಆ ಬಾಣಗಳು ಕುದುರೆ, ಆನೆ, ಇವುಗಳ ಮೇಲೆ ಎಲ್ಲೆಲ್ಲಿಯೂ ಕಾಣುತ್ತ ಒಳಗೆ ಹೊಕ್ಕವು.

೭೫. ಆ ದಮನನನ್ನು ಚೂಪಾದ ಬಾಣಗಳಿಂದ ನೋಯಿಸಿ ಗರ್ಜಿಸಿದನು. ಅದರಿಂದಲೇ ಶತ್ರುಗಳನ್ನು ಕೊಲ್ಲುತ್ತಾ ತಮ್ಮವರನ್ನು ಹರ್ಷಿಸುವಂತೆ ಮಾಡುತ್ತಿದ್ದನು.

೭೬. ಆ ರಾಜಪುತ್ರನು ತಾನು ಬಾಣಗಳಿಂದ ಚುಚ್ಚಲ್ಪಟ್ಟುದನ್ನು ನೋಡಿ ಕೋಪಗೊಂಡನು. ಅನಂತರ ಧನುಸ್ಸನ್ನು ಸದ್ದುಮಾಡುತ್ತ ಉತ್ತಮವಾದ ಅಸ್ತ್ರಗಳನ್ನು ಹಿಡಿದನು.

೭೭. ಇವನು ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಶರಗಳನ್ನು ಬಿಟ್ಟು ಎಲ್ಲಾ ಶಸ್ತ್ರಗಳನ್ನು ನಾಶಮಾಡಿದನು.

ತಚ್ಛಸ್ತ್ರಜಾಲಂ ನಿರ್ಧೂಯ ರಾಜಪುತ್ರೋ ಜಗಾದ ತಂ ।
ಕ್ಷಮಸ್ವೈಕಂ ಪ್ರಹಾರಂ ಮೇ ಯದಿ ಶೂರೋಽಸಿ ಮಾ ರಿಷ ॥ ೭೮ ॥

ಯದ್ಯನೇನ ಭವಂತಂ ವೈ ರಥಾಚ್ಚ ಪಾತಯಾಮಿ ನ ।
ಪ್ರತಿಜ್ಞಾಂ ಶೃಣು ಮೇ ವೀರ ಮಮ ಗರ್ವೇಣ ನಿರ್ಮಿತಾಂ ॥ ೭೯ ॥

ವೇದಂ ನಿಂದಂತಿ ಯೇ ಮತ್ತಾ ಹೇತುವಾದವಿಚಕ್ಷಣಾಃ ।
ತೇಷಾಂ ಪಾಪಂ ಮಮೈವಾಸ್ತು ನರಕಾರ್ಣವಮಜ್ಜಕಂ ॥ ೮೦ ॥

ಇತ್ಯುಕ್ತ್ವಾ ಬಾಣಮಾಧತ್ತ ಕೋದಂಡೇ ಕಾಲಸನ್ನಿಭಂ ।
ಜ್ವಾಲಾಮಾಲಾಕುಲಂ ತೀಕ್ಷ್ಣಂ ನಿಷಂಗಾದುದ್ಧೃತಂ ವರಂ ॥ ೮೧ ॥

ಸ ಮುಕ್ತೋ ನೃಪವರ್ಯೇಣ ಹೃದಿ ಲಕ್ಷೀಕೃತಶ್ಶರಃ ।
ಜಗಾಮ ತರಸಾ ತಂ ವೈ ಕಾಲಾನಲಸಮಪ್ರಭಃ ॥ ೮೨ ॥

ಪ್ರತಾಪಾಗ್ರ್ಯಶ್ಶರಂ ದೃಷ್ಟ್ವಾ ಸ್ವಪಾತನಸಮುದ್ಯತಂ ।
ಬಾಣಾನ್ಧನುಷ್ಯಥಾಧತ್ತ ಶರಚ್ಛೇದಾಯ ವೈ ಶಿತಾನ್ ॥ ೮೩ ॥

---

೭೮. ಆ ದಮನನು ಅವನ ಶಸ್ತ್ರಗಳನ್ನು ನಾಶಮಾಡಿ ಎಲೈ! ಶೂರನೇ, ನೀನು ಯೋಧನಾಗಿದ್ದರೆ ಇದೊಂದು ಏಟನ್ನು ತಡೆದುಕೋ.

೭೯. ಎಲೈ! ವೀರನೇ, ಈ ಶಸ್ತ್ರದಿಂದ ನಿನ್ನನ್ನು ರಥದಿಂದ ಕೆಳಕ್ಕೆ ಕೆಡವ ದಿದ್ದರೆ ನಾನು ಮಾಡುವ ಪ್ರತಿಜ್ಞೆಯನ್ನು ಕೇಳು.

೮೦. ಯಾರು ಮದಿಸಿ ಹೇತುವನ್ನು ಪ್ರಧಾನವಾಗಿಟ್ಟುಕೊಂಡು ವೇದವನ್ನು ನಿಂದಿಸುತ್ತಾರೋ ಅವರ ಪಾಪವೂ, ಆ ನರಕವೂ ನನಗೆ ಬರಲಿ.

೮೧. ಹೀಗೆಂದು ಹೇಳಿ ಜ್ವಾಲೆಯನ್ನು ಉಗುಳುತ್ತಿರುವ ಹರಿತವಾದ ಬಾಣ ವನ್ನು ಬತ್ತಳಿಕೆಯಿಂದ ತೆಗೆದು ಧನುಸ್ಸಿನಲ್ಲಿ ಹೂಡಿದನು.

೮೨. ಎದೆಯನ್ನು ಗುರಿಯಿಟ್ಟು ಹೊಡೆದ ಆ ಬಾಣವು ಕಾಲಾಗ್ನಿಯಂತೆ ವೇಗವಾಗಿ ಹೊರಟಿತು.

೮೩. ತನ್ನನ್ನು ಕೆಡವುದರಲ್ಲಿ ಸಮರ್ಥವಾದ ಆ ಬಾಣಗಳನ್ನು ಪ್ರತಾಪಾ ಗ್ರ್ಯನು ನೋಡಿ ಶರವನ್ನು ಕತ್ತರಿಸಲು ಹರಿತವಾದ ಶರಗಳನ್ನು ಹೂಡಿದನು.

ಸ ಬಾಣಸ್ಸರ್ವಬಾಣಾಂಸ್ತಾಶ್ಛಿಂರ್ಧ ಮಧ್ಯತ ಏವ ಹಿ ।
ಜಗಾಮ್ಯೈವ ಪ್ರತಾಪಾಗ್ರ್ಯಹೃದಯಂ ಧೈರ್ಯಸಂಯುತಂ ॥ ೮೪ ॥

ಸ ಲಗ್ನೋ ಹೃದಿ ನಾಳೀಕೋ ವಿವೇಶ ತದನಂತರಂ ।
ರಾಜಾ ಕೃತಪ್ರಹಾರಸ್ತು ಪಪಾತ ಪೃಥಿವೀತಲೇ ॥ ೮೫ ॥

ಮೂರ್ಛಿತಂ ಚೇತನಾಹೀನಂ ರಥೋಪಸ್ಥಾದ್ಗತಂ ಭುವಿ ।
ಸಾರಥಿಸ್ತಂ ಸಮಾದಾಯಾಪೋವಾಹ ರಣಮಂಡಲಾತ್ ॥ ೮೬ ॥

ಹಾಹಾಕಾರೋ ಮಹಾನಾಸೀದ್ಬಲಂ ಭಗ್ನಂ ಗತಂ ತತಃ ।
ಯತ್ರ ಶತ್ರುಘ್ನನಾಮಾಸೌ ವೀರಕೋಟಿಪರಿವೃತಃ ॥ ೮೭ ॥

ರಾಜಾತ್ಮಜೋ ಜಯಂ ಪ್ರಾಪ್ಯ ಪ್ರತಾಪಾಗ್ರ್ಯಂ ವಿಜಿತ್ಯ ಸಃ ।
ಪ್ರತೀಕ್ಷಾಂ ತು ಚಕಾರಾಸ್ಯ ಶತ್ರುಘ್ನಸ್ಯ ಚ ಭೂಪತೇಃ ॥ ೮೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ರಾಜಪುತ್ರಯುದ್ಧಕಥನಂ
ನಾಮ ತ್ರಯೋವಿಂಶೋಽಧ್ಯಾಯಃ

---

೮೪. ಆ ದಮನನ ಬಾಣವು ಇವನ ಬಾಣಗಳನ್ನು ಮಧ್ಯದಲ್ಲಿಯೇ ಕತ್ತರಿಸಿ ಪ್ರತಾಪಾಗ್ರ್ಯನ ಹೃದಯವನ್ನು ಹೊಕ್ಕಿತು.

೮೫. ಆ ಬಾಣವು ಚುಚ್ಚಿಕೊಂಡು ಅನಂತರ ಪೂರ್ತಿಯಾಗಿ ಒಳಗೆ ಹೋಯಿತು. ಏಟು ತಿಂದು ಪ್ರತಾಪಾಗ್ರ್ಯನು ಭೂಮಿಯಲ್ಲಿ ಬಿದ್ದನು.

೮೬. ಮೂರ್ಛೆ ಬಂದು ನೆಲದಲ್ಲಿ ಬಿದ್ದ ಈತನನ್ನು ಸಾರಥಿಯು ಯುದ್ಧ ರಂಗದಿಂದ ತೆಗೆದುಕೊಂಡು ಹೋದನು.

೮೭. ಹಾಹಾಕಾರವು ಎಲ್ಲಾ ಕಡೆಯಲ್ಲಿಯೂ ಹುಟ್ಟಿ ಸೈನ್ಯವೆಲ್ಲವೂ ಸೋತು ಓಡಿ ಶತ್ರುಘ್ನನಿರುವಲ್ಲಿಗೆ ಹೋಯಿತು.

೮೮. ರಾಜಪುತ್ರನಾದ ದಮನನು ಪ್ರತಾಪಾಗ್ರ್ಯನನ್ನು ಸೋಲಿಸಿ ಜಯವನ್ನು ಹೊಂದಿ, ಶತ್ರುಘ್ನನ ಬರುವಿಕೆಯನ್ನು ಎದುರುನೋಡುತ್ತಿದ್ದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ರಾಜಪುತ್ರನಿಗೆ ಜಯಲಭಿಸಿತೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಚತುರ್ವಿಂಶೋಽಧ್ಯಾಯಃ

॥ ಶೇಷ ಉವಾಚ ॥

ಶತ್ರುಘ್ನಸ್ತು ಕ್ರುಧಾವಿಷ್ಟೋ ದಂತಾನ್ದಂತೈರ್ವಿನಿಷ್ಪಿಷನ್ ।
ಹಸ್ತೌ ಧುನ್ವಂಲ್ಲಿಹಾನೋಽಯಮಧರಂ ಜಿಹ್ವಯಾಽ ಸಕೃತ್ ॥ ೧ ॥

ಪುನಃ ಪುನಸ್ತಾನ್ಸಪ್ರಚ್ಛ ಕೇನಾಶ್ವೋ ನೀಯತೇ ಮಮ ।
ಪ್ರತಾಪಾಗ್ರ್ಯಃ ಕೇನ ಜಿತಃ ಸರ್ವಶೂರಶಿರೋಮಣಿಃ ॥ ೨ ॥

ಸೇವಕಾಸ್ತೇ ತದಾ ಪ್ರೋಚುರ್ದಮನೋ ನಾಮ ಶತ್ರುಹನ್ ।
ಸುಬಾಹುಜಃ ಪ್ರತಾಪಾಗ್ರ್ಯಂ ಜಿತವಾನ್ ಹಯಮಾಹರತ್ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧-೨. ಶೇಷನು ಹೇಳಿದನು:—ಇದನ್ನು ಕೇಳಿ ಶತ್ರುಘ್ನನು ಕೋಪಗೊಂಡು ಹಲ್ಲನ್ನು ಕಡಿಯುತ್ತಾ, ಕೈ ಅಲ್ಲಾಡಿಸುತ್ತ, ತುಟಿಯನ್ನು ಕಚ್ಚಿಕೊಳ್ಳುತ್ತ, ನೆಕ್ಕಿಕೊಳ್ಳುತ್ತ ಯಾರು ತನ್ನ ಕುದುರೆಯನ್ನು ತೆಗೆದುಕೊಂಡು ಹೋದವರು? ಪ್ರತಾಪಾಗ್ರ್ಯನನ್ನು ಜಯಿಸಿದವರು ಯಾರು? ಎಂದು ಪದೇಪದೇ ಕೇಳಿದನು.

೩. ಆಗ ಆಳುಗಳು ಸುಬಾಹುವಿನ ಮಗನಾದ ದಮನನೆಂಬುವನು ಪ್ರತಾಪಾಗ್ರ್ಯನನ್ನು ಜಯಿಸಿ ಕುದುರೆಯನ್ನು ತೆಗೆದುಕೊಂಡು ಹೋದನು ಎಂದರು.

ಇತಿ ಶ್ರುತ್ವಾ ಹಯಂ ನೀತಂ ದಮನೇನ ಸ್ವವೈರಿಣಾ ।
ಆಜಗಾಮ ಸ ವೇಗೇನ ಯತ್ರಾಭೂದ್ರಣಮಂಡಲಂ ॥ ೪ ॥

ತತ್ರಾಪಶ್ಯತ್ಸ ಶತ್ರುಘ್ನೋ ಗಜಾನ್ದೀರ್ಣಕಪೋಲಕಾನ್ ।
ಪರ್ವತಾನಿವ ರಕ್ತೋದೇ ಮಜ್ಜಮಾನಾನ್ಮದೋದ್ಧತಾನ್ ॥ ೫ ॥

ಹಯಾಸ್ತತ್ರ ನಿಷಾರೋಹಕರ್ತೃಭಿಸ್ಸಹಿತಾಃ ಕ್ಷತಾಃ ।
ಮೃತಾ ವೀರೇಣ ದದೃಶಿರೇ ಶತ್ರುಘ್ನೇನ ಸುಕೋಪಿನಾ ॥ ೬ ॥

ನರಾನ್ರಥಾನ್ಗಜಾನ್ಭಗ್ನಾನ್ ವೀಕ್ಷಮಾಣಸ್ಸ ಶತ್ರುಹಾ ।
ಅತೀವ ಚುಕ್ರುಭೇ ಯದ್ವತ್ಪ್ರಳಯೇ ಪ್ರಳಯಾರ್ಣವಃ ॥ ೭ ॥

ಪುರತೋ ದಮನಂ ವೀಕ್ಷ್ಯ ಹಯನೇತಾರಮುದ್ಭಟಂ ।
ಪ್ರತಾಪಾಗ್ರ್ಯಸ್ಯ ಜೇತಾರಂ ತೃಣೀಕೃತ್ಯ ನಿಜಂ ಬಲಂ ॥ ೮ ॥

ತದಾ ರಾಜಾ ಪ್ರತ್ಯುವಾಚ ಯೋಧಾನ್ಕೋಪಾಕುಲೇಕ್ಷಣಃ ।
ಕೋಽಸೌ ದಮನಜೇತಾತ್ರ ಸರ್ವಶಸ್ತ್ರಾಸ್ತ್ರಧಾರಕಃ ॥ ೯ ॥

---

೪. ದಮನನು ಕುದುರೆಯನ್ನು ತೆಗೆದುಕೊಂಡು ಹೋದುದನ್ನು ಕೇಳಿ ಯುದ್ಧ ನಡೆದ ಜಾಗಕ್ಕೆ ಶತ್ರುಘ್ನನು ಬಂದನು.

೫. ಅಲ್ಲಿ ಶತ್ರುಘ್ನನು ಕಪೋಲಗಳು ಒಡೆದು ಸತ್ತು ಬಿದ್ದಿರುವ ಆನೆಗಳನ್ನು ರಕ್ತದ ಸಮುದ್ರದಲ್ಲಿ ಬಿದ್ದಿರುವ ಪರ್ವತಗಳಂತೆ ನೋಡಿದನು.

೬. ಕುದುರೆಗಳು ತಮ್ಮ ಸವಾರರೊಡನೆ ಸತ್ತುಬಿದ್ದಿರುವುದನ್ನು ಆ ಶತ್ರುಘ್ನನು ಕೋಪದಿಂದ ನೋಡಿದನು.

೭. ಮನುಷ್ಯರನ್ನೂ ರಥಗಳನ್ನೂ ಆನೆಗಳನ್ನೂ ಈರೀತಿ ನೋಡಿ ಪ್ರಳಯ ಕಾಲದ ಸಮುದ್ರದಂತೆ ಕೋಪದಿಂದ ಉಕ್ಕಿದನು.

೮. ಪ್ರತಾಪಾಗ್ರ್ಯನನ್ನು ಜಯಿಸಿ ಕುದುರೆಯನ್ನು ನಡೆಸುತ್ತಾ, ರಾಮಸೈನ್ಯವನ್ನು ಹುಲ್ಲಿಗಿಂತಲೂ ಕಡೆಯಾಗಿ ಕಾಣುತ್ತಿರುವ ದಮನನನ್ನು ನೋಡಿದನು.

೯. ಆಗ ಶತ್ರುಘ್ನನು ಯೋಧರನ್ನು ನೋಡುತ್ತ ನಿಮ್ಮಲ್ಲಿ ದಮನನನ್ನು ಜಯಿಸುವ ಶಸ್ತ್ರಾಸ್ತ್ರಧಾರಿಗಳು ಯಾರಿದ್ದೀರಿ ? ಎಂದನು.

ಯೋ ವೈ ರಾಜಸುತಂ ವೀರಂ ರಣಕರ್ಮವಿಶಾರದಂ ।
ಜೇಷ್ಯತ್ಯಸ್ತ್ರೇಣ ನಿರ್ಭೀತಃ ಸಜ್ಜೀಭೂತೋ ಭವತ್ವಯಂ ॥ ೧೦ ॥

ಇತಿವಾಕ್ಯಂ ಸಮಾಕರ್ಣ್ಯ ಪುಷ್ಕಲಃ ಪರವೀರಹಾ ।
ದಮನಂ ಜೇತುಮುದ್ಯುಕ್ತೋ ಜಗಾದ ವಚನಂ ತ್ವಿದಂ ॥ ೧೧ ॥

ಸ್ವಾಮಿನ್ ಕ್ವಾಯಂ ದಮನಕಃ ಕ್ವ ತೇಽಪರಿಮಿತಂ ಬಲಂ ।
ಜೇಷ್ಯೇಽಹಂ ತ್ವತ್ಪ್ರತಾಪೇನ ಗಚ್ಛಾಮ್ಯೇಷ ಮಹಾಮತೇ ॥ ೧೨ ॥

ಸೇವಕೇ ಮಯಿ ಯುದ್ಧಾಯ ಸ್ಥಿತೇ ಕೈರ್ನೀಯತೇ ಹಯಃ ।
ರಘುನಾಥಪ್ರತಾಪೋಽಯಂ ಸರ್ವಂ ಕೃತ್ಯಂ ಕರಿಷ್ಯತಿ ॥ ೧೩ ॥

ಸ್ವಾಮಿನ್ ಶೃಣು ಪ್ರತಿಜ್ಞಾಂ ಮೇ ತವ ಮೋದಪ್ರದಾಯಿನೀಂ ।
ವಿಜೇಷ್ಯೇ ದಮನಂ ಯುದ್ಧೇ ರಣಕರ್ಮವಿಚಕ್ಷಣಂ ॥ ೧೪ ॥

---

೧೦. ರಣಕರ್ಮದಲ್ಲಿ ಪಂಡಿತನಾದ ದಮನನನ್ನು ಭೀತಿಯಿಲ್ಲದೆ ಜಯಿಸತಕ್ಕ ವೀರನು ಸಿದ್ಧನಾಗಲಿ.

೧೧. ವೀರನಾದ ಪುಷ್ಕಳನು ಈ ಮಾತನ್ನು ಕೇಳಿ ದಮನನನ್ನು ಜಯಿಸಲು ಸಿದ್ಧನಾಗಿ ಇಂತೆಂದನು.

೧೨. ಸ್ವಾಮಿಾ! ಈ ಅಲ್ಪವಾದ ದಮನನೆಷ್ಟರವನು? ಬಹುವಾದ ನಿನ್ನ ಬಲವೆಲ್ಲಿಯದು? ನಿನ್ನ ಅನುಗ್ರಹದಿಂದ ನಾನೇ ಜಯಿಸುತ್ತೇನೆ.

೧೩. ಸೇವಕನಾದ ನಾನು ಯುದ್ಧಕ್ಕೆ ನಿಂತರೆ, ಯಾವನು ತಾನೆ ಕುದುರೆಯನ್ನು ಹಿಡಿದುಕೊಂಡು ಹೋದಾನು? ರಾಮಚಂದ್ರನ ಪ್ರತಾಪವೇ ಎಲ್ಲಾ ಕೆಲಸವನ್ನೂ ಮಾಡುತ್ತದೆ.

೧೪-೧೫. ಸ್ವಾಮಿ, ತಮಗೆ ಸಂತೋಷವನ್ನುಂಟುಮಾಡಲು ಪ್ರತಿಜ್ಞೆಮಾಡುತ್ತೇನೆ. ದಮನನನ್ನು ಯುದ್ಧದಲ್ಲಿ ಜಯಿಸಿಯೇ ಜಯಿಸುತ್ತೇನೆ. ಅವನನ್ನು

ರಾಮಚಂದ್ರಪದಾಂಭೋಜಮಧ್ವಾಸ್ವಾದವಿಯೋಗಿನಾಂ ।
ಯದಘಂ ತು ಭವೇತ್ತಸ್ಮೇ ದಮನಂ ನ ಜಯೇ ಯದಿ ॥ ೧೫ ॥

ಪುತ್ರೋ ಯೋ ಮಾತೃಪಾದಾನ್ಯತ್ತೀರ್ಥಂ ಮತ್ವಾ ತಯಾ ಸಹ ।
ವಿರುಧ್ಯೇತ್ತತ್ತಮೋ ಮಹ್ಯಂ ನ ಜಯೇ ದಮನಂ ಯದಿ ॥ ೧೬ ॥

ಅದ್ಯ ಮದ್ಬಾಣನಿರ್ಭಿನ್ನಮಹೋರಸ್ಕೋ ನೃಪಾಂಗಜಃ ।
ಅಲಂಕರೋತು ಪ್ರಧನೇ ಭೂತಲಂ ಶಯನೇನ ಹಿ ॥ ೧೭ ॥

॥ ಶೇಷ ಉವಾಚ ॥

ಇತಿ ಪ್ರತಿಜ್ಞಾಮಾಕರ್ಣ್ಯ ಪುಷ್ಕಲಸ್ಯ ರಘೂದ್ವಹಃ ।
ಜಹರ್ಷ ಚಿತ್ತೇ ತೇಜಸ್ವೀ ನಿದಿದೇಶ ರಣಂ ಪ್ರತಿ ॥ ೧೮ ॥

ಆಜ್ಞಪ್ತೋಽಸೌ ಯಯೌ ಸೈನ್ಯೈರ್ಬಹುಭಿಃ ಪರಿವಾರಿತಃ ।
ಯತ್ರಾಸ್ತೇ ದಮನೋ ರಾಜಪುತ್ರಃ ಶೂರಕುಲೋದ್ಭವಃ ॥ ೧೯ ॥

---

ಜಯಿಸದಿದ್ದಲ್ಲಿ ರಾಮಚಂದ್ರನ ಪಾದಾಬ್ಜದಲ್ಲಿ ಆಸಕ್ತರಾಗದವರಿಗೆ ಬರುವ ಪಾಪವು ನನಗೆ ಬರಲಿ.

೧೬. ದಮನನನ್ನು ಜಯಿಸದಿದ್ದರೆ ಯಾವ ಮಗನು ತಾಯಿಗಿಂತ ಮತ್ತೊಂದು ಪದಾರ್ಥವು ಪಾವನವಾದುದಿದೆ ಎಂದು ತಿಳಿದು ಅವಳಲ್ಲಿ ಹಗೆತನ ಮಾಡುತ್ತಾನೋ ಅವನ ಪಾಪವು ನನಗೆ ಬರಲಿ.

೧೭. ಈಗ ನನ್ನ ಬಾಣದಿಂದ ಸೀಳಲ್ಪಟ್ಟವನಾಗಿ ಆ ದಮನನು ಯುದ್ಧ ಭೂಮಿಯಲ್ಲಿ ಮಲಗಲಿ.

೧೮. ಶೇಷನು ಹೇಳಿದನು:—ಪುಷ್ಕಲನ ಈ ಪ್ರತಿಜ್ಞೆಯನ್ನು ಕೇಳಿ ಶತ್ರುಘ್ನನು ಮನಸ್ಸಿನಲ್ಲೇ ಸಂತೋಷಪಡುತ್ತ ಯುದ್ಧಕ್ಕೆ ಅಪ್ಪಣೆಮಾಡಿದನು.

೧೯. ಆಜ್ಞೆಯನ್ನು ಹೊಂದಿ ಶೂರನಾದ ದಮನನಿರುವಲ್ಲಿಗೆ ಸೈನ್ಯದೊಡನೆ ಹೋದನು.

**ದಮನೋಽಪಿ ತಮಾಜ್ಞಾಯ ಹ್ಯಾಗತಂ ರಣಮಂಡಲೇ ।**
**ಪ್ರತ್ಯುಜ್ಜಗಾಮ ವೀರಾಗ್ರ್ಯಃ ಸ್ವಸೈನ್ಯಪರಿವಾರಿತಃ ॥ ೨೦ ॥**

**ಅನ್ಯೋನ್ಯಂ ತೌ ಸಮ್ಮಿಲಿತೌ ರಥಸ್ಥೌ ರಥಶೋಭಿನೌ ।**
**ಸಮರೇ ಶಕ್ರದೈತ್ಯೌ ಕಿಂ ಯುದ್ಧಾರ್ಥಂ ರಣಮಾಗತೌ ॥ ೨೧ ॥**

**ಉವಾಚ ಪುಷ್ಕಲಸ್ತಂ ವೈ ರಾಜಪುತ್ರಂ ಮಹಾಬಲಂ ।**
**ರಾಜಪುತ್ರ ದಮನಕ ಮಾಂ ಜಾನೀಹಿ ಸಮಾಗತಂ ॥ ೨೨ ॥**

**ಸಪ್ರತಿಜ್ಞಂ ತು ಯುದ್ಧಾಯ ಭರತಾತ್ಮಜಮುದ್ಭಟಂ ।**
**ಪುಷ್ಕಳೇನ ಸ್ವನಾಮ್ನಾ ಚ ಲಕ್ಷಿತಂ ವಿದ್ಧಿ ಸತ್ತಮ ॥ ೨೩ ॥**

**ರಘುನಾಥಪದಾಂಭೋಜನಿತ್ಯಸೇವಾಮಧುವ್ರತಂ ।**
**ತ್ವಾಂ ಜೇಷ್ಯೇ ಶಸ್ತ್ರಸಂಘೇನ ಸಜ್ಜೀಭವ ಮಹಾಮತೇ ॥ ೨೪ ॥**

**ಇತಿ ವಾಕ್ಯಂ ಸಮಾಕರ್ಣ್ಯ ದಮನಃ ಪರವೀರಹಾ ।**
**ಪ್ರತ್ಯುವಾಚ ಹಸನ್ವಾಗ್ಮೀ ನಿರ್ಭಯೋ ದೃಷ್ಟವಿಕ್ರಮಃ ॥ ೨೫ ॥**

---

೨೦. ದಮನನು, ಪುಷ್ಕಳನು ಯುದ್ಧಕ್ಕೆ ಬಂದುದನ್ನು ನೋಡಿ ಆ ವೀರ ಶಿರೋಮಣಿಯನ್ನು ಸೈನ್ಯದೊಡನೆ ಎದುರಿಸಿದನು.

೨೧. ಅವರಿಬ್ಬರೂ ಕೂಡಿ ರಥದಲ್ಲಿ ಕುಳಿತಿದ್ದರೆ, ಯುದ್ಧದಲ್ಲಿ ಯುದ್ಧಕ್ಕೋಸ್ಕರ ಬಂದ ಇಂದ್ರವೃತ್ರರಂತಿದ್ದು ಶೋಭಿಸಿದರು.

೨೨. ರಾಜಪುತ್ರನಾದ ದಮನನೇ, ನಾನು ಯುದ್ಧಕ್ಕೆ ಬಂದಿದ್ದೇನೆಂದು ತಿಳಿ ಎಂದು ಪುಷ್ಕಳನು ಹೇಳಿದನು.

೨೩. ಪ್ರತಿಜ್ಞೆಮಾಡಿಕೊಂಡು ಬಂದ ಭರತನ ಮಗನು. ನನ್ನ ಹೆಸರು ಪುಷ್ಕಲನೆಂದು ತಿಳಿ.

೨೪. ರಘುನಾಥನ ಸೇವಾಸಕ್ತನು. ನಿನ್ನನ್ನು ಶಸ್ತ್ರದಿಂದ ಜಯಿಸುತ್ತೇನೆ ಸಿದ್ಧನಾಗು.

೨೫. ಇದನ್ನು ಕೇಳಿ ಶೂರನಾದ ದಮನನು ನಿರ್ಭಯನಾಗಿ ನಗುತ್ತ ಹೇಳಿದನು.

ಸುಬಾಹುಪುತ್ರಂ ದಮನಂ ಪಿತೃಭಕ್ತಿಹೃತಾಘಕಂ ।
ವಿದ್ಧಿ ಮಾಮಶ್ವನೇತಾರಂ ಶತ್ರುಘ್ನಸ್ಯ ಮಹೀಪತೇಃ ॥ ೨೬ ॥

ಜಯೋ ದೈವವಿಸೃಷ್ಟೋಽಯಂ ಯಸ್ಯ ಚಾಲಂಕರಿಷ್ಯತಿ ।
ಸ ಪ್ರಾಪ್ನೋತಿ ನಿರೀಕ್ಷಸ್ವ ಬಲಂ ಮೇ ರಣಮೂರ್ಧನಿ ॥ ೨೭ ॥

ಇತ್ಯುಕ್ತ್ವಾ ಸಶರಂ ಚಾಪಂ ವಿಧಾಯಾಕರ್ಣಪೂರಿತಂ ।
ಮುಮೋಚ ಬಾಣಾನ್ನಿಶಿತಾನ್ ವೈರಿಪ್ರಾಣಾಪಹಾರಿಣಃ ॥ ೨೮ ॥

ತೇ ಬಾಣಾಸ್ತ್ವಾವಲೀಭೂತಾಶ್ಛಾದಯಾಮಾಸುರಂಬರಂ ।
ಸೂರ್ಯಭಾನುಪ್ರಭಾ ಯತ್ರ ಬಾಣಚ್ಛಾಯಾನಿವಾರಿತಾ ॥ ೨೯ ॥

ಗಜಾನಾಂ ಕಟಭಿತ್ತಿಷು ಲಗ್ನಾ ಸಾಯಕಸಂತತಿಃ ।
ಅಲಂಕರೋತಿ ಧಾತೂನಾಂ ರಾಗಾ ಇವ ವಿಚಿತ್ರಿತಾಃ ॥ ೩೦ ॥

ಪತಿತಾಸ್ತತ್ರ ದೃಶ್ಯಂತೇ ನರಾ ವಾಹಾ ಗಜಾ ರಥಾಃ ।
ಶರವ್ರಾತೇನ ನೃಪತೇಃ ಸುತೇನ ಪರಿತಾಡಿತಾಃ ॥ ೩೧ ॥

---

೨೬. ನಾನು ಸುಬಾಹುವಿನ ಮಗನು. ಪಿತೃಭಕ್ತಿಪರಾಯಣನು. ಶತ್ರುಘ್ನನ ಕುದುರೆಯನ್ನು ನಾನೇ ತೆಗೆದುಕೊಂಡು ಹೋಗಿರುವೆನೆಂದು ತಿಳಿ.

೨೭. ಜಯವೆಂಬುದು ಅದೃಷ್ಟದ ಅಧೀನವಾದುದು. ಅದು ಯಾವನಿಗೆ ಬರುತ್ತದೆಯೋ ಅವನಿಗೆ ಬರಲಿ. ನನ್ನ ಬಲವನ್ನು ರಣದಲ್ಲಿ ನೋಡು.

೨೮. ಇಂತೆಂದು ಹೇಳಿ ಬಾಣಸಂಧಾನಮಾಡಿ ಕಿವಿಯವರೆಗೂ ಎಳೆದು ಬಿಟ್ಟನು.

೨೯. ಆ ಬಾಣಗಳು ಸಾಲಾಗಿ ಸೂರ್ಯಕಿರಣಗಳು ಕೆಳಗೆ ಬೀಳದಂತೆ ಅಂತರಿಕ್ಷವನ್ನು ಮುಚ್ಚಿದವು.

೩೦. ಆ ಬಾಣಗಳು ಆನೆಗಳ ಕಪೋಲದಲ್ಲಿ ಚುಚ್ಚಿಕೊಂಡು ಬಣ್ಣ ಬಳಿದಂತೆ ಅಲಂಕಾರವಾಗಿದ್ದವು.

೩೧. ಆ ದಮನನು ಹೊಡೆದ ಬಾಣದಿಂದ ಕುದುರೆ, ಆನೆ, ರಥ, ಮನುಷ್ಯರು ಎಲ್ಲರೂ ಕೆಳಗೆ ಬಿದ್ದರು.

**ತದ್ವಿಕ್ರಾಂತಂ ಸಮಾಲೋಕ್ಯ ಪುಷ್ಕಲಃ ಪರವೀರಹಾ ।**
**ಶರಾಣಾಂ ಛಾಯಯಾ ವ್ಯಾಪ್ತಂ ರಣಮಂಡಲಮೀಕ್ಷ್ಯ ಚ ॥ ೩೨ ॥**

**ಶರಾಸನೇ ಸಮಾಧತ್ತ ಬಾಣಂ ವಹ್ನ್ಯಭಿಮಂತ್ರಿತಂ ।**
**ಆಚಮ್ಯ ಸಮ್ಯಗ್ವಿಧಿವನ್ಮೋಚಯಾಮಾಸ ಸಾಯಕಂ ॥ ೩೩ ॥**

**ತತೋಽಗ್ನಿಃ ಪ್ರಾದುರಭವತ್ತತ್ರ ಸಂಗ್ರಾಮಮೂರ್ಧನಿ ।**
**ಜ್ವಾಲಾಭಿರ್ವಿಲಿಹನ್ವ್ಯೋಮ ಪ್ರಳಯಾರ್ಚಿರಿವೋತ್ಥಿತಃ ॥ ೩೪ ॥**

**ತತೋಽಸ್ಯ ಸೈನ್ಯಂ ನಿರ್ದಗ್ಧಂ ತ್ರಾಸಂ ಪ್ರಾಪ್ತಂ ರಣಾಂಗಣೇ ।**
**ಪಲಾಯನಪರಂ ಜಾತಂ ವಹ್ನಿಜ್ವಾಲಾಭಿಪೀಡಿತಂ ॥ ೩೫ ॥**

**ಛತ್ರಾಣಿ ಸಂಪ್ರದಗ್ಧಾನಿ ಚಂದ್ರಾಕಾರಾಣಿ ಭೂಭೃತಾಂ ।**
**ದೃಶ್ಯಂತೇ ಜಾತರೂಪಸ್ಯ ಕಾಂತಿಧಾರೀಣಿ ತತ್ರ ಹ ॥ ೩೬ ॥**

**ಹಯಾ ದಗ್ಧಾಃ ಪಲಾಯಂತೇ ಕೇಸರೇಷು ಚ ವೈರಿಣಾಂ ।**
**ರಥಾ ಅಪಿ ಗತಾ ದಾಹಂ ಸುಕೂಬರಸಮನ್ವಿತಾಃ ॥ ೩೭ ॥**

---

೩೨-೩೩. ವೀರನಾದ ಪುಷ್ಕಲನು ಆ ದಮನನ ಪರಾಕ್ರಮವನ್ನೂ, ಆತನಿಂದ ಬಿಡಲ್ಪಟ್ಟ ಬಾಣಗಳು ರಣಮಂಡಲದಲ್ಲಿ ವ್ಯಾಪಿಸಿರುವುದನ್ನೂ ನೋಡಿ ಶಾಸ್ತ್ರೋಕ್ತವಾಗಿ ಆಚಮನಮಾಡಿ, ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿ ಬಿಟ್ಟನು.

೩೪. ಆಗ ಬೆಂಕಿಯು ಆ ಯುದ್ಧರಂಗದಲ್ಲೆಲ್ಲಾ ಪ್ರಳಯಕಾಲದ ಬೆಂಕಿಯಂತೆ ಜ್ವಾಲೆಗಳಿಂದ ಆಕಾಶವನ್ನು ಮುಟ್ಟುತ್ತ ಹರಡಿಕೊಂಡಿತು.

೩೫. ಆಗ ದಮನನ ಸೈನ್ಯವೆಲ್ಲಾ ಸುಟ್ಟುಹೋಗುತ್ತ ಹೆದರಿ ಓಡಲು ಮೊದಲಿಟ್ಟಿತು.

೩೬. ಶ್ವೇತಚ್ಛತ್ರಗಳು ಸುಡುತ್ತಿರುವುದನ್ನು ನೋಡಿದರೆ ಚಿನ್ನದ ಛತ್ರಗಳಂತಿದ್ದುವು.

೩೭. ಬೆಂಕಿಯ ಶಾಖವನ್ನು ತಡೆಯಲಾರದೆ ಕುದುರೆಗಳೆಲ್ಲಾ ಓಡಿದುವು. ರಥಗಳು ಉರಿದವು.

ಮಣಿಮಾಣಿಕ್ಯರತ್ನಾನಿ ವಹಂತಃ ಕರಭಾಸ್ತತಃ ।
ಪಲಾಯಂತೇ ಚ ದಹನಜ್ವಾಲಾಮಾಲಾಭಿಪೀಡಿತಃ ॥ ೩೮ ॥

ಕುತ್ರಚಿದ್ದಂತಿನೋ ನಷ್ಟಾಃ ಕುತ್ರಚಿದ್ಧಯಸಾದಿನಃ ।
ಕುತ್ರಚಿತ್ಪತ್ತಯೋ ನಷ್ಟಾ ವಹ್ನಿದಗ್ಧಕಳೇಬರಾಃ ॥ ೩೯ ॥

ಶರಾಸ್ಸರ್ವೇ ನೃಪಸುತಪ್ರಮುಕ್ತಾಃ ಪ್ರಳಯಂ ಗತಾಃ ।
ಆಶುಶುಕ್ಷಣಿಕೀಲಾಭಿರ್ಭಸ್ಮೀಭೂತಾಸ್ಸಮಂತತಃ ॥ ೪೦ ॥

ತದಾ ಸ್ವಸೈನ್ಯೇ ದಗ್ಧೇ ಚ ದಮನೋ ರೋಷಪೂರಿತಃ ।
ತಚ್ಛಾಂತ್ಯರ್ಥಂ ಚ ಸರ್ವಾಸ್ತ್ರವಿದ್ವಾರುಣಮಥಾದದೇ ॥ ೪೧ ॥

ವಾರುಣಂ ವಹ್ನಿಶಾಂತ್ಯರ್ಥಂ ಮುಕ್ತಂ ತೇನ ಮಹೀಭೃತಾ ।
ಆಪ್ಲಾವಯದ್ಬಲಂ ತಸ್ಯ ರಥವಾಜಿಸಮಾಕುಲಂ ॥ ೪೨ ॥

---

೩೮. ರತ್ನ ಮುಂತಾದುವುಗಳನ್ನು ಹೊತ್ತಿದ್ದ ಒಂಟೆಗಳೂ ಕೂಡ ಬೆಂಕಿಯ ಜ್ವಾಲೆಯನ್ನು ತಡೆಯಲಾರದೆ ಓಡಿದುವು.

೩೯. ಬೆಂಕಿಯಿಂದ ತೊಂದರೆಪಟ್ಟ ಆನೆ, ಕುದುರೆ, ಸವಾರರು, ಕಾಲಾಳುಗಳೆಲ್ಲರೂ ಸಿಕ್ಕಿದ ಕಡೆಗೆ ಓಡಿದರು.

೪೦. ದಮನನು ಬಿಟ್ಟ ಬಾಣಗಳೆಲ್ಲಾ ಬೆಂಕಿಯ ಜ್ವಾಲೆಗೆ ಸಿಕ್ಕಿ ಉರಿದು ಹೋದುವು.

೪೧. ತನ್ನ ಸೈನ್ಯವು ಈ ರೀತಿ ಸುಡಲ್ಪಡುತ್ತಿರಲು ದಮನನು ಕೋಪಗೊಂಡು ಅದನ್ನು ನಿವೃತ್ತಿಮಾಡುವುದಕ್ಕೆ ವಾರುಣಾಸ್ತ್ರವನ್ನು ಹಿಡಿದನು.

೪೨. ವಾರುಣಾಸ್ತ್ರವನ್ನು ಬಿಡಲು ಬೆಂಕಿಯೆಲ್ಲವೂ ಹೋಗಿ, ಅವನ ಸೈನ್ಯವೆಲ್ಲವೂ ತಣ್ಣಗಾಗಿ ಬಾಧೆಯಿಂದ ಪಾರಾದುವು.

ರಥಾ ವಿಪ್ಲಾವಿತಾ ಯೇನ ದೃಶ್ಯಂತೇ ಪರಿಪಂಥಿನಾಂ ।
ಗಜಾಶ್ಚಾಪಿ ಪರಿಪ್ಲುಷ್ಟಾಃ ಸ್ವೀಯಾಃ ಶಾಂತಿಮುಪಾಗತಾಃ ॥ ೪೩ ॥

ವಹ್ನಿಶ್ಚ ಶಾಂತಿಮಗಮದಗ್ನ್ಯಸ್ತ್ರಪರಿನೋಚಿತಃ ।
ಶಾಂತಿಮಾಪ ಬಲಂ ಸ್ವೀಯಂ ವಹ್ನಿಜ್ವಾಲಾಭಿಪೀಡಿತಂ ॥ ೪೪ ॥

ಕಂಪಿತಾಶ್ಶೀತತೋಯೇನ ಶೀತ್ಕುರ್ವಂತಿ ಚ ವೈರಿಣಃ ।
ಕರಕಾವೃಷ್ಟಿಭಿಃ ಕ್ಷಿಪ್ತಾ ವಾಯುನಾ ಚ ಪ್ರಪೀಡಿತಾಃ ॥ ೪೫ ॥

ತದಾ ಸ್ವಬಲಮಾಲೋಕ್ಯ ತೋಯಪೂರಪ್ರಪೀಡಿತಂ ।
ಕಂಪಿತಂ ಕ್ಷುಭಿತಂ ನಷ್ಟಮಗ್ನ್ಯಸ್ತ್ರಂ ವಾರುಣಾಹತಂ ॥ ೪೬ ॥

ತದ್ವಾತಿಕೋಪತಾಮ್ರಾಕ್ಷಃ ಪುಷ್ಕಲೋ ಭರತಾತ್ಮಜಃ ।
ವಾಯವ್ಯಾಸ್ತ್ರಂ ಸಮಾಧತ್ತ ಧನುಷ್ಯೇಕಂ ಮಹಾವರಂ ॥ ೪೭ ॥

ತತೋ ವಾಯುರ್ಮಹಾನಾಸೀದ್ವಾಯುವ್ಯಾಸ್ತ್ರಪ್ರಚೋದಿತಃ ।
ನಾಶಯಾಮಾಸ ವೇಗೇನ ಘನಾನೀಕಮುಪಸ್ಥಿತಂ ॥ ೪೮ ॥

---

೪೩. ಶತ್ರುಗಳ ಆನೆ, ಕುದುರೆ, ರಥಗಳು ನೆನೆದು ಹಾಳಾದವು. ತನ್ನ ಸೈನ್ಯವು ಶಾಂತಿಯನ್ನು ಹೊಂದಿತು.

೪೪. ಬೆಂಕಿಯು ಶಾಂತವಾಗಿ ಆಗ್ನೇಯಾಸ್ತ್ರವು ಶಾಂತವಾಗಿ ತನ್ನ ಸೈನ್ಯವು ಶಾಂತಿಯನ್ನು ಹೊಂದಿತು.

೪೫. ತಣ್ಣಗಿರುವ ನೀರಿನಿಂದ ನಡುಗಿದುವು. ಶೀತದಿಂದ ಕೆಮ್ಮಲು ಮೊದಲಿಟ್ಟವು. ಆಲಿಕಲ್ಲುಗಳು ಬೀಳುತ್ತ ತಣ್ಣಗಿರುವ ಗಾಳಿ ಬೀಸುತ್ತಿತ್ತು.

೪೬. ಆಗ ಪುಷ್ಕಲನು ಆಗ್ನೇಯಾಸ್ತ್ರವು ವಾರಿತವಾದುದನ್ನೂ ವಾರುಣಾಸ್ತ್ರದಿಂದ ತನ್ನ ಸೈನ್ಯವು ನಡುಗುತ್ತ ತೊಂದರೆಪಡುತ್ತಿರುವುದನ್ನು ನೋಡಿದನು.

೪೭ ಆಗ ಪುಷ್ಕಳನು ಕೋಪಗೊಂಡು ವಾಯವ್ಯಾಸ್ತ್ರವನ್ನು ಹೂಡಿದನು.

೪೮. ಆಗ ವಾಯುವು ಬಹು ಹೆಚ್ಚಾಗಿ ಬಂದು ಮೇಘಗಳನ್ನು ನಾಶಮಾಡಿತು

ವಾಯುನಾಸ್ಫಾಲಿತಾ ನಾಗಾಃ ಪರಸ್ಪರಸಮಾಹತಾಃ ।
ಅಶ್ವಾಶ್ಚ ಸಂಹತಾನ್ಯೋಽನ್ಯಂ ಸ್ವಸ್ವಾರೋಹಸಮನ್ವಿತಾಃ ॥ ೪೯ ॥

ನರಾಃ ಪ್ರಭಂಜನೋದ್ಧೂತಾ ಮುಕ್ತಕೇಶಾ ನಿರೌಜಸಃ ।
ಪತಂತೋಽತ್ರ ಸಮಿಕ್ಷ್ಯಂತೇ ವೇತಾಳಾ ಇವ ಭೂಗತಾಃ ॥ ೫೦ ॥

ವಾಯುನಾ ಸ್ವಬಲಂ ಸರ್ವಂ ಪರಿಭೂತಂ ವಿಲೋಕ್ಯ ಸಃ ।
ರಾಜಪುತ್ರಃ ಪರ್ವತಾಸ್ತ್ರಂ ಧನುಷ್ಯುಚ್ಚೈಸ್ಸಮಾದಧೇ ॥ ೫೧ ॥

ತದಾ ತು ಪರ್ವತಾಃ ಪೇತುರ್ಮಸ್ತಕೋಽಪರಿ ಯುಧ್ಯತಾಂ ।
ವಾಯುಸ್ಸಂಛಾದಿತಸ್ತೈಸ್ತು ನ ಪ್ರಚಕ್ರಾಮ ಕುತ್ರಚಿತ್ ॥ ೫೨ ॥

ಪುಷ್ಕಲೋ ವಜ್ರಸಂಜ್ಞಂ ತು ಸಮಾಧತ್ತ ಶರಾಸನೇ ।
ವಜ್ರೇಣ ಕೃತ್ತಾಸ್ತೇ ಸರ್ವೇ ಜಾತಾಶ್ಚ ತಿಲಶಃ ಕ್ಷಣಾತ್ ॥ ೫೩ ॥

ವಜ್ರಂ ನಾಗಾನ್ ರಜಶ್ಯೇಷಾನ್ ಕೃತ್ವಾ ಬಾಣೋಽಭಿಮಂತ್ರಿತಂ ।
ರಾಜಪುತ್ರೋರಸಿ ಪ್ರೋಚ್ಚೈಃ ಪಪಾತ ವಿನದದ್ಭೃಶಂ ॥ ೫೪ ॥

---

೪೯. ಗಾಳಿಯಿಂದ ಹೊಡೆಯಲ್ಪಟ್ಟ ಆನೆಗಳು ಒಂದಕ್ಕೊಂದು ಬಡಿದಾಡಿದುವು. ಕುದುರೆಗಳೂ ಕೂಡ ಒಂದಕ್ಕೊಂದು ತಗುಲಿ ಬಿದ್ದವು.

೫೦. ಮನುಷ್ಯರೂ ಕೂಡ ತಲೆಗೆದರಿಕೊಂಡು ಬೀಳುವುದನ್ನು ನೋಡಿದರೆ ಭೇತಾಳಗಳು ಬೀಳುವಂತಿದ್ದುವು.

೫೧. ಗಾಳಿಯಿಂದ ತನ್ನ ಸೈನ್ಯಗಳು ತೊಂದರೆಪಡುತ್ತಿರುವುದನ್ನು ನೋಡಿ ದಮನನು ಪರ್ವತಾಸ್ತ್ರವನ್ನು ತೊಟ್ಟನು.

೫೨. ಶತ್ರುಗಳ ಮೇಲೆ ಪರ್ವತಗಳು ಬೀಳಲು ಮೊದಲಿಟ್ಟವು. ತನ್ನ ಸೈನ್ಯದಲ್ಲಿ ಪರ್ವತಗಳು ಮರೆಯಾಗಿ ಗಾಳಿಯು ಬೀಸುವುದು ನಿಂತಿತು.

೫೩. ಪುಷ್ಕಲನು ವಜ್ರಾಸ್ತ್ರವನ್ನು ತೊಟ್ಟು ಆ ಪರ್ವತವನ್ನೆಲ್ಲಾ ಕತ್ತರಿಸಿದನು.

೫೪. ಆ ವಜ್ರಬಾಣವು ಪರ್ವತಗಳನ್ನು ನಾಶಮಾಡಿ ಆ ದಮನನ ಎದೆಯಲ್ಲಿ ಬಿದ್ದಿತು.

**ಸ ತ್ವಾಕುಲಿತಚೇತಸ್ಕೋ ಹೃದಿ ವಿದ್ಧಃ ಕ್ಷತೋ ಭೃಶಂ ।**
**ವಿವ್ಯಥೇ ಬಲವಾನ್ವೀರಃ ಕಶ್ಮಲಂ ಪರಮಾಪ ಸಃ　　॥ ೫೫ ॥**

**ತಂ ವೈ ಕಶ್ಮಲಿತಂ ದೃಷ್ಟ್ವಾ ಸಾರಥಿರ್ನಯಕೋವಿದಃ ।**
**ಅಪೋವಾಹ ರಣಾತ್ತಸ್ಮಾತ್ ಕ್ರೋಶಮಾತ್ರಂ ನರೇಂದ್ರಜಂ　　॥ ೫೬ ॥**

**ತತೋ ಯೋಧಾ ರಾಜಸೂನೋಃ ಪ್ರಣಷ್ಟಾಃ ಪ್ರಪಲಾಯಿತಾಃ ।**
**ಗತ್ವಾ ಪುರೀಂ ಸಮಾಚಖ್ಯುಃ ಕಶ್ಮಲಸ್ಥಂ ನೃಪಾತ್ಮಜಂ　　॥ ೫೭ ॥**

**ಪುಷ್ಕಲೋ ಜಯಮಾಪ್ಯೈವಂ ರಣಮೂರ್ಧನಿ ಧರ್ಮವಿತ್ ।**
**ನ ಪ್ರಹರ್ತುಂ ಪುನಶ್ಚಕ್ರೇ ರಘುನಾಥವಚಸ್ಸ್ಮರನ್　　॥ ೫೮ ॥**

**ತತೋ ದುಂದುಭಿನಿರ್ಘೋಷೋ ಜಯಶಬ್ದೋ ಮಹಾನಭೂತ್ ।**
**ಸಾಧು ಸಾಧ್ವಿತಿ ವಾಚಶ್ಚ ಪ್ರಾವರ್ತಂತ ಮನೋಹರಾಃ　　॥ ೫೯ ॥**

---

೫೫. ಆ ದಮನನು ನೊಂದು ದುಃಖಪಡುತ್ತಾ ಮೂರ್ಛಿತನಾದನು.

೫೬. ಅವನು ಪ್ರಜ್ಞೆ ತಪ್ಪಿದುದನ್ನು ಕಂಡು ಸಾರಥಿಯು ಹಿಂದಕ್ಕೆ ಒಂದು ಕ್ರೋಶದಷ್ಟು ದೂರ ಕರೆದುಕೊಂಡು ರಥದಲ್ಲಿ ಹೋದನು.

೫೭. ಆಗ ಆ ದಮನನ ಸೇನೆಯವರೆಲ್ಲಾ ಓಡಿಹೋದರು. ಹೋಗಿ ಪಟ್ಟಣದಲ್ಲಿ ರಾಜಪುತ್ರನ ಸ್ಥಿತಿಯನ್ನು ಹೇಳಿದರು.

೫೮. ಹೀಗೆ ಪುಷ್ಕಳನು ಜಯವನ್ನು ಹೊಂದಿ ಯುದ್ಧದಲ್ಲಿ ರಾಮನ ಮಾತನ್ನು ಜ್ಞಾಪಿಸಿಕೊಂಡು ಮತ್ತಾರನ್ನೂ ಹೊಡೆಯಲಿಲ್ಲ.

೫೯. ಆಗ ದುಂದುಭಿಶಬ್ದವೂ ಜಯಜಯಶಬ್ದವೂ ಬಹುವಾಗಿ ಆದವು. ಸಾಧುಸಾಧುವೆಂಬ ಮನೋಹರವಾದ ಮಾತು ಎಲ್ಲೆಲ್ಲೂ ಕೇಳಿಸುತ್ತಿತ್ತು.

**ಹರ್ಷಂ ಪ್ರಾಪ ಸ ಶತ್ರುಘ್ನೋ ಜಯಿನಂ ವೀಕ್ಷ್ಯ ಪುಷ್ಕಲಂ ।**
**ಪ್ರಶಶಂಸ ಸುಮತ್ಯಾದಿಮಂತ್ರಿಭಿಃ ಪರಿವಾರಿತಃ ॥ ೬೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಪುಷ್ಕಲವಿಜಯೋ ನಾಮ ಚತುರ್ವಿಂಶೋಽಧ್ಯಾಯಃ**



---

೬೦. ಪುಷ್ಕಲನು ಜಯಶೀಲನಾದುದನ್ನು ನೋಡಿ ಶತ್ರುಘ್ನನು ಸಂತೋಷಪಟ್ಟನು. ಸುಮತಿಯೇ ಮೊದಲಾದ ಮಂತ್ರಿಗಳೊಡನೆ ಬಂದು ಅವನನ್ನು ಶ್ಲಾಘಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ಪುಷ್ಕಲವಿಜಯವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಂಚವಿಂಶೋಽಧ್ಯಾಯಃ

॥ ಶೇಷ ಉವಾಚ ॥

ಅಥ ವೀಕ್ಷ್ಯ ಭಟಾನ್ನಿಜಾನ್ನೃಪೋ
ರುಧಿರೌಘೇನ ಪರಿಪ್ಲುತಾಂಗಕಾನ್ ।
ಶಮಯನ್ನಿವ ತಚ್ಛುಚೋಽಥತಾ-
ನ್ಪರಿಪಪ್ರಚ್ಛ ಸುತಸ್ಯ ಚೇಷ್ಟಿತಂ ॥ ೧ ॥

ಗದತಾಖಿಲಕರ್ಮ ತಸ್ಯ ವೈ
ಸ ಕಥಂ ಚಾಹರದಶ್ವವರ್ಯಕಂ ।
ಕಥಯಂತು ಪುನಃ ಕಿಯದ್ಬಲಂ
ಬತ ವೀರಾಃ ಕತಿ ಯುದ್ಧಲಾಲಸಾಃ ॥ ೨ ॥

---

## ಇಪ್ಪತ್ತೈದನೆಯ ಅಧ್ಯಾಯವು

೧. ಶೇಷನು ಹೇಳಿದನು:—ಸುಬಾಹುವು ರಕ್ತದಿಂದ ತೋದಿರುವ ತನ್ನ ಭಟರನ್ನು ನೋಡಿ ಅವರ ದುಃಖವನ್ನು ಶಮನಮಾಡುವಂತೆ ಮಗನು ಮಾಡಿದುದನ್ನೆಲ್ಲಾ ಕೇಳಿದನು.

೨. ಅವನು ಮಾಡಿದ ಯುದ್ಧದ ವಿಷಯವನ್ನು ಹೇಳಿದರು. ಅವನು ಹೇಗೆ ಕುದುರೆಯನ್ನು ಹಿಡಿದನು? ಶತ್ರುಗಳ ಬಲವೆಷ್ಟು? ಅವರ ಯುದ್ಧದ ಆಸೆಯೆಷ್ಟು? ಎಷ್ಟುಜನ ಯುದ್ಧಮಾಡುತ್ತಾರೆ?

ಅಥ ಶತ್ರುಬಲೋಽಸ್ಮತ್ಸುಖಃ ಕಥಂ
ಮಮ ವೀರೋ ದಮನೋ ರಣಂ ವ್ಯಧಾತ್ ।
ವಿಜಯಂ ಚ ವಿಧಾಯ ದುರ್ಜಯಂ
ಕಿಲ ವೀರಂ ಬತ ಕೋಽಪ್ಯಶಾತಯತ್ ॥ ೩ ॥

ಇತ್ಯಾಕರ್ಣ್ಯ ವಚೋ ರಾಜ್ಞಃ ಪ್ರತ್ಯೂಚುಸ್ತೇಽಸ್ಯ ಸೇವಕಾಃ ।
ಕ್ಷತಜೇನ ಪರಿಕ್ಲಿನ್ನಗಾತ್ರವಸ್ತ್ರಾದಿಧಾರಿಣಃ ॥ ೪ ॥

ರಾಜನ್ನಶ್ವಂ ಸಮಾಲೋಕ್ಯ ಪತ್ರಚಿಹ್ನಾದ್ಯಲಂಕೃತಂ ।
ಗ್ರಾಹಯಾಮಾಸ ಗರ್ವೇಣ ತೃಣೀಕೃತ್ಯ ರಘೂದ್ವಹಂ ॥ ೫ ॥

ತತೋ ಹಯಾನುಗಃ ಪ್ರಾಪ್ತಃ ಸ್ವಲ್ಪಸೈನ್ಯಸಮಾವೃತಃ ।
ತೇನ ಸಾಕಮಭೂದ್ಯುದ್ಧಂ ಸುಮಹಲ್ಲೋಮಹರ್ಷಣಂ ॥ ೬ ॥

ತಂ ಮೂರ್ಛಿತಂ ತತಃ ಕೃತ್ವಾ ತವ ಪುತ್ರಸ್ಸ್ವಸಾಯಕೈಃ ।
ಯಾವತ್ತಿಷ್ಠತ್ಯಥಾಯಾತಃ ಶತ್ರುಘ್ನಸ್ಸ್ವಬಲೈರ್ವೃತಃ ॥ ೭ ॥

---

೩. ನನ್ನ ದಮನನು ಶತ್ರುಗಳನ್ನು ಹೇಗೆ ಎದುರಿಸಿದನು? ಅವನು ವಿಜಯವನ್ನು ಹೇಗೆ ಸಂಪಾದಿಸಿದನು? ಯಾರನ್ನು ಕೊಂದನು?

೪. ರಾಜನ ಈ ಮಾತನ್ನು ಕೇಳಿದ, ಆ ರಕ್ತದಿಂದ ತೋಯ್ದ ಸೇವಕರು ಹೀಗೆಂದರು.

೫. ಅನೇಕ ಚಿಹ್ನೆಗಳಿಂದ ಅಲಂಕೃತವಾದ ಆ ಯಾಗದ ಕುದುರೆಯನ್ನು ನೋಡಿ, ಶ್ರೀರಾಮನನ್ನು ಹುಲ್ಲಿಗಿಂತಲೂ ಕಡೆಯಾಗಿ ಕಾಣುತ್ತ ಹೆಮ್ಮೆಯಿಂದ ಕುದುರೆಯನ್ನು ಹಿಡಿಸಿದನು.

೬. ಆಮೇಲೆ ಕುದುರೆಯ ಕಾವಲುಗಾರನು ಸ್ವಲ್ಪ ಸೈನ್ಯದಿಂದ ಕೂಡಿಕೊಂಡು ಬಂದನು. ಅವನೊಡನೆ ಅದ್ಭುತವಾದ ಯುದ್ಧವು ನಡೆಯಿತು.

೭. ನಿನ್ನ ಮಗನು ತನ್ನ ಬಾಣಗಳಿಂದ ಅವನನ್ನು ಮೂರ್ಛೆಬೀಳುವಂತೆ ಮಾಡಿ ಇರುವಾಗ ಶತ್ರುಘ್ನನು ಸೈನ್ಯದೊಡನೆ ಬಂದನು.

ತತೋ ಯುದ್ಧಂ ಮಹದಭೂಚ್ಛಸ್ತ್ರಾಸ್ತ್ರಪರಿಬೃಂಹಿತಂ ।
ಬಹುಶೋ ಜಯಮಾಪೇದೇ ತವ ಪುತ್ರೋ ಮಹಾಬಲಃ ॥ ೮ ॥

ಇದಾನೀ ಮುಕ್ತಮಸ್ತ್ರಂ ತು ಶತ್ರುಘ್ನಭ್ರಾತೃಸೂನುನಾ ।
ಮೂರ್ಛಿತಃ ಪ್ರಧನೇ ರಾಜನ್ ಕೃತೋ ವೀರಸುತಸ್ತವ ॥ ೯ ॥

ಇತಿವಾಕ್ಯಂ ಸಮಾಕರ್ಣ್ಯ ರೋಷಶೋಕಪರಿಪ್ಲುತಃ ।
ಸ್ಥಗಿತಾಂಗ ಇವಾಸೀತ್ಸ ಸಮುದ್ರ ಇವ ಪರ್ವಣಿ ॥ ೧೦ ॥

ಉವಾಚ ಸೇನಾಧಿಪತಿಂ ರೋಷಪ್ರಸ್ಫುರಿತಾಧರಃ ।
ದಂತೈರ್ದಂತಾನ್ ಲಿಹನ್ನೋಷ್ಠಂ ಜಿಹ್ವಯಾ ಶೋಕಕರ್ಶಿತಃ ॥ ೧೧ ॥

ಸೇನಾಪತೇ ಕುರುಷ್ವಾರಾನ್ಮಮ ಸೇನಾಂ ತು ಸಜ್ಜಿತಾಂ ।
ಯೋತ್ಸ್ಯೇ ರಾಮಸ್ಯ ಸುಭಟೈರ್ಮಮ ಪುತ್ರೋಪಘಾತಕೈಃ ॥ ೧೨ ॥

ಅದ್ಯಾಹಂ ಮಮ ಪುತ್ರಸ್ಯ ದುಃಖದಂ ನಿಶಿತೈಃ ಶರೈಃ ।
ಭೇದಯಾಮಿ ಯದಿ ಹ್ಯೇನಂ ರಕ್ಷಿತಾಪಿ ಮಹೇಶ್ವರಃ ॥ ೧೩ ॥

---

೮. ಶಸ್ತ್ರಾಸ್ತ್ರಗಳಿಂದ ಆಗ ಬಹು ದೊಡ್ಡ ಯುದ್ಧವು ನಡೆಯಿತು. ಆಗ ನಿನ್ನ ಮಗನು ಬಹಳಸಾರಿ ಜಯವನ್ನು ಹೊಂದಿದನು.

೯. ಈಗ ಬಿಟ್ಟ ಅಸ್ತ್ರದಿಂದ ಭರತನ ಮಗನು ಈತನನ್ನು ಮೂರ್ಛೆ ಬೀಳುವಂತೆ ಮಾಡಿದನು.

೧೦. ಈ ಮಾತನ್ನು ಕೇಳಿ ಕೋಪದುಃಖಗಳಿಂದ ದೇಹವು ಕಂಪಿಸಿ ಸಮುದ್ರವು ಪರ್ವಕಾಲದಲ್ಲಿ ಉಕ್ಕುವಂತೆ ಉಕ್ಕಿದನು.

೧೧. ಕೋಪದಿಂದ ನಡುಗುವ ತುಟಿಯುಳ್ಳವನಾಗಿ ಹಲ್ಲುಗಳನ್ನು ಕಡಿಯುತ್ತಾ, ನಾಲಗೆಯಿಂದ ತುಟಿಗಳನ್ನು ನೆಕ್ಕುತ್ತ ಸೇನಾಪತಿಗೆ ಹೇಳಿದನು.

೧೨. ಎಲೈ! ಸೇನಾಪತಿಯೇ, ಜಾಗ್ರತೆಯಾಗಿ ಸೇನೆಯನ್ನು ಸಿದ್ಧಪಡಿಸು. ನನ್ನ ಮಗನಿಗೆ ಏಟು ಮಾಡಿದ ಆ ರಾಮನ ಸೇನೆಯೊಂದಿಗೆ ಯುದ್ಧಮಾಡುತ್ತೇನೆ.

೧೩. ನನ್ನ ಮಗನಿಗೆ ನೋವು ಮಾಡಿದವನನ್ನು ಪರಮೇಶ್ವರನೇ ಬಂದು ರಕ್ಷಿಸಿದರೂ ಬಾಣಗಳಿಂದ ಕೊಲ್ಲುತ್ತೇನೆ.

ಸೇನಾಪತಿರಿದಂ ವಾಕ್ಯಂ ಪ್ರೋಕ್ತಂ ಸುಭುಜಭೂಪತೇಃ ।
ನಿಶಮ್ಯ ಚ ತಥಾ ಕೃತ್ವಾ ಸಜ್ಜೀಭೂತೋಽಭವತ್ಸ್ವಯಂ ॥ ೧೪ ॥

ರಾಜ್ಞೇ ನಿವೇದಯಾಮಾಸ ಸಜ್ಜಾಂ ಸ ಚತುರಂಗಿಣೀಂ ।
ಸೇನಾಂ ಕಾಲಬಲಪ್ರಖ್ಯಾಂ ಹತದುರ್ಜನಕೋಟಿಕಾಂ ॥ ೧೫ ॥

ಶ್ರುತ್ವಾ ಸೇನಾಪತೇರ್ವಾಕ್ಯಂ ಸುಬಾಹುಃ ಪರವೀರಹಾ ।
ನಿರ್ಜಗಾಮ ತತೋ ಯತ್ರ ಶತ್ರುಘ್ನಸ್ಸ್ವಸುತಾರ್ದನಃ ॥ ೧೬ ॥

ಕುಂಜರೈಶ್ಚ ಮದೋನ್ಮತ್ತೈರ್ಹಯೈಶ್ಚಾಪಿ ಮನೋಜವೈಃ ।
ನರೈಶ್ಚ ಸರ್ವಶಸ್ತ್ರಾಸ್ತ್ರಪೂರಿತೈ ರಿಪುಜೇತೃಭಿಃ ॥ ೧೭ ॥

ಭೂಶ್ಚಕಂಪೇ ತದಾ ತತ್ರ ಸೈನ್ಯಭಾರೇಣ ಪೀಡಿತಾ ।
ಸಮ್ಮರ್ದಸ್ಸುಮಹಾನಾಸೀತ್ತತ್ರ ಸೈನ್ಯೇ ವಿಸರ್ಪತಿ ॥ ೧೮ ॥

ರಾಜಾನಂ ನಿರ್ಗತಂ ದೃಷ್ಟ್ವಾ ರಥೇನ ಕನಕಾಂಗಿನಾ ।
ಶತ್ರುಘ್ನಸೈನ್ಯಮುದ್ಯುಕ್ತಂ ಸರ್ವವೈರಿಪ್ರಹಾರಕಂ ॥ ೧೯ ॥

---

೧೪. ಸುಬಾಹುವಿನ ಈ ಮಾತನ್ನು ಕೇಳಿ ಸೇನಾಪತಿಯು ಸಿದ್ಧನಾದನು.

೧೫. ಕಾಲಬಲವೆಂದು ಹೆಸರುಳ್ಳ ತನ್ನ ಸೇನೆಯು ಸಿದ್ಧವಾಗಿರುವುದನ್ನಾಗಿ ರಾಜನಿಗೆ ತಿಳಿಸಿದನು.

೧೬. ಸುಬಾಹುವು ಸೇನಾಪತಿಯ ಮಾತನ್ನು ಕೇಳಿ ಶತ್ರುಘ್ನನಿದ್ದಲ್ಲಿಗೆ ಹೊರಟನು.

೧೭. ಮದಿಸಿದ ಆನೆಗಳಿಂದಲೂ, ವೇಗವಾದ ಕುದುರೆಗಳಿಂದಲೂ ಶಸ್ತ್ರಾಸ್ತ್ರಗಳಿಂದ ಸಜ್ಜಿತರಾದ ಕಾಲಾಳುಗಳಿಂದಲೂ ಕೂಡಿಕೊಂಡು ಹೋದನು.

೧೮. ಸೈನ್ಯದ ಭಾರದಿಂದ ಪೀಡಿಸಲ್ಪಟ್ಟು ಭೂಮಿಯು ಅಲ್ಲಾಡಿತು. ಸೈನ್ಯಗಳು ಹೋಗುತ್ತಿರುವಾಗ ತಿಕ್ಕಾಟವು ಬಹು ಹೆಚ್ಚಾಯಿತು.

೧೯-೨೦. ರಾಜನು ಶತ್ರುಗಳ ಮೇಲೆ ಯುದ್ಧಮಾಡಲು ಹೊರಟುದನ್ನು

**ಸುಕೇತುಸ್ತಸ್ಯ ವೈ ಭ್ರಾತಾ ಗದಾಯುದ್ಧವಿಶಾರದಃ ।**
**ರಥೇನಾಶು ಜಗಾಮಾಯುಂ ಸರ್ವಶಸ್ತ್ರಾಸ್ತ್ರಪೂರಿತಃ　　॥ ೨೦ ॥**

**ಚಿತ್ರಾಂಗಸ್ತು ಸುತೋ ರಾಜ್ಞಃ ಸರ್ವಯುದ್ಧವಿಚಕ್ಷಣಃ ।**
**ಜಗಾಮ ಸ್ವರಥೇನಾಶು ಶತ್ರುಘ್ನಬಲಮುನ್ಮದಂ　　॥ ೨೧ ॥**

**ತಸ್ಯಾನುಜೋ ವಿಚಿತ್ರಾಖ್ಯೋ ವಿಚಿತ್ರರಣಕೋವಿದಃ ।**
**ಯಯೌ ರಥೇನ ಹೈಮೇನ ಭ್ರಾತುರ್ದುಃಖೇನ ಪೀಡಿತಃ　　॥ ೨೨ ॥**

**ಅನ್ಯೇ ಶೂರಾ ಮಹೇಷ್ವಾಸಾಃ ಸರ್ವಶಸ್ತ್ರಾಸ್ತ್ರಕೋವಿದಾಃ ।**
**ಯಯುರ್ನೃಪಸಮಾದಿಷ್ಟಾಃ ಪ್ರಧನಂ ವೀರಪೂರಿತಂ　　॥ ೨೩ ॥**

**ರಾಜಾ ಸುಬಾಹುಸ್ಸಂರೋಷಾದಾಗತಃ ಪ್ರಧನಾಂಗಣೇ ।**
**ವಿಲೋಕಯಾಮಾಸ ಸುತಂ ಮೂರ್ಛಿತಂ ಶರಪೀಡಿತಂ　　॥ ೨೪ ॥**

**ರಥೋಪಸ್ಥಸ್ಥಿತಂ ಮೂಢಂ ಸ್ವಸುತಂ ದಮನಾಭಿದಂ ।**
**ವೀಕ್ಷ್ಯ ದುಃಖಂ ಮುಹುಃ ಪ್ರಾಪ ವೀಜಯಾಮಾಸ ಪಲ್ಲವೈಃ　　॥ ೨೫ ॥**

---

ನೋಡಿ ಅವನ ತಮ್ಮನೂ ಸಿದ್ಧನಾಗಿ ರಥದಿಂದ ಹೊರಟನು.

೨೧-೨೨. ಆ ರಾಜನ ಮಗ ಚಿತ್ರಾಂಗದನೂ, ಅವನ ತಮ್ಮ ವಿಚಿತ್ರನೂ ಕೂಡ ಉತ್ತಮವಾದ ರಥದಿಂದ ಯುದ್ಧಕ್ಕೆ ಹೊರಟರು.

೨೩. ಸರ್ವ ಶಸ್ತ್ರಾಸ್ತ್ರಗಳಿಂದ ಕೂಡಿದ ಮಿಕ್ಕ ಶೂರರೂ ವೀರಾಗ್ರಣಿಗಳಿರುವ ಆ ಯುದ್ಧಭೂಮಿಗೆ ಹೊರಟರು.

೨೪. ಕೋಪದಿಂದ ಸುಬಾಹುವು ಯುದ್ಧರಂಗಕ್ಕೆ ಬಂದು ಬಾಣದಿಂದ ಏಟು ತಿಂದು ಮೂರ್ಛಿತನಾದ ಮಗನನ್ನು ನೋಡಿದನು.

೨೫. ರಥದಲ್ಲಿ ಮೂರ್ಛಿತನಾಗಿ ಮಲಗಿರುವ ದಮನನನ್ನು ನೋಡಿ ದುಃಖಿಸುತ್ತ ಚಿಗುರುಗಳಿಂದ ಬೀಸಿದನು.

ಜಲೇನ ಸಿಕ್ತಸ್ಸಂಸ್ಪೃಷ್ಟೋ ರಾಜ್ಞಾ ಕೋಮಲಪಾಣಿನಾ ।
ಸಂಜ್ಞಾಮಾಪ ಶನೈರ್ವೀರೋ ದಮನಃ ಪರಮಾಸ್ತ್ರವಿತ್ ॥ ೨೬ ॥

ಉತ್ಥಿತಃ ಕ್ವ ಧನುರ್ಮೇಽಸ್ತಿ ಕ್ವ ಪುಷ್ಕಲ ಇತೋ ಗತಃ ।
ಸಂಸಜ್ಯ ಸಮರಂ ತ್ಯಕ್ತ್ವಾ ಮದ್ಬಾಣಪ್ರಣಪೀಡಿತಃ ॥ ೨೭ ॥

ಇತಿವಾಕ್ಯಂ ಸಮಾಕರ್ಣ್ಯ ಸುಬಾಹುಃ ಪುತ್ರಭಾಷಿತಂ ।
ಪರಮಂ ಹರ್ಷಮಾಪೇದೇ ಪರಿರಭ್ಯ ಸುತಂ ಸ್ವಕಂ ॥ ೨೮ ॥

ದಮನೋ ವೀಕ್ಷ್ಯ ಜನಕಂ ತ್ರಪಾನಮ್ರಶಿರೋಧರಃ ।
ಪಪಾತ ಪಾದಯೋರ್ಭಕ್ತ್ಯಾ ಕ್ಷತದೇಹೋಽಸ್ತ್ರರಾಜಿಭಿಃ ॥ ೨೯ ॥

ಸ್ವಸುತಂ ರಥಸಂಸ್ಥಂ ತು ವಿಧಾಯ ನೃಪತಿಃ ಪುನಃ ।
ಜಗಾದ ಸೇನಾಧಿಪತಿಂ ರಣಕರ್ಮವಿಶಾರದಃ ॥ ೩೦ ॥

ವ್ಯೂಹಂ ರಚಯ ಸಂಗ್ರಾಮೇ ಕ್ರೌಂಚಾಖ್ಯಂ ರಿಪುದುರ್ಜಯಂ ।
ಯಮಾವಿಶ್ಯ ಜಯೇ ಸೈನ್ಯಂ ಶತ್ರುಘ್ನಸ್ಯ ಮಹೀಪತೇಃ ॥ ೩೧ ॥

---

೨೬. ರಾಜನು ನೀರನ್ನು ಚುಮುಕಿಸಿ ಕೈಯಿಂದ ಮುಟ್ಟಲು ದಮನನು ಜ್ಞಾನವನ್ನು ಹೊಂದಿದನು.

೨೭. ದಮನನು ಮೇಲಕ್ಕೆದ್ದು ನನ್ನ ಧನುಸ್ಸೆಲ್ಲಿ? ಪುಷ್ಕಲನು ಇಲ್ಲಿಂದ ಎಲ್ಲಿಗೆ ಹೋದನು? ಯುದ್ಧಕ್ಕೆ ಪ್ರಾರಂಭಿಸಿ ನನ್ನ ಬಾಣಗಳ ಏಟನ್ನು ತಿಂದು ಎಲ್ಲಿದ್ದಾನೆ?

೨೮. ಈ ಮಾತನ್ನು ಸುಬಾಹುವು ಕೇಳಿ ಬಹು ಸಂತೋಷಪಟ್ಟು ಮಗನನ್ನು ಆಲಿಂಗಿಸಿಕೊಂಡನು.

೨೯. ದಮನನು ತಂದೆಯನ್ನು ನೋಡಿ ನಾಚಿಕೆಯಿಂದ ನಮ್ರನಾಗಿ ತಲೆ ತಗ್ಗಿಸಿಕೊಂಡು ಪಾದಗಳಿಗೆ ವಂದಿಸಿದನು.

೩೦-೩೧. ತನ್ನ ಮಗನನ್ನು ರಥದಲ್ಲಿ ಕೂರಿಸಿ, ಸೇನಾಪತಿಯನ್ನು ಕುರಿತು ಕ್ರೌಂಚವೆಂಬ ಹೆಸರುಳ್ಳ ವ್ಯೂಹವನ್ನು ರಚಿಸು. ಶತ್ರುಸೈನ್ಯವು ಅದನ್ನು ಪ್ರವೇಶಿಸದಂತಿರಲಿ. ಎಂದನು.

ತದ್ವಾಕ್ಯಮಾಕರ್ಣ್ಯ ಸುಬಾಹುಭೂಪತೇಃ
ಕ್ರೌಂಚಾಖ್ಯಸುವ್ಯೂಹವಿಶೇಷಮಾದಧಾತ್ ।
ಯಂ ನೋ ವಿಶಂತೇ ಸಹಸಾ ರಿಪೋರ್ಗಣಾ
ಮಹಾಬಲಾಃ ಶಸ್ತ್ರಸಮೂಹಧಾರಿಣಃ ॥ ೩೨ ॥

ಮುಖೇ ಸುಕೇತುಸ್ತಸ್ಯಾಸೀದ್ಗಳೇ ಚಿತ್ರಾಂಗಸಂಜ್ಞಕಃ ।
ಪಕ್ಷಯೋ ರಾಜಪುತ್ರೌ ದ್ವೌ ಪುಚ್ಛೇ ರಾಜಾ ಪ್ರತಿಷ್ಠಿತಃ ॥ ೩೩ ॥

ಮಧ್ಯೇ ಸೈನ್ಯಂ ಮಹತ್ತಸ್ಯ ಚತುರಂಗಸುಶೋಭಿತಂ ।
ಕೃತ್ವಾ ನ್ಯವೇದಯದ್ರಾಜ್ಞೇ ಕ್ರೌಂಚವ್ಯೂಹಂ ಸುಚಿತ್ರಿತಂ ॥ ೩೪ ॥

ದೃಷ್ಟ್ವಾ ರಾಜಾ ಸುಸಂಸದ್ಧಂ ಕ್ರೌಂಚವ್ಯೂಹಂ ಸುನಿರ್ಮಿತಂ ।
ರಣಾಯ ಸ್ವಮತಿಂ ಚಕ್ರೇ ಶತ್ರುಘ್ನಕಟಕೇ ಸ್ಥಿತೈಃ ॥ ೩೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಸುಬಾಹುಸೈನ್ಯಸಮಾಗಮೋ
ನಾಮ ಪಂಚವಿಂಶೋಽಧ್ಯಾಯಃ

---

೩೨. ಸೇನಾಪತಿಯು ಆ ಮಾತನ್ನು ಕೇಳಿ, ಮಹಾಬಲಿಷ್ಠರಾದರೂ ಶತ್ರುಗಳಿಗೆ ಪ್ರವೇಶಿಸಲಾಗದ ಆ ಕ್ರೌಂಚವ್ಯೂಹವನ್ನು ರಚಿಸಿದನು.

೩೩-೩೪. ಮುಖದಲ್ಲಿ ಸುಕೇತುವೂ, ಕತ್ತಿನಲ್ಲಿ ಚಿತ್ರಾಂಗನೂ, ಅಕ್ಕಪಕ್ಕದ ಎರಡು ರೆಕ್ಕೆಗಳಲ್ಲಿ ಇಬ್ಬರು ರಾಜಪುತ್ರರೂ, ಬಾಲದಲ್ಲಿ ರಾಜನೂ, ಮಧ್ಯದಲ್ಲಿ ಚತುರಂಗ ಸೇನೆಯೂ ಇರುವಂತೆ ಮಾಡಿ ತೋರಿಸಿದನು.

೩೫. ರಾಜನು ಕ್ರೌಂಚವ್ಯೂಹವು ಸರಿಯಾಗಿರುವುದನ್ನು ನೋಡಿ ಶತ್ರುಘ್ನನೊಡನೆ ಯುದ್ಧಮಾಡಲು ಸಿದ್ಧನಾದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಸುಬಾಹುಸೈನ್ಯಸಮಾಗಮವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷಡ್ವಿಂಶೋಽಧ್ಯಾಯಃ

॥ ಶೇಷ ಉವಾಚ ॥

ಶತ್ರುಘ್ನಸ್ತದ್ಬಲಂ ದೃಷ್ಟ್ವಾ ಭೀಷಣಾಕೃತಿ ಮೇಘವತ್ ।
ಹಸ್ತ್ಯಶ್ವರಥಪಾದಾತೈರ್ಬಹುಭಿಃ ಪರಿವಾರಿತಂ ॥ ೧ ॥

ಸುಮತಿಂ ಪ್ರತ್ಯುವಾಚೇದಂ ವಚೋ ಗಂಭೀರಶಬ್ದಯುಕ್ ।
ನಾನಾವಾಕ್ಯವಿಚಾರಜ್ಞೈಃ ಪಂಡಿತೈಃ ಪರಿಸೇವಿತಃ ॥ ೨ ॥

॥ ಶತ್ರುಘ್ನ ಉವಾಚ ॥

ಸುಮತೇ ಕಸ್ಯ ನಗರಂ ಪ್ರಾಪ್ತೋ ಮೇ ಹಯಸತ್ತಮಃ ।
ಬಲಮೇತನ್ನಿರೀಕ್ಷ್ಯೇತ ಪಯೋದಧಿತರಂಗವತ್ ॥ ೩ ॥

---

## ಇಪ್ಪತ್ತಾರನೆಯ ಅಧ್ಯಾಯವು

೧-೨. ಶೇಷನು ಹೇಳಿದನು :—ಆನೆ, ಕುದುರೆ, ರಥ, ಕಾಲಾಳುಗಳಿಂದ ಕೂಡಿ ಮೇಘದಂತೆ ಭಯಂಕರವಾದ ಶತ್ರುಸೈನ್ಯವನ್ನು ಶತ್ರುಘ್ನನು ನೋಡಿದನು. ತಿಳುವಳಿಕೆಯುಳ್ಳ ಎಲ್ಲರನ್ನೂ ಕರೆಸಿ ಅವರೆದುರಿಗೆ ಸುಮತಿಯನ್ನು ಕುರಿತು ಇಂತೆಂದನು.

೩. ಶತ್ರುಘ್ನನು ಹೇಳಿದನು :—ಎಲೈ ! ಸುಮತಿಯೇ, ನನ್ನ ಕುದುರೆಯು ಯಾವ ನಗರಕ್ಕೆ ಬಂದಿತು ? ಈ ಸೈನ್ಯಗಳನ್ನು ನೋಡಿದರೆ ಸಮುದ್ರದ ಅಲೆಗಳಂತೆ ಬರುತ್ತಲೇ ಇರುವುದಿಲ್ಲ !

ಕಸ್ಯೈತದ್ಬಲಮುದ್ಧರ್ಷಂ ಚತುರಂಗಸಮನ್ವಿತಂ ।
ಪುರತೋ ಭಾತಿ ಯುದ್ಧಾಯ ಸಮುಪಸ್ಥಿತಮಾದರಾತ್ ॥ ೪ ॥

ಏತತ್ಸರ್ವಂ ಸಮಾಚಕ್ಷ್ವ ಯಥಾವತ್ಪೃಚ್ಛತೋ ಮಮ ।
ಯದ್ಜ್ಞಾತ್ವಾ ಯುದ್ಧಸಂಸ್ಥಾಯೈ ನಿರ್ದಿಶಾಮಿ ಸ್ವಕಾನ್ ಭಟಾನ್ ॥ ೫ ॥

ಇತಿವಾಕ್ಯಂ ಸಮಾಕರ್ಣ್ಯ ಸುಮತಿಃ ಶುಭಬುದ್ಧಿಮಾನ್ ।
ಉವಾಚ ವಚನಂ ಪ್ರೀತಃ ಶತ್ರುಘ್ನಂ ವೈರಿತಾಪಿನಂ ॥ ೬ ॥

॥ ಸುಮತಿರುವಾಚ ॥

ಚಕ್ರಾಂಕಾ ನಗರೀ ರಾಜನ್ ವರ್ತತೇ ಸವಿಧೇ ಶುಭಾ ।
ಯಸ್ಯಾಂ ಸಂತಿ ನರಾಃ ಪಾಪರಹಿತಾ ವಿಷ್ಣುಭಕ್ತಿತಃ ॥ ೭ ॥

ತಸ್ಯಾಃ ಪುರ್ಯಾಃ ಪತಿರಯಂ ಸುಬಾಹುರ್ಧರ್ಮವಿತ್ತಮಃ ।
ತವಾಯಂ ಪುರತೋ ಭಾತಿ ಪುತ್ರಪೌತ್ರಸಮಾವೃತಃ ॥ ೮ ॥

---

೪. ಈ ಚತುರಂಗಸಮೇತವಾದ ಸೈನ್ಯವು ಯಾರದು? ಯುದ್ಧಕ್ಕೋಸ್ಕರ ಸಂತೋಷದಿಂದ ಬಂದು ಮುಂದೆ ನಿಂತಿದೆಯಲ್ಲ!

೫. ಇದೆಲ್ಲವನ್ನೂ ಹೇಳು. ಇದನ್ನು ತಿಳಿದ ಮೇಲೆ ನಮ್ಮ ಭಟರನ್ನು ಯುದ್ಧಕ್ಕೆ ಕಳುಹಿಸಬೇಕಾಗಿದೆ.

೬. ಈ ಮಾತನ್ನು ಕೇಳಿ ಒಳ್ಳೆಯ ಬುದ್ಧಿಯುಳ್ಳ ಸುಮತಿಯು ಸಂತೋಷಗೊಂಡು ವೈರಿಹಂತನಾದ ಶತ್ರುಘ್ನನನ್ನು ಕುರಿತು ಇಂತೆಂದನು.

೭. ಸುಮತಿಯು ಹೇಳಿದನು:—ಎಲೈ! ಶತ್ರುಘ್ನನೇ, ಹತ್ತಿರದಲ್ಲೇ ಚಕ್ರಪುರವೆಂಬ ಪಟ್ಟಣವಿದೆ. ಅಲ್ಲಿನ ಜನರು ಪಾಪರಹಿತರಾಗಿ ವಿಷ್ಣುಭಕ್ತಿಪರಾಯಣರಾಗಿದ್ದಾರೆ.

೮. ಆ ಊರಿಗೆ ಈತನು ರಾಜನು. ಸುಬಾಹುವೆಂದು ಈತನ ಹೆಸರು. ಬಹು ಧರ್ಮಿಷ್ಠನು. ಮಕ್ಕಳು ಮೊಮ್ಮಕ್ಕಳಿಂದ ಕೂಡಿ ಎದುರಿಗೆ ಬಂದಿದ್ದಾನೆ.

ಸ್ವದಾರನಿರತೋ ನಿತ್ಯಂ ಪರದಾರಪರಾಙ್ಮುಖಃ ।
ವಿಷ್ಣೋಃ ಕಥಾಸ್ಯ ಕರ್ಣಸ್ಥಾ ನ ಚಾನ್ಯಾರ್ಥಪ್ರಕಾಶಿನೀ ॥ ೯ ॥

ಪರಸ್ವಂ ನ ಸಮಾದತ್ತೇ ಷಷ್ಠಾಂಶಾದಧಿಕಂ ನೃಪಃ ।
ಬ್ರಾಹ್ಮಣಾ ವಿಷ್ಣುಭಕ್ತ್ಯೈವ ಪೂಜ್ಯಂತೇ ತೇನ ಧರ್ಮಿಣಾ ॥ ೧೦ ॥

ನಿತ್ಯಂ ಸೇವಾರತೋ ವಿಷ್ಣುಪಾದಪದ್ಮಮಧುವ್ರತಃ ।
ಏಷ ಸ್ವಧರ್ಮನಿರತಃ ಪರಧರ್ಮಪರಾಙ್ಮುಖಃ ॥ ೧೧ ॥

ಏತಸ್ಯ ಬಲತುಲ್ಯಂ ಹಿ ನ ವೀರಾಣಾಂ ಬಲಂ ಕ್ವಚಿತ್ ।
ಪುತ್ರಸ್ಯ ಪತನಂ ಶ್ರುತ್ವಾ ರೋಷಶೋಕಸಮಾಕುಲಃ ॥ ೧೨ ॥

ಚತುರಂಗಸಮೇತೋಽಯಂ ಯುದ್ಧಾಯ ಸಮುಪಸ್ಥಿತಃ ।
ತವಾಪಿ ವೀರಾ ಬಹವೋ ಲಕ್ಷ್ಮೀನಿಧಿಮುಖಾ ಅಮೂನ್ ॥ ೧೩ ॥

---

೯. ತನ್ನ ಹೆಂಡತಿಯಲ್ಲಿ ರಮಿಸತಕ್ಕವನೇ ಹೊರತು ಪರರ ಹೆಂಡಿರನ್ನು ಕಣ್ಣೆತ್ತಿ ನೋಡುವವನಲ್ಲ. ವಿಷ್ಣುವಿನ ಕಥೆಗಳು ಕಿವಿಗೆ ಬೀಳುತ್ತಿರಬೇಕೇ ಹೊರತು ಬೇರೆಯವು ಬೀಳುವುದಿಲ್ಲ.

೧೦. ಪರಸ್ವತ್ತನ್ನು ತನಗೆ ಸೇರಬೇಕಾದ ಆರನೇ ಒಂದು ಭಾಗಕ್ಕಿಂತ ಹೆಚ್ಚು ಮುಟ್ಟುವುದಿಲ್ಲ. ಬ್ರಾಹ್ಮಣರನ್ನು ವಿಷ್ಣುವೆಂದೇ ತಿಳಿದು ಭಕ್ತಿಯಿಂದ ಪೂಜಿಸುತ್ತಾನೆ.

೧೧. ಯಾವಾಗಲೂ ವಿಷ್ಣುವನ್ನು ಪೂಜಿಸುತ್ತಾನೆ. ತನ್ನ ಧರ್ಮದಲ್ಲಿಯೇ ಇದ್ದು ಪರಧರ್ಮವನ್ನು ಅನುಸರಿಸುವುದಿಲ್ಲ.

೧೨. ಇವನ ಬಲದ ಮುಂದೆ ವೀರರ ಬಲವೊಂದೂ ಎದುರಾಗುವುದಿಲ್ಲ. ಮಗನ ಸೋಲನ್ನು ಕೇಳಿ ಕೋಪದುಃಖಗಳೆರಡೂ ಬಂದಿವೆ.

೧೩. ಆ ರಾಜನು ಚತುರಂಗಸೇನೆಯೊಡನೆ ಯುದ್ಧಕ್ಕೆ ಬಂದಿದ್ದಾನೆ. ನಿನ್ನ ಕಡೆಯ ಶೂರರಾದ ಲಕ್ಷ್ಮೀನಿಧಿಯೇ ಮುಂತಾದ ವೀರರನ್ನು ಶಸ್ತ್ರಗಳಿಂದ ಜಯಿಸುತ್ತಾನೆ. ಆದರೂ ಹಿತರಾದ ಅವರನ್ನು ಯುದ್ಧಕ್ಕೆ ಕಳುಹಿಸು.

**ಜೇಷ್ಯಂತಿ ಶಸ್ತ್ರಸಂಘೇನ ನಿರ್ದಿಶಾಶು ಪರಂ ಹಿ ತಾನ್ ।**
**ಶತ್ರುಘ್ನಸ್ತದ್ವಚಶ್ಶ್ರುತ್ವಾ ಪ್ರೋವಾಚ ಸುಭಟಾನ್ ವರಾನ್ ॥ ೧೪ ॥**

**ರಣಪ್ರಾಪ್ತಿಭವೋದ್ಧರ್ಷಪೂರಪೂರಿತಮಾನಸಾನ್ ।**
**ಕ್ರೌಂಚವ್ಯೂಹೋಽದ್ಯ ರಚಿತಃ ಸುಬಾಹುಪರಿಸೈನಿಕೈಃ ॥ ೧೫ ॥**

**ಮುಖಪಕ್ಷಸ್ಥಿತಾ ಯೋಧಾಸ್ತಾನ್ಕೋ ಭೇತ್ಸ್ಯತಿ ಶಸ್ತ್ರವಿತ್ ।**
**ಯಸ್ಯ ಭೇದೇ ನಿಜಾ ಶಕ್ತಿರ್ಯೋ ವೀರವಿಜಯೋದ್ಯತಃ ॥ ೧೬ ॥**

**ಸ ಗೃಹ್ಣಾತು ಮದೀಯಾದ್ಧಿ ಪಾಣಿಪದ್ಮಾಚ್ಚ ವೀಟಕಂ ।**
**ತದಾ ಲಕ್ಷ್ಮೀನಿಧಿರ್ವೀರೋ ಜಗ್ರಾಹ ಕ್ರೌಂಚಭೇದನೇ ॥ ೧೭ ॥**

**ಸರ್ವಶಸ್ತ್ರಾಸ್ತ್ರವಿದ್ವೀರೈರ್ಬಹುಭಿಃ ಪರಿವಾರಿತಃ ।**
**ಉವಾಚ ವಚನಂ ರಾಜನ್ಯಾಸ್ಯೇಽಹಂ ಕ್ರೌಂಚಭೇದನೇ ॥ ೧೮ ॥**

**ಭಾರ್ಗವಃ ಪೂರ್ವಮೇವಾಸೀತ್ಕ್ರೌಂಚಭೇತ್ತಾ ತಥಾಪ್ಯಹಂ ।**
**ತಥಾನ್ಯವೀರಮಾಪೃಚ್ಛತ್ಕೋಽಸ್ಯ ಸಾರ್ಧಂ ಗಮಿಷ್ಯತಿ ॥ ೧೯ ॥**

---

೧೪. ಆ ಮಾತನ್ನು ಶತ್ರುಘ್ನನು ಕೇಳಿ ರಣದಲ್ಲಿ ಹರ್ಷದಿಂದ ಕೂಡಿರುವ ಮನಸ್ಸುಳ್ಳ ಭಟರನ್ನು ಕುರಿತು ಇಂತೆಂದನು.

೧೫. ಸುಬಾಹುವಿನ ಸೈನಿಕರು ಕ್ರೌಂಚವ್ಯೂಹವನ್ನು ರಚಿಸಿದ್ದಾರೆ.

೧೬. ಮುಖ ರೆಕ್ಕೆಗಳ ಭಾಗದಲ್ಲಿ ಇರುವ ಯೋಧರನ್ನು ಜಯಿಸುವ ಶಕ್ತಿಯುಳ್ಳವನು ನನ್ನ ಕೈಯಿಂದ ವೀಳ್ಯವನ್ನು ತೆಗೆದುಕೊಳ್ಳಲಿ.

೧೭. ಆಗ ಲಕ್ಷ್ಮೀನಿಧಿಯು ಕ್ರೌಂಚವ್ಯೂಹವನ್ನು ಭೇದಿಸುವುದಕ್ಕೆ ವೀರರಿಂದ ಕೂಡಿ ವೀಳಯವನ್ನು ತೆಗೆದುಕೊಂಡನು.

೧೮. ಮತ್ತು ಶತ್ರುಘ್ನನನ್ನು ಕುರಿತು ಎಲೈ! ರಾಜನೇ, ನಾನು ಕ್ರೌಂಚ ಭೇದನಕ್ಕೆ ಹೋಗುತ್ತೇನೆ. ಪೂರ್ವದಲ್ಲಿ ಪರಶುರಾಮನೊಬ್ಬನೇ ಈ ಕ್ರೌಂಚವನ್ನು ಭೇದಿಸಬಲ್ಲವನಾಗಿದ್ದನು. ಈಗ ನಾನು ಹಾಗೆಯೇ ಇದ್ದೇನೆ.

೧೯. ಶತ್ರುಘ್ನನು ಮಿಕ್ಕ ಭಟರನ್ನು ನೋಡಿ, ಈ ಲಕ್ಷ್ಮೀನಿಧಿಯ ಜೊತೆಯಲ್ಲಿ ಯಾರು ಹೋಗುತ್ತೀರಿ? ಎಂದನು.

ಪುಷ್ಕಲಃ ಪೃಷ್ಠತೋ ಯಸ್ಯ ಗಂತು ಚಕ್ರೇ ಮತಿಂ ತತಃ ।
ರಿಪುತಾಪೋ ನೀಲರತ್ನ ಉಗ್ರಾಶ್ಯೋ ವೀರಮರ್ದನಃ ॥ ೨೦ ॥

ಸರ್ವೇ ಶತ್ರುಘ್ನನಿರ್ದೇಶಾದ್ಯಯುಸ್ತೇ ಕ್ರೌಂಚಭೇದನೇ ।
ಶತ್ರುಘ್ನೋಽಪಿ ರಥೇ ಸಂಸ್ಥಃ ಸರ್ವಾಯುಧಧರಃ ಪರಃ ॥ ೨೧ ॥

ಪೃಷ್ಠತೋಽಸ್ಯ ಪರೀಯಾಯ ಬಹುಭಿಸ್ಸೈನಿಕೈರ್ವೃತಃ ।
ತದಾ ಪ್ರಚಲಿತೌ ದೃಷ್ಟ್ವಾವನ್ಯೋನ್ಯಬಲವಾರಿಧೀ ॥ ೨೨ ॥

ಪ್ರಳಯಂ ಕರ್ತುಮುದ್ಯುಕ್ತೌ ಜಗತಸ್ಸುತರಂಗಿಣೌ ।
ತದಾ ಭೇರ್ಯಸ್ಸಮಾಜಘ್ನುರುಭಯೋಸ್ಸೇನಯೋರ್ದೃಢಾಃ ॥ ೨೩ ॥

ರಣಭೇರ್ಯಶ್ಶಂಖನಾದಾಃ ಶ್ರೂಯಂತೇ ತತ್ರ ತತ್ರ ಹಿ ।
ಹೇಷಂತೇ ವಾಜಿನಸ್ತತ್ರ ಗರ್ಜಂತಿ ದ್ವಿರದಾ ಭೃಶಂ ॥ ೨೪ ॥

ಹುಂಹುಂ ಕುರ್ವಂತಿ ವೀರಾಗ್ರ್ಯಾ ನದಂತಿ ರಥನೇಮಯಃ ।
ತತ್ರ ವೀರಾಃ ಪ್ರಕುಪಿತಾಃ ಸುಬಾಹುಬಲದರ್ಪಿತಾಃ ॥ ೨೫ ॥

---

೨೦. ಪುಷ್ಕಲನು ಆ ಲಕ್ಷ್ಮೀನಿಧಿಯ ಹಿಂದೆ ಹೋಗಲು ಒಪ್ಪಿದನು. ನೀಲರತ್ನ, ಉಗ್ರರೆಂಬುವರು ಶತ್ರುಘ್ನನ ಅಪ್ಪಣೆ ಮೇರೆ ಆ ಲಕ್ಷ್ಮೀನಿಧಿಯ ಜೊತೆಯಲ್ಲಿ ಹೊರಟರು.

೨೧-೨೨. ಶತ್ರುಘ್ನನು ಶಸ್ತ್ರಸಜ್ಜಿತನಾಗಿ ಲಕ್ಷ್ಮೀನಿಧಿಯ ಹಿಂದೆ ಹೋದನು. ಆಗ ಒಬ್ಬರನ್ನೊಬ್ಬರು ನೋಡಿ ಎರಡು ಕಡೆಯ ಸೈನ್ಯಗಳೂ ಚಲಿಸಿದುವು.

೨೩. ಆ ಸೇನೆಗಳು ಅನ್ಯೋನ್ಯ ಪ್ರಳಯವನ್ನುಂಟುಮಾಡುವ ಸಮುದ್ರಗಳಂತೆ ಚಲಿಸಿದುವು. ಆಗ ಎರಡು ಪಕ್ಷದ ಸೇನೆಗಳೂ ಭೇರಿಗಳನ್ನು ಬಡಿದವು.

೨೪. ರಣಭೇರಿಗಳು ಮೊಳಗಿದುವು. ಶಂಖಗಳನ್ನು ಊದಿದರು. ಕುದುರೆಗಳು ಹೇಷಾರವಮಾಡಿದುವು. ಆನೆಗಳು ಘೀಂಕರಿಸಿದವು.

೨೫. ಸುಬಾಹುವಿನ ಬಲದಿಂದ ಕೊಬ್ಬಿದ ವೀರರು ಹುಂಕಾರಮಾಡಿದರು. ರಥಗಳ ಚಕ್ರಗಳು ಸದ್ದುಮಾಡಿದುವು.

ಛಿಂದಿ ಭಿಂದೀತಿ ಭಾಷಂತೋ ದೃಶ್ಯಂತೇ ಬಹವೋ ರಣೇ ।
ಏವಂಭೂತೇ ರಣೋದ್ಯುಕ್ತೇ ಸೈನ್ಯೇ ಶತ್ರುಘ್ನವೈರಿಣೋಃ ॥ ೨೬ ॥

ಮುಖಸಂಸ್ಥಂ ಸುಕೇತುಂ ತಂ ಲಕ್ಷ್ಮೀನಿಧಿರುವಾಚ ಹ ॥ ೨೭ ॥

॥ ಲಕ್ಷ್ಮೀನಿಧಿರುವಾಚ ॥

ಜನಕಸ್ಯ ಸುತಂ ವಿದ್ಧಿ ಲಕ್ಷ್ಮೀನಿಧಿರಿತಿ ಸ್ಮೃತಂ ।
ಸರ್ವಶಸ್ತ್ರಾಸ್ತ್ರಕುಶಲಂ ಸರ್ವಯುದ್ಧವಿಶಾರದಂ ॥ ೨೮ ॥

ಮುಂಚಾಶ್ವಂ ರಾಮಚಂದ್ರಸ್ಯ ಸರ್ವದಾನವದಂಶಿತುಃ ।
ನೋ ಚೇನ್ಮದ್ಬಾಣನಿರ್ಭಿನ್ನೋ ಯಾಸ್ಯಸೇ ಯಮಸಾದನಂ ॥ ೨೯ ॥

ಇತಿ ಬ್ರುವಂತಂ ವೀರಾಗ್ರ್ಯಂ ಸುಕೇತುಸ್ತರಸಾ ಬಲೀ ।
ಸಜ್ಜಂ ಚಾಪಂ ವಿಧಾಯಾಶು ಬಾಣಾನ್ಮುಂಚನ್ ರಣೇಽಭವತ್ ॥ ೩೦ ॥

---

೨೬-೨೭. ಯುದ್ಧದಲ್ಲಿ ಹೊಡಿ, ಕಡಿ, ಎಂದು ಕೂಗುತ್ತಿದ್ದರು. ಈರೀತಿ ಉಭಯಪಕ್ಷದ ಸೇನೆಗಳೂ ಯುದ್ಧಕ್ಕೆ ಸಿದ್ಧವಾಗಿರಲು, ಮುಖಭಾಗದಲ್ಲಿದ್ದ ಸುಕೇತುವನ್ನು ಕುರಿತು ಲಕ್ಷ್ಮೀನಿಧಿಯು ಹೇಳಿದನು.

೨೮. ಲಕ್ಷ್ಮೀನಿಧಿಯು ಹೇಳಿದನು:—ಜನಕನ ಮಗನಾದ ಲಕ್ಷ್ಮೀನಿಧಿಯೆಂದು ನನ್ನನ್ನು ತಿಳಿ. ಸರ್ವಶಸ್ತ್ರಾಸ್ತ್ರಗಳಲ್ಲಿ ಕುಶಲನು. ಯುದ್ಧವಿದ್ಯೆಯಲ್ಲಿ ಪಂಡಿತನು.

೨೯. ಸರ್ವದಾನವರನ್ನು ನಾಶಮಾಡಿದ ರಾಮಚಂದ್ರನ ಕುದುರೆಯನ್ನು ಬಿಟ್ಟು ಬಿಡು. ಇಲ್ಲದಿದ್ದರೆ ನನ್ನ ಬಾಣಗಳ ಏಟಿನಿಂದ ಯಮನ ಮನೆಯನ್ನು ಹೊಂದುತ್ತೀಯೆ.

೩೦. ಹೀಗೆ ಲಕ್ಷ್ಮೀನಿಧಿಯು ಹೇಳುತ್ತಿರಲು ಸುಬಾಹುವು ಧನುಸ್ಸನ್ನು ಸಿದ್ಧಮಾಡಿಕೊಂಡು ಬಾಣಗಳನ್ನು ಬಿಟ್ಟನು.

ತೇ ಬಾಣಾಃ ಶಿತಪರ್ವಾಣಃ ಸ್ವರ್ಣಪುಂಖಾಸ್ಸಮಂತತಃ ।
ದೃಶ್ಯಂತೇ ವ್ಯಾಪಿನಸ್ತತ್ರ ರಣಮಧ್ಯೇ ಸುದುರ್ಭರಾಃ ॥ ೩೧ ॥

ತದ್ಬಾಣಜಾಲಂ ತರಸಾ ನಿಪತ್ಯ
ಲಕ್ಷ್ಮೀನಿಧಿಶ್ಚಾಪಮಥಾಽತತಜ್ಯಂ ।
ವಿಧಾಯ ತಸ್ಯೋರಸಿ ಬಾಣಷಟ್ಕಂ
ಮುಮೋಚ ತೀಕ್ಷ್ಣಂ ಶಿತಪರ್ವಶೋಭಿತಂ ॥ ೩೨ ॥

ತೇ ಬಾಣಾಃ ಸುಭುಜಭ್ರಾತುರ್ಹೃದಯಂ ಸಂವಿದಾರ್ಯ ಚ ।
ಗತಾಸ್ತು ಭುವಿ ದೃಶ್ಯಂತೇ ರುಧಿರಾಕ್ತಮಲೀಮಸಾಃ ॥ ೩೩ ॥

ತದ್ಬಾಣಭಿನ್ನಹೃದಯಃ ಸುಕೇತುಃ ಕೋಪಪೂರಿತಃ ।
ಜಘಾನ ಶರವಿಂಶತ್ಯಾ ತೀಕ್ಷ್ಣಯಾ ನತಪರ್ವಯಾ ॥ ೩೪ ॥

ಉಭೌ ಬಾಣವಿಭಿನ್ನಾಂಗಾವುಭೌ ಕ್ಷತಜವಿಪ್ಲುತೌ ।
ಸೈನಿಕೈಃ ಪರಿದೃಶ್ಯಂತೇ ಕಿಂಶುಕಾವಿವ ಪುಷ್ಪಿತೌ ॥ ೩೫ ॥

---

೩೧. ಹರಿತವಾದ ಆ ಬಾಣಗಳು ರಣಮಧ್ಯದಲ್ಲಿ ಎಲ್ಲಾ ವ್ಯಾಪಿಸಿದಂತೆ ಕಂಡವು.

೩೨. ಲಕ್ಷ್ಮೀನಿದಿಯು ಆ ಬಾಣಗಳನ್ನು ನಾಶಮಾಡಿ ಅವನ ಎದೆಗೆ ಆರು ಬಾಣಗಳನ್ನು ಬಿಟ್ಟನು

೩೩. ಆ ಬಾಣಗಳು ಸುಕೇತುವಿನ ಎದೆಯನ್ನು ಸೀಳಿ ಭೂಮಿಯಲ್ಲಿ ರಕ್ತಮಯವಾಗಿ ಕಂಡವು.

೩೪. ಆ ಬಾಣಗಳು ತಗಲು ಸುಕೇತುವು ಕೋಪಗೊಂಡು ಇಪ್ಪತ್ತು ಬಾಣಗಳಿಂದ ಹೊಡೆದನು.

೩೫. ಇಬ್ಬರೂ ಬಾಣದ ಏಟು ತಿಂದು, ಇಬ್ಬರೂ ರಕ್ತದಿಂದ ತೋದಶರೀರವುಳ್ಳವರಾಗಿ, ಹೂಬಿಟ್ಟ ಮುತ್ತುಗದ ಮರಗಳಂತೆ ಸೈನಿಕರಿಗೆ ಕಂಡರು.

ಮುಂಚಂತೌ ಬಾಣಕೋಟೀಶ್ಚ ದಧತೌ ತರಸಾ ಶರಾನ್ ।
ಕೇನಾಪಿ ನ ವಿಲಕ್ಷ್ಯೇತೇ ಲಘುಹಸ್ತೌ ಮಹಾಬಲೌ ॥ ೩೬ ॥

ಕುಂಡಲೀಕೃತಸಚ್ಚಾಪೌ ವರ್ಷಂತೌ ಬಾಣಧಾರಯಾ ।
ನವಾಂಬುದಾವಿವ ದಿವಿ ಶಕ್ರನಿರ್ದೇಶಕಾರಿಣೌ ॥ ೩೭ ॥

ತಯೋರ್ಬಾಣಾ ಗಜಾನಶ್ವಾನ್ ನರಾನ್ಶೂರಾನ್ನಿಮಸ್ತಕಾನ್ ।
ಕುರ್ವಂತಃ ಕೇವಲಂ ದೃಷ್ಟಾ ನ ಚ ಸಂಧಾನಮೋಕ್ಷಣೇ ॥ ೩೮ ॥

ಪೃಥಿವೀ ಸುಭಟೈಃ ಪೂರ್ಣಾ ಸಕಿರೀಟೈಃ ಸಕುಂಡಲೈಃ
ಧನುರ್ಬಾಣಕರೈ ರೋಷಸಂದಷ್ಟಾಧರಯುಗ್ಮಕೈಃ ॥ ೩೯ ॥

ತಯೋಃ ಪ್ರಯುಧ್ಯತೋರ್ದರ್ಪಾತ್ಸರ್ವಶಸ್ತ್ರಾಸ್ತ್ರವೇದಿನೋಃ ।
ಯುದ್ಧಂ ಸಮಭವದ್ಘೋರಂ ದೇವವಿಸ್ಮಾಪನಂ ಮಹತ್ ॥ ೪೦ ॥

---

೩೬. ಬಾಣಗಳನ್ನು ಬಿಡುತ್ತ ಹೂಡುತ್ತಲಿರುವ ಆ ಲಘುಹಸ್ತರನ್ನು ಎಲ್ಲರೂ ಶ್ಲಾಘಿಸಿದರು.

೩೭. ದುಂಡಗೆ ಮಾಡಿಕೊಂಡ ಧನುಸ್ಸಿನಿಂದ ಬಾಣಧಾರೆಗಳನ್ನು ಬಿಡುತ್ತಿದ್ದರೆ ಇಂದ್ರನ ಅಪ್ಪಣೆಯಂತೆ ಆಕಾಶದಲ್ಲಿ ಮಳೆ ಸುರಿಸುತ್ತಿರುವ ನೀಲಮೇಘಗಳಂತೆ ಕಾಣುತ್ತಿದ್ದರು.

೩೮. ಅವರ ಬಾಣಗಳು ಆನೆ, ಕುದುರೆ, ಶೂರರ ತಲೆ ಕತ್ತರಿಸುವುದನ್ನು ನೋಡಬಹುದೇ ಹೊರತು ಹೂಡುವುದು ಬಿಡುವುದನ್ನು ಕಾಣಲಾಗುತ್ತಿರಲಿಲ್ಲ.

೩೯. ಭೂಮಿಯು, ಧನುರ್ಬಾಣಗಳನ್ನು ಧರಿಸಿ ರೋಷದಿಂದ ಹಲ್ಲುಮುಡಿ ಕಚ್ಚಿದ ಕಿರೀಟಕುಂಡಲಗಳಿಂದ ಕೂಡಿದ ಭಟರಿಂದ ಕೂಡಿತ್ತು.

೪೦. ಸರ್ವಶಸ್ತ್ರಾಸ್ತ್ರಗಳನ್ನು ಬಲ್ಲ ಕೋಪದಿಂದ ಯುದ್ಧಮಾಡುತ್ತಿರುವ ಅವರ ಯುದ್ಧವು ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡಿತು

ಸಂಮರ್ದೋಽಭವಪತ್ಯಂತಂ ವೀರಕೋಟಿವಿಘಾತನಃ ।
ನ ಕೇನಚಿತ್ಕ್ವಚಿದ್ದೃಷ್ಟಂ ಶರಜಾಲಾಂತರೇಂಬರಂ ॥ ೪೧ ॥

ತಸ್ಮಿಂಸ್ತು ಸಮಯೇ ಲಕ್ಷ್ಮೀನಿಧಿರ್ವೀರೋಽರಿಮರ್ದನಃ ।
ಬಾಣಾಂಶ್ಚಾಪೇ ಸಮಾಧತ್ತ ವಸುಸಂಖ್ಯಾನ್ ದೃಢಾನ್ ಶಿತಾನ್ ॥ ೪೨ ॥

ಚತುರ್ಭಿಸ್ತುರಗಾನ್ವೀರಃ ಸುಕೇತೋರನಯತ್ಕ್ಷಯಂ ।
ಏಕೇನ ಧ್ವಜಮುತ್ಯುಗ್ರಂ ಚಿಚ್ಛೇದ ತರಸಾ ಹರ್ಷ ॥ ೪೩ ॥

ಏಕೇನ ಸಾರಥೇಃ ಕಾಯಾಚ್ಛಿರೋ ಭೂಮಾವಪಾತಯತ್ ।
ಏಕೇನ ಚಾಪಂ ಸಗುಣಮಚ್ಛಿನದ್ರೋಷಪೂರಿತಃ ॥ ೪೪ ॥

ಏಕೇನ ಹೃದಿ ವಿವ್ಯಾಧ ಸುಕೇತೋರ್ವೇಗವಾನ್ನೃಪಃ ।
ತತ್ಕರ್ಮಾದ್ಭುತಮುದ್ವೀಕ್ಷ್ಯ ವೀರಾ ವಿಸ್ಮಯಮಾಯಯುಃ ॥ ೪೫ ॥

ಸ ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ ।
ಮಹತೀಂ ಸ ಗದಾಂ ನೀತ್ವಾ ಯೋದ್ಧುಕಾಮೋಽಭ್ಯುಪೇಯಿವಾನ್ ॥ ೪೬ ॥

---

೪೧. ವೀರರನ್ನು ನಾಶಮಾಡುವ ಸಂಮರ್ದವು ವಿಶೇಷವಾಗಿ ಆಯಿತು. ಆ ಬಾಣಗಳಿಂದ ಮುಚ್ಚಲ್ಪಟ್ಟ ಆಕಾಶವನ್ನು ಎಲ್ಲೂ ಯಾರೂ ನೋಡಲೇ ಇಲ್ಲ.

೪೨. ಇಷ್ಟರೊಳಗೆ ಲಕ್ಷ್ಮೀನಿಧಿಯು ಎಂಟು ಬಾಣಗಳನ್ನು ಬಿಲ್ಲಿನಲ್ಲಿ ಹೂಡಿದನು.

೪೩—೪೫. ನಾಲ್ಕು ಬಾಣಗಳಿಂದ ಸುಕೇತುವಿನ ಕುದುರೆಗಳನ್ನೂ, ಒಂದರಿಂದ ಧ್ವಜವನ್ನೂ, ಒಂದರಿಂದ ಸಾರಥಿಯನ್ನೂ, ಒಂದರಿಂದ ಬಿಲ್ಲುಬೀವುಗಳನ್ನು ಕತ್ತರಿಸಿ, ಮತ್ತೊಂದರಿಂದ ಎದೆಗೆ ಹೊಡೆದನು. ಆ ಅದ್ಭುತವನ್ನು ನೋಡಿ ವೀರರು ಆಶ್ಚರ್ಯಪಟ್ಟರು.

೪೬. ಧನುಸ್ಸು ರಥಗಳಿಲ್ಲದ ಈತನು ಗದೆಯನ್ನು ತೆಗೆದುಕೊಂಡು ಯುದ್ಧಕ್ಕೆ ಬಂದನು.

**ತಮಾಯಾಂತಂ ಸಮಾಲಕ್ಷ್ಯ ಗದಾಯುದ್ಧವಿಶಾರದಂ ।**
**ಮಹತ್ಯಾ ಗದಯಾ ಯುಕ್ತಂ ರಥಾದವತತಾರ ಸಃ ॥ ೪೭ ॥**

**ಗದಾಮಾದಾಯ ಮಹತೀಂ ಸರ್ವಾಯಸವಿನಿರ್ಮಿತಾಂ ।**
**ಜಾತರೂಪವಿಚಿತ್ರಾಂಗೀಂ ಸರ್ವಶೋಭಾಪುರಸ್ಕೃತಾಂ ॥ ೪೮ ॥**

**ಲಕ್ಷ್ಮೀನಿಧಿರ್ಭೃಶಂ ಕ್ರುದ್ಧಃ ಸುಕೇತೋರ್ವಕ್ಷಸಿ ತ್ವರನ್ ।**
**ತಾಡಯಾಮಾಸ ಸುದೃಢಂ ಗದಾಂ ವಜ್ರಾಗ್ನಿಸನ್ನಿಭಾಂ ॥ ೪೯ ॥**

**ಗದಯಾ ತಾಡಿತೋ ವೀರೋ ನಾಕಂಪತ ಮಹಾಮುನೇ ।**
**ಮದೋನ್ಮತ್ತೋ ಯಥಾ ದಂತೀ ಬಾಲೇನೈವ ಸ್ರಜಾ ಹತಃ ॥ ೫೦ ॥**

**ಕಥಯಾಮಾಸ ವೀರಾಗ್ರ್ಯೋ ನೃಪಂ ಲಕ್ಷ್ಮೀನಿಧಿಂ ತದಾ ।**
**ಸಹಸ್ವೈಕಂ ಪ್ರಹಾರಂ ಮೇ ಯದಿ ಶೂರಃ ಪರಂತಪಃ ॥ ೫೧ ॥**

**ಇತ್ಯುಕ್ತ್ವಾ ತಾಡಯಾಮಾಸ ಲಲಾಟೇ ಗದಯಾ ಭೃಶಂ ।**
**ಗದಯಾ ತಾಡಿತೋ ಭಾಲೇಽಸೃಗ್ವಮನ್ಮುಕಿತೋ ಭೃಶಂ ॥ ೫೨ ॥**

---

೪೭-೪೯. ಗದಾಯುದ್ಧವಿಶಾರದನಾದ ಸುಕೇತುವು ಬರುವುದನ್ನು ನೋಡಿ ರಥದಿಂದ ಕೆಳಕ್ಕೆ ಇಳಿದು ಅಲ್ಲಲ್ಲೇ ಚಿನ್ನದ ಚಿತ್ರವನ್ನು ಕಟ್ಟಿರುವ ಚನ್ನಾಗಿರುವ ಉಕ್ಕಿನ ಗದೆಯನ್ನು ತೆಗೆದುಕೊಂಡು ವೇಗದಿಂದ ಅವನ ಎದೆಗೆ ಹೊಡೆದನು.

೫೦. ಸುಕೇತುವು ಆ ಗದೆಯಿಂದ ಹೊಡೆಯಲ್ಪಟ್ಟರೂ ಮದಿಸಿದ ಆನೆಗೆ ಮಕ್ಕಳು ಹೂವಿನ ಮಾಲೆಯಿಂದ ಹೊಡೆದಂತೆ ವ್ಯಥೆಪಡಲಿಲ್ಲ.

೫೧. ಆಗ ಸುಕೇತುವು ಲಕ್ಷ್ಮೀನಿಧಿಯನ್ನು ಕುರಿತು ನೀನು ಶೂರನಾಗಿದ್ದರೆ ನನ್ನದೊಂದು ಏಟನ್ನು ಸಹಿಸು, ಎಂದನು.

೫೨. ಹೀಗೆಂದು ಹೇಳಿ ಹಣೆಯ ಮೇಲೆ ವೇಗದಿಂದ ಹೊಡೆಯಲು ಅವನು ರಕ್ತವನ್ನು ಕಕ್ಕಿದನು.

ಮೂರ್ಧ್ನಿ ತಂ ತಾಡಯಾಮಾಸ ಗದಯಾ ಕಾಲರೂಪಯಾ ।
ಸುಕೇತುರಪಿ ತಂ ಸ್ಕಂಧೇ ತಾಡಯಾಮಾಸ ಧರ್ಮವಿತ್ ॥ ೫೩ ॥

ಏವಂ ಭೃಶಂ ಸುಕುಪಿತೌ ಗದಾಯುದ್ಧವಿಶಾರದೌ ।
ಗದಾಯುದ್ಧಂ ಪ್ರಕುರ್ವಾತೇ ಪರಸ್ಪರಜಯೈಷಿಣೌ ॥ ೫೪ ॥

ಅನ್ಯೋನ್ಯಘಾತವಿಮುತೌ ಪರಸ್ಪರವಧೋದ್ಯತೌ ।
ನ ಕೋಪಿ ತತ್ರ ಹೀಯೇತ ನ ಕೋ ಜೀಯೇತ ಸಂಯುಗೇ ॥ ೫೫ ॥

ಮೂರ್ಧ್ನಿ ಭಾಲೇ ತಥಾ ಸ್ಕಂಧೇ ಹೃದಿ ಗಾತ್ರೇಷು ಸರ್ವತಃ ।
ರುಧಿರೌಘಪರಿಕ್ಲಿನ್ನೌ ಮಹಾಬಲಪರಾಕ್ರಮೌ ॥ ೫೬ ॥

ತದಾ ಲಕ್ಷ್ಮೀನಿಧಿಃ ಕ್ರುದ್ಧೋ ಗದಾಮುದ್ಯಮ್ಯ ವೇಗವಾನ್ ।
ಜಗಾಮ ಪ್ರಬಲಂ ಹಂತುಂ ಹೃದಿ ರಾಜಾನುಜಂ ಬಲೀ ॥ ೫೭ ॥

ತಮಾಯಾಂತಮಥಾಲೋಕ್ಯ ಸ್ವಗದಾಂ ಮಹತೀಂ ದಧತ್ ।
ಯಯೌ ತಂ ತರಸಾ ಹಂತುಂ ರಾಜಭ್ರಾತಾ ಬಲಾದ್ಬಲಂ ॥ ೫೮ ॥

---

೫೩. ಆ ಲಕ್ಷ್ಮೀನಿಧಿಯು ಕೋಪಗೊಂಡು ಗದೆಯಿಂದ ತಲೆಯ ಮೇಲೆ ಹೊಡೆದನು. ಪುನಃ ಸುಕೇತುವು ಲಕ್ಷ್ಮೀನಿಧಿಗೆ ಹೆಗಲ ಮೇಲೆ ಹೊಡೆದನು.

೫೪. ಗದಾಯುದ್ಧವಿಶಾರದರಾದ ಅವರು ಕೋಪಗೊಂಡು ಜಯವನ್ನು ಅಪೇಕ್ಷಿಸುತ್ತ ಇಬ್ಬರೂ ಯುದ್ಧಮಾಡಿದರು.

೫೫. ಪರಸ್ಪರ ಹೊಡೆದಾಡುತ್ತ ಜಯದಲ್ಲಿ ಅಪೇಕ್ಷೆಪಡುತ್ತಾ ಅವರಲ್ಲಿ ಒಬ್ಬನೂ ಕಡಿಮೆಯಾಗಲಾರ. ಒಬ್ಬನೂ ಜಯಿಸಲಾರ.

೫೬. ಅವರು ತಲೆ ಹಣೆ ಹೃದಯ ದೇಹ ಎಲ್ಲೆಲ್ಲೂ ರಕ್ತದಿಂದ ಕೂಡಿ ನೆಂದುಹೋದರು.

೫೭. ಆಗ ಲಕ್ಷ್ಮೀನಿಧಿಯು ಕೋಪಗೊಂಡು ಗದೆಯನ್ನೆತ್ತಿಕೊಂಡು ಪ್ರಬಲನಾದ ಆ ಸುಕೇತುವನ್ನು ಎದೆಯ ಮೇಲೆ ಹೊಡೆಯಲು ಹೋದನು.

೫೮. ಸುಕೇತುವು ಮಹಾಗದೆಯನ್ನು ಹಿಡಿದು ಬರುತ್ತಿರುವ ಆ ಲಕ್ಷ್ಮೀನಿಧಿಯನ್ನು ಹೊಡೆಯಲು ತಾನೂ ಗದೆಯನ್ನು ತೆಗೆದುಕೊಂಡು ಹೊರಟನು.

ಗದಾಂ ತೇನ ವಿನಿಕ್ಷಿಪ್ತಾಂ ಸ್ವಕರೇ ಧೃತವಾನಯಂ ।
ತಯೈವ ಗದಯಾ ತಸ್ಯ ಹೃದಿ ಜಘ್ನೇ ಮಹಾಬಲಃ ॥ ೫೯ ॥

ಸ್ವಗದಾಂ ತೇನ ವೈ ನೀತಾಂ ದೃಷ್ಟ್ವಾ ಲಕ್ಷ್ಮೀನಿಧಿರ್ನೃಪಃ ।
ಬಾಹುಯುದ್ಧೇನ ತಂ ಯೋದ್ಧುಮಿಯೇಷ ಬಲವತ್ತರಂ ॥ ೬೦ ॥

ತದಾ ರಾಜಾನುಜಃ ಕ್ರುದ್ಧೋ ಬಾಹುಭ್ಯಾಮುಪಗೃಹ್ಯ ತಂ ।
ಯುಯುಧೇ ಸರ್ವಯುದ್ಧಸ್ಯ ಜ್ಞಾತಾ ವೀರೇಷು ಸತ್ತಮಃ ॥ ೬೧ ॥

ತದಾ ಲಕ್ಷ್ಮೀನಿಧಿಸ್ತಸ್ಯ ಹೃದಿ ಜಘ್ನೇ ಸ್ವಮುಷ್ಟಿನಾ ।
ತದಾ ಸೋಽಪಿ ಶಿರಸ್ಯೇನಂ ಮುಷ್ಟಿಮುದ್ಯಮ್ಯ ಚಾಹನತ್ ॥ ೬೨ ॥

ಮುಷ್ಟಿಭಿರ್ವಜ್ರಸಂಕಾಶೈಸ್ತಲಸ್ಫೋಟೈಶ್ಚ ದಾರುಣೈಃ ।
ಅನ್ಯೋನ್ಯಂ ಜಘ್ನತುಃ ಕ್ರುದ್ಧೌ ಸಂದಷ್ಟಾಧರಪಲ್ಲವೌ ॥ ೬೩ ॥

ಮುಷ್ಟೀಮುಷ್ಟಿ ದಂತಾದಂತಿ ಕಚಾಕಚಿ ನಖಾನಖಿ ।
ಉಭಯೋರಭವದ್ಯುದ್ಧಂ ತುಮುಲಂ ರೋಮಹರ್ಷಣಂ ॥ ೬೪ ॥

---

೫೯. ಆ ಲಕ್ಷ್ಮೀನಿಧಿಯು ಎಸೆದ ಗದೆಯನ್ನು ಸುಕೇತುವು ಹಿಡಿದು ಆ ಲಕ್ಷ್ಮೀನಿಧಿಯ ಮೇಲೆ ಬಿಟ್ಟು ಎದೆಗೆ ಹೊಡೆದನು.

೬೦. ಲಕ್ಷ್ಮೀನಿಧಿಯು ತನ್ನ ಗದೆಯನ್ನು ಎದುರಾಳಿಯು ತೆಗೆದುಕೊಂಡ ದ್ದನ್ನು ನೋಡಿ ಬಾಹುಯುದ್ಧದಿಂದ ಯುದ್ಧಮಾಡಲು ಹೊರಟನು.

೬೧. ಆಗ ಸುಕೇತುವು ತೋಳುಗಳಿಂದ ಲಕ್ಷ್ಮೀನಿಧಿಯನ್ನು ಹಿಡಿದುಕೊಂಡು ಯುದ್ಧಮಾಡಿದನು.

೬೨. ಆಗ ಲಕ್ಷ್ಮೀನಿಧಿಯು ಸುಕೇತುವನ್ನು ಹೃದಯದ ಮೇಲೆ ಹೊಡೆಯಲು ಅವನು ಲಕ್ಷ್ಮೀನಿಧಿಗೆ ತಲೆಯ ಮೇಲೆ ಮುಷ್ಟಿಯಿಂದ ಹೊಡೆದನು.

೬೩. ವಜ್ರಮುಷ್ಟಿಗಳಿಂದ ಪರಸ್ಪರವಾಗಿ ಹಲ್ಲುಮುಡಿ ಕಚ್ಚಿಕೊಂಡು ಹೊಡೆ ದಾಡಿದರು.

೬೪. ಮುಷ್ಟಿಯಿಂದ ಮುಷ್ಟಿಯಿಂದಲೂ ಹಲ್ಲಿನಿಂದ ಹಲ್ಲಿನಿಂದಲೂ ತಲೆ ಯಿಂದ ತಲೆಯಿಂದಲೂ ಇಬ್ಬರಿಗೂ ಯುದ್ಧಗಳಾದವು.

ತದಾ ಪ್ರಕುಪಿತೋ ಭ್ರಾತಾ ನೃಪತೇಶ್ಚ ರಣೇ ನೃಪಂ ।
ಗೃಹೀತ್ವಾ ಭ್ರಾಮಯಿತ್ವಾಥ ಪಾತಯಾಮಾಸ ಭೂತಳೇ ॥ ೬೫ ॥

ಲಕ್ಷ್ಮೀನಿಧಿಃ ಕರೇ ಗೃಹ್ಯ ತಂ ನೃಪಾನುಜಮುಚ್ಚಕೈಃ ।
ಭ್ರಾಮಯಿತ್ವಾ ಶತಗುಣಂ ಗಜೋಪಸ್ಥೇ ಜಘಾನ ತಂ ॥ ೬೬ ॥

ಸ ತದಾ ಪತಿತೋ ಭೂಮೌ ಸಂಜ್ಞಾಂ ಪ್ರಾಪ್ಯ ಕ್ಷಣಾದನು ।
ತಥೈವ ಭ್ರಾಮಯಾಮಾಸ ವ್ಯೋಮ್ನಿ ವೇಗೇನ ವಿಕ್ರಮೀ ॥ ೬೭ ॥

ಏವಂ ಪ್ರಯುಧ್ಯಮಾನೌ ತೌ ಬಾಹುಯುದ್ಧಂ ಗತೌ ಪುನಃ ।
ಪಾದೇ ಪಾದಂ ಕರೇ ಪಾಣಿಂ ಹೃದಿ ಹೃದಂ ಮುಖೇ ಮುಖಂ ॥ ೬೮ ॥

ಏವಂ ಪರಸ್ಪರಶ್ಲಿಷ್ಟೌ ಪರಸ್ಪರವಧೈಷಿಣೌ ।
ಉಭಾವಪಿ ಬಲಾಕ್ರಾಂತಾವುಭೌ ಮುರ್ಛಾಮುಪೀಯತುಃ ॥ ೬೯ ॥

---

೬೫. ಆಗ ಸುಕೇತುವು ಕೋಪಗೊಂಡು ಲಕ್ಷ್ಮೀನಿಧಿಯನ್ನು ಕಾಲುಹಿಡಿದು ತಿರುಗಿಸಿ ಕೆಡಹಿದನು.

೬೬. ಅನಂತರ ಲಕ್ಷ್ಮೀನಿಧಿಯು ಸುಕೇತುವನ್ನು ಹಿಡಿದು ನೂರುಸುತ್ತು ತಿರುಗಿಸಿ ಆನೆಗೆ ಬಡಿದನು.

೬೭. ಅವನು ಭೂಮಿಯಲ್ಲಿ ಬಿದ್ದು ಜ್ಞಾನವನ್ನು ಹೊಂದಿ ಅದರಂತೆಯೇ ಲಕ್ಷ್ಮೀನಿಧಿಯನ್ನು ತಿರುಗಿಸಿದನು.

೬೮. ಹೀಗೆ ಯುದ್ಧಮಾಡುತ್ತ ಮುಖಮುಖಕ್ಕೆ ಕೈಕೈಗೆ ಎದೆಎದೆಗೆ ಕಾಲು ಕಾಲಿಗೆ ಹೊಡೆದು ಯುದ್ಧಕ್ಕೆ ಮೊದಲುಮಾಡಿದರು.

೬೯. ಹೀಗೆ ಒಬ್ಬರನ್ನೊಬ್ಬರು ಹಿಡಿದು ಕೊಲ್ಲಲು ಪ್ರಯತ್ನಪಡುತ್ತ ಮೂರ್ಛೆ ಹೊಂದಿದರು.

**ತದ್ದೃಷ್ಟ್ವಾ ವಿಸ್ಮಯಂ ಪ್ರಾಪ್ತಾಃ ಪ್ರಶಶಂಸುಸ್ಸಹಸ್ರಶಃ ।**
**ಧನ್ಯೋ ಲಕ್ಷ್ಮೀನಿಧಿರ್ಭೂಪೋ ಧನ್ಯೋ ರಾಜಾನುಜೋ ಬಲೀ ॥ ೭೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಗದಾಯುದ್ಧಂ ನಾಮ ಷಡ್ವಿಂಶೋಽಧ್ಯಾಯಃ**



೭೦. ಅದನ್ನು ನೋಡಿದ ಬಹುಜನರು ಲಕ್ಷ್ಮೀನಿಧಿಯು ಧನ್ಯನು, ಸುಕೇತುವು ಧನ್ಯನು; ಎಂದು ಹೊಗಳಿದರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಗದಾಯುದ್ಧವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಸಪ್ತವಿಂಶೋಽಧ್ಯಾಯಃ

॥ ಶೇಷ ಉವಾಚ ॥

ಚಿತ್ರಾಂಗಃ ಕ್ರೌಂಚಕಂಠಸ್ಥೋ ರಥಸ್ಥೋ ವೀರಶೋಭಿತಃ ।
ಗಾಹಯಾಮಾಸ ತತ್ಸೈನ್ಯಂ ವಾರಾಹ ಇವ ವಾರಿಧಿಂ ॥ ೧ ॥

ಧನುರ್ವಿಸ್ಫಾರ್ಯ ಸುದೃಢಂ ಮೇಘನಾದನಿನಾದಿ ತತ್ ।
ಮುಮೋಚ ಬಾಣಾನ್ನಿಶಿತಾನ್ ವೈರಿಕೋಟಿವಿದಾಹಕಾನ್ ॥ ೨ ॥

ತದ್ಬಾಣಭಿನ್ನಸರ್ವಾಂಗಾಶ್ಶೇರತೇ ಸುಭಟಾ ಭೃಶಂ ।
ಸಕಿರೀಟತನುತ್ರಾಣಾಸ್ಸಂದಷ್ಟದಶನಚ್ಛದಾಃ ॥ ೩ ॥

ಏವಂ ಪ್ರವೃತ್ತೇ ಸಂಗ್ರಾಮೇ ಯಯೌ ಯೋದ್ಧುಂ ತು ಪುಷ್ಕಲಃ ।
ಮಣಿಚಿತ್ರಿತಮಾದಾಯ ಚಾಪಂ ವೈರಿಪ್ರತಾಪನಂ ॥ ೪ ॥

---

## ಇಪ್ಪತ್ತೇಳನೆಯ ಅಧ್ಯಾಯವು

೧. ಶೇಷನು ಹೇಳಿದನು:—ಕ್ರೌಂಚವ್ಯೂಹದ ಕತ್ತಿನಲ್ಲಿದ್ದ ಚಿತ್ರಾಂಗನು ಶೌರ್ಯದಿಂದ ಆ ಸೈನ್ಯವನ್ನು, ಹಂದಿಯು ನೀರು ಕಲಕುವಂತೆ ಬಾಣದಿಂದ ಕಲಕಿದನು.

೨. ಧನುಸ್ಸನ್ನು ಸದ್ದುಮಾಡುತ್ತ ತೀಕ್ಷ್ಣವಾದ ಬಾಣಗಳನ್ನು ಬಿಡುತ್ತಿದ್ದನು.

೩. ಆ ಬಾಣದಿಂದ ಏಟುತಿಂದ ಭಟರು ಕಿರೀಟಗಳೊಡನೆ ಹಲ್ಲು ಕಚ್ಚಿಕೊಂಡು ರಣಾಂಗಣದಲ್ಲಿ ಬೀಳುತ್ತಿದ್ದರು.

೪. ಹೀಗೆ ಯುದ್ಧವು ನಡೆಯುತ್ತಿರಲು ಪುಷ್ಕಲನು ಒಳ್ಳೆಯ ಧನುಸ್ಸನ್ನು ತೆಗೆದುಕೊಂಡು ಯುದ್ಧಕ್ಕೆ ಹೊರಟನು.

ತಯೋಸ್ಸಂಗತಯೋಃ ರೂಪಂ ದೃಶ್ಯತೇಽತಿಮನೋಹರಂ ।
ಪುರಾ ತಾರಕಸಂಯೋಗೇ ಸ್ಕಂದತಾರಕಯೋರ್ಯಥಾ ॥ ೫ ॥

ವಿಸ್ಫಾರಯನ್ ಧನುಶ್ಶೀಘ್ರಂ ಸವ್ಯಸಾಚೀ ತು ಪುಷ್ಕಲಃ ।
ತಾಡಯಾಮಾಸ ತಂ ಕ್ಷಿಪ್ರಂ ಶರೈಸ್ಸನ್ನತಪರ್ವಭಿಃ ॥ ೬ ॥

ಚಿತ್ರಾಂಗೋಽಪಿ ರುಷಾಕ್ರಾಂತಃ ಶರಾಸನ ಇಷೂನ್ ಶಿತಾನ್ ।
ದಧದ್ವ್ಯಮುಂಚದ್ಬಹುಶೋ ರಣಮಂಡಲಮೂರ್ಧನಿ ॥ ೭ ॥

ನಾದಾನಂ ನ ಚ ಸಂಧಾನಂ ನ ಮೋಚನಮಥಾಪಿ ವಾ ।
ದೃಷ್ಟಂ ತಾವೇವ ಸಂದೃಷ್ಟೌ ಕುಂಡಲೀಕೃತಚಾಪಿನೌ ॥ ೮ ॥

ತದಾಸೌ ಪುಷ್ಕಲಃ ಕ್ರುದ್ಧಃ ಶರಾಣಾಂ ಶತಕೇನ ತಂ ।
ವಿವ್ಯಾಧ ವಕ್ಷಸ್ಥಲಕೇ ಮಹಾಯೋಽಬ್ಧಾರಮುದ್ಭಟಂ ॥ ೯ ॥

ಚಿತ್ರಾಂಗಸ್ತಾನ್ಶರಾನ್ಸರ್ವಾಂಶ್ಚಿಚ್ಛೇದ ತಿಲಶಃ ಕ್ಷಣಾತ್ ।
ತಾಡಯಾಮಾಸ ಚಾಂಗೇಷು ಪುಷ್ಕಲಂ ಶಿತಸಾಯಕೈಃ ॥ ೧೦ ॥

---

೫. ಅವರಿಬ್ಬರೂ ಯುದ್ಧಕ್ಕೆ ಸೇರಿದುದನ್ನು ನೋಡಿದರೆ ಸ್ಕಂದತಾರಕರಂತೆ ತೋರುತ್ತಿತ್ತು.

೬. ಧನುಸ್ಸನ್ನು ಶಬ್ದಮಾಡುತ್ತ ಪುಷ್ಕಳನು ಒಳ್ಳೆಯ ಬಾಣಗಳಿಂದ ಚಿತ್ರಾಂಗನನ್ನು ಹೊಡೆದನು.

೭. ಚಿತ್ರಾಂಗನು ಕೋಪದಿಂದ ಚೂಪಾದ ಬಾಣಗಳಿಂದ ಹೊಡೆಯುತ್ತಿದ್ದನು.

೮. ಅವರ ಬಾಣದ ಹಿಡಿಯುವಿಕೆ, ಹೂಡುವಿಕೆ, ಬಿಡುವಿಕೆಗಳೊಂದೂ ಕಾಣಿಸುತ್ತಿರಲಿಲ್ಲ. ಅವರು ಮಾತ್ರ ಚಕ್ರಾಕಾರದ ಧನುರ್ಧರರಾಗಿ ಕಾಣಿಸುತ್ತಿದ್ದರು.

೯. ಆಗ ಪುಷ್ಕಲನು ಕೋಪದಿಂದ ನೂರು ಬಾಣಗಳಿಂದ ಅವನ ಎದೆಗೆ ಹೊಡೆದನು.

೧೦. ಚಿತ್ರಾಂಗನು ಆ ಬಾಣಗಳನ್ನೆಲ್ಲಾ ಚೂರುಚೂರಾಗಿ ಕತ್ತರಿಸಿ ಪುಷ್ಕಲನನ್ನು ಹೊಡೆದನು.

ಪುಷ್ಕಲಸ್ತದ್ರಥಂ ದಿವ್ಯಂ ಭ್ರಾಮಕಾಸ್ತ್ರೇಣ ಶೋಭಿನಾ ।
ನಭಸಿ ಭ್ರಾಮಯಾಮಾಸ ತದದ್ಭುತ ಮಿವಾಭವತ್ ॥ ೧೧ ॥

ಭ್ರಾಂತ್ವಾ ಮುಹೂರ್ತಮಾತ್ರಂ ತು ತದ್ರಥೋ ಹಯಸಂಯುತಃ ।
ಸ್ಥಿತಿಂ ಲೇಭೇಽತಿಕಷ್ಟೇನ ಸಂಧೃತೋ ರಣಮಂಡಲೇ ॥ ೧೨ ॥

ಸ ಚಾಸ್ಯ ವಿಕ್ರಮಂ ದೃಷ್ಟ್ವಾ ಚಿತ್ರಾಂಗಃ ಕುಪಿತೋ ಭೃಶಂ ।
ಉವಾಚ ಪುಷ್ಕಲಂ ಧೀಮಾನ್ ಸರ್ವಾಸ್ತ್ರೇಷು ವಿಶಾರದಃ ॥ ೧೩ ॥

॥ ಚಿತ್ರಾಂಗ ಉವಾಚ ॥

ತ್ವಯಾ ಸಾಧು ಕೃತಂ ಕರ್ಮ ಸುಭಟೈರ್ಯುಧಿ ಸಮ್ಮತಂ ।
ಮದ್ರಥೋ ವಾಜಿಸಂಯುಕ್ತೋ ಭ್ರಾಮಿತೋ ನಭಸಿ ಕ್ಷಣಂ ॥ ೧೪ ॥

ಪರಾಕ್ರಮಂ ಸಮೀಕ್ಷಸ್ವ ಮಮಾಪಿ ಸುಭಟೇಡಿತಂ ।
ಆಕಾಶಚಾರೀ ತು ಭವಾನ್ ಭವತ್ವಮರಪೂಜಿತಃ ॥ ೧೫ ॥

---

೧೧. ಪುಷ್ಕಳನು ಒಂದು ತಿರುಗಿಸುವ ಅಸ್ತ್ರದಿಂದ ಅವನ ರಥವನ್ನು ತಿರುಗಿಸಿದನು. ಅದು ಆಶ್ಚರ್ಯಕರವಾಗಿದ್ದಿತು.

೧೨. ಆ ರಥವು ಒಂದು ಕ್ಷಣಕಾಲ ಗಿರ್ರನೆ ಸುತ್ತಿ ಬಹು ಕಷ್ಟದಿಂದ ನಿಂತುಕೊಂಡಿತು.

೧೩. ಅವನ ವಿಕ್ರಮದಿಂದ ಚಿತ್ರಾಂಗನು ಕೋಪಗೊಂಡು ಪುಷ್ಕಲನನ್ನು ಕುರಿತು ಇಂತೆಂದನು.

೧೪-೧೫. ಚಿತ್ರಾಂಗನು ಹೇಳಿದನು :—ಅಯ್ಯಾ! ಶೂರರು ಹೊಗಳುವ ಕೆಲಸವನ್ನು ಮಾಡಿದೆ. ನನ್ನ ರಥವು ಕುದುರೆಗಳೊಂದಿಗೆ ಸುತ್ತಿತು. ನನ್ನ ಪರಾಕ್ರಮವನ್ನು ನೋಡು. ನೀನು ಆಕಾಶದಲ್ಲಿ ಸುತ್ತುತ್ತ ದೇವತೆಗಳು ಪೂಜಿಸುವಂತೆ ಮಾಡುತ್ತೇನೆ.

ಇತ್ಯುಕ್ತ್ವಾ ಸ ಮುಮೋಚಾಸ್ತ್ರಂ ರಣೇ ಪರಮದಾರುಣಂ ।
ಧನುಷಾ ಪರಮಾಸ್ತ್ರಜ್ಞಃ ಸರ್ವಧರ್ಮವಿದುತ್ತಮಃ ॥ ೧೬ ॥

ತೇನ ಬಾಣೇನ ಸಂಬದ್ಧಃ ಖೇ ಬಭ್ರಾಮ ಪತಂಗವತ್ ।
ಸರಥಸ್ಸಹಯಸ್ಸಂಖ್ಯೇ ಸಧ್ವಜಶ್ಚ ಸಸಾರಥಿಃ ॥ ೧೭ ॥

ಭ್ರಾಂತಸ್ಸ ರಥವರ್ಯಸ್ತು ನಭಸಿ ತ್ವರಯಾನ್ವಿತಃ ।
ಯಾವತ್ಸ್ಥಿತಿಂ ನ ಲಭತೇ ತಾವನ್ಮುಕ್ತೋ ಪರಶ್ಶರಃ ॥ ೧೮ ॥

ಪುನಶ್ಚ ಪರಿಬಭ್ರಾಮ ರಥಸ್ಸೂತಸಮನ್ವಿತಃ ।
ತತ್ಕರ್ಮ ವೀಕ್ಷ್ಯ ಪುತ್ರಸ್ಯ ರಾಜ್ಞೋ ವಿಸ್ಮಯಮಾಪ ಸಃ ॥ ೧೯ ॥

ಕಥಂಚಿತ್ಸ್ಥಿತಿಮಪ್ರಾಪ ಪುಷ್ಕಲಃ ಪರವೀರಹಾ ।
ರಥಂ ಜಘಾನ ಬಾಣೈಶ್ಚ ಸಸೂತಹಯಮಸ್ಯ ಚ ॥ ೨೦ ॥

ಸ ಭಗ್ನಸ್ಸ್ಯಂದನೋ ವೀರಃ ಪುನರನ್ಯಂ ಸಮಾಶ್ರಿತಃ ।
ಸೋಽಪಿ ಭಗ್ನಶ್ಶರೈರಾಶು ಪುಷ್ಕಲೇನ ರಣಾಂಗಣೇ ॥ ೨೧ ॥

---

೧೬. ಧನುಸ್ಸಿನ ಮರ್ಮವನ್ನು ಬಲ್ಲ ಆ ಚಿತ್ರಾಂಗನು ಹೀಗೆಂದು ಹೇಳಿ ದಾರುಣವಾದ ಒಂದು ಅಸ್ತ್ರವನ್ನು ಬಿಟ್ಟನು.

೧೭. ಆ ಬಾಣವು ಆ ರಥವನ್ನು ಕುದುರೆ, ಧ್ವಜ, ಸಾರಥಿಗಳೊಡನೆ ಅಂತರಿಕ್ಷದಲ್ಲಿ ಹಕ್ಕಿಯ ಹಾಗೆ ಸುತ್ತಿಸುತ್ತಿತ್ತು.

೧೮. ಸುತ್ತುತ್ತಿರುವ ಆ ರಥವು ನಿಲ್ಲುವಷ್ಟರಲ್ಲಿಯೇ ಮತ್ತೊಂದು ಬಾಣವನ್ನು ಬಿಟ್ಟನು.

೧೯. ರಥವು ಸೂತನೊಡನೆ ಮತ್ತೆಯೂ ತಿರುಗಿತು. ಇದನ್ನು ನೋಡಿ ಪುಷ್ಕಲನು ಆಶ್ಚರ್ಯಪಟ್ಟನು.

೨೦. ಪುಷ್ಕಲನು ಹೇಗೋ ನೆಲೆಗೆ ನಿಂತು ರಥಸೂತರನ್ನು ಬಾಣಗಳಿಂದ ಹೊಡೆದನು.

೨೧. ಅವನ ರಥವು ಮುರಿದುಹೋಗಲು, ಮತ್ತೊಂದು ರಥವನ್ನು ಹತ್ತಿ ಬರಲು ಅದು ನಾಶವಾಗುವಂತೆ ಹೊಡೆದನು.

ಪುನರನ್ಯಂ ಸಮಾಸ್ಥಾಯ ಯಾವದಾಯಾತಿ ಸಮ್ಮುಖಂ ।
ತಾವದ್ಬಭಂಜ ನಿಶಿತೈಸ್ಸಾಯುಕೈಸ್ತದ್ರಥಂ ಪುನಃ ॥ ೨೨ ॥

ಏವಂ ದಶ ರಥಾ ಭಗ್ನಾ ನೃಪತೇರಾತ್ಮಜಸ್ಯ ಹಿ ।
ಪುಷ್ಕಲೇನ ತು ವೀರೇಣ ಮಹಾಸಂಯುಗಶಾಲಿನಾ ॥ ೨೩ ॥

ತದಾ ಚಿತ್ರಾಂಗಕಸ್ಸಂಖ್ಯೇ ರಥೇ ಸ್ಥಿತ್ವಾ ವಿಚಿತ್ರಿತೇ ।
ಆಜಗಾಮ ಹ ವೇಗೇನ ಯೋದ್ಧುಂ ಪುಷ್ಕಲಕೇನ ತು ॥ ೨೪ ॥

ಪುಷ್ಕಲಂ ಪಂಚಭಿರ್ಬಾಣೈಸ್ತಾಡಯಾಮಾಸ ಸಂಯುಗೇ ।
ತೈರ್ಬಾಣೈರ್ನಿಹತೋಽತ್ಯಂತಂ ವಿವ್ಯಥೇ ಭರತಾತ್ಮಜಃ ॥ ೨೫ ॥

ಸ ಕ್ರುದ್ಧಶ್ಚಾಪಮುದ್ಯಮ್ಯ ಬಾಣಾನ್ ದಶ ಶಿತಾನ್ ಮಹಾನ್ ।
ಮುಮೋಚ ಹೃದಯೇ ತಸ್ಯ ಸ್ವರ್ಣಪುಂಖಸುಶೋಭಿತಾನ್ ॥ ೨೬ ॥

ತೇ ಬಾಣಾಃ ಸಪುರೇತಸ್ಯ ರುಧಿರಂ ಬಹುದಾರುಣಾಃ ।
ಪೀತ್ವಾ ಪೇತುಃ ಕ್ಷಿತೌ ಕೂಟಸಾಕ್ಷಿಣಃ ಪೂರ್ವಜಾ ಇವ ॥ ೨೭ ॥

---

೨೨. ಇನ್ನೊಂದು ರಥವನ್ನು ಹತ್ತಿ ಬರುವಷ್ಟರಲ್ಲಿಯೇ ಆ ರಥವನ್ನೂ ಮುರಿದನು.

೨೩-೨೪. ಹೀಗೆ ಹತ್ತು ರಥಗಳನ್ನು ನಾಶಮಾಡಿದನು. ಅನಂತರ ಮತ್ತೊಂದು ಉತ್ತಮ ರಥವನ್ನು ಹತ್ತಿ ಬಂದನು.

೨೫. ಪುಷ್ಕಲನನ್ನು ಐದು ಬಾಣಗಳಿಂದ ಹೊಡೆಯಲು ಅವನು ವ್ಯಥೆ ಪಟ್ಟನು.

೨೬. ಆ ಪುಷ್ಕಲನು ಕೋಪಗೊಂಡು ಹರಿತವಾದ ಹತ್ತು ಬಾಣಗಳನ್ನು ಚಿತ್ರಾಂಗನಿಗೆ ಬಿಟ್ಟನು.

೨೭. ಆ ಬಾಣಗಳು ಚಿತ್ರಾಂಗನ ರಕ್ತವನ್ನು ಕುಡಿದು ಸುಳ್ಳುಸಾಕ್ಷಿ ಹೇಳುವವರ ಪೂರ್ವಿಕರು ಕೆಳಗೆ ಬೀಳುವಂತೆ ಬಿದ್ದವು.

ತದಾ ಚಿತ್ರಾಂಗಕಃ ಕ್ರುದ್ಧೋ ಭಲ್ಲಾನ್ ಪಂಚ ಸಮಾದದೇ ।
ಮುಮೋಚ ಭಾಲೇ ಪುತ್ರಸ್ಯ ಭರತಸ್ಯ ಮಹೌಜಸಃ ॥ ೨೮ ॥

ತೈರ್ಭಲ್ಲೈರಾಹತಃ ಕ್ರುದ್ಧಃ ಶರಾಸನವರೇ ಶರಂ ।
ದಧತ್ಪ್ರತಿಜ್ಞಾಮಕರೋಚ್ಚಿತ್ರಾಂಗನಿಧನಂ ಪ್ರತಿ ॥ ೨೯ ॥

ಶೃಣು ವೀರ ಮಮ ಕ್ಷಿಪ್ರಂ ಪ್ರತಿಜ್ಞಾಂ ತ್ವದ್ವಧಾಶ್ರಿತಾಂ ।
ತಜ್ಜ್ಞಾತ್ವಾ ಸಾವಧಾನೇನ ಯೋದ್ಧವ್ಯಂ ಚ ತ್ವಯಾತ್ರ ಹಿ ॥ ೩೦ ॥

ಬಾಣೇನಾನೇನ ಚೇತ್ತ್ವಾಂ ವೈ ನ ಕುರ್ಯಾಂ ಪ್ರಾಣವರ್ಜಿತಂ ।
ಸತೀಂ ಸಂದೂಷ್ಯ ವನಿತಾಂ ಶೀಲಾಚಾರಸುಶೋಭಿತಾಂ ॥ ೩೧ ॥

ಲೋಕೋ ಯಃ ಪ್ರಾಪ್ಯತೇ ಲೋಕೈರ್ಯಮಸ್ಯ ವಶವರ್ತಿಭಿಃ ।
ಸ ಲೋಕೋ ಮಮ ವೈ ಭೂಯಾತ್ಸತ್ಯಂ ಮಮ ಪ್ರತಿಶ್ರುತಂ ॥ ೩೨ ॥

ಇತಿ ಶ್ರೇಷ್ಠಂ ವಚಶ್ಶ್ರುತ್ವಾ ಜಹಾಸ ಪರವೀರಹಾ ।
ಉವಾಚ ಮತಿಮಾನ್ವೀರಃ ಪುಷ್ಕಲಂ ವಚನಂ ಶುಭಂ ॥ ೩೩ ॥

---

೨೮. ಆಗ ಚಿತ್ರಾಂಗಕನು ಕೋಪಗೊಂಡು ಐದು ಭಲ್ಲೆಗಳನ್ನು ಅವನ ಹಣೆಗೆ ಗುರಿಕಟ್ಟಿ ಹೊಡೆದನು.

೨೯. ಆ ಭಲ್ಲೆಗಳಿಂದ ಏಟು ಬೀಳಲು ಕೋಪಗೊಂಡು ಬಿಲ್ಲಿನಲ್ಲಿ ಶರವನ್ನು ಸೇರಿಸುತ್ತಾ ಚಿತ್ರಾಂಗಕನನ್ನು ಕೊಲ್ಲುವುದಕ್ಕೆ ಪ್ರತಿಜ್ಞೆಮಾಡಿದನು.

೩೦. ಎಲೈ! ವೀರನೇ, ನನ್ನ ಪ್ರತಿಜ್ಞೆಯನ್ನು ಕೇಳು ನಿನ್ನನ್ನು ಕೊಲ್ಲುತ್ತೇನೆ. ಅದನ್ನು ತಿಳಿದು ನೀನು ಯುದ್ಧಮಾಡು.

೩೧-೩೨. ನಿನ್ನನ್ನು ನಾನು ಈ ಬಾಣದಿಂದ ಕೊಲ್ಲದಿದ್ದರೆ ಕುಲಶೀಲ ಆಚಾರವತಿಯಾದ ಪತಿವ್ರತೆಯನ್ನು ದೂಷಿಸಿ, ಜನವು ಯಮನಿಂದ ಯಾವ ನರಕವನ್ನು ಹೊಂದುತ್ತದೆಯೋ ಆ ನರಕವು ನನಗೆ ಬರಲಿ. ಈ ಪ್ರತಿಜ್ಞೆಯು ಸತ್ಯವು.

೩೩. ಈ ಪ್ರತಿಜ್ಞೆಯನ್ನು ಕೇಳಿ ಚಿತ್ರಾಂಗಕನು ನಕ್ಕು ಪುಷ್ಕಲನನ್ನು ಕುರಿತು ಇಂತೆಂದನು.

ಮೃತ್ಯುರ್ನೈವ ಪ್ರಾಣಿನಾಂ ಭಾವ್ಯಃ ಸರ್ವತ್ರೈವ ಚ ಸರ್ವದಾ ।
ತಸ್ಮಾನ್ಮೇ ನಿಧನೇ ದುಃಖಂ ನಾಸ್ತಿ ಶೂರಶಿರೋಮಣೇ ॥ ೩೪ ॥

ಪ್ರತಿಜ್ಞಾ ಯಾ ಕೃತಾ ವೀರ ತ್ವಯಾ ವೀರೇಣ ಶೋಭಿನಾ ।
ಸಾ ಸತ್ಯೈವ ಪುನರ್ಮೇಽದ್ಯ ಶ್ರೂಯತಾಂ ವ್ಯಾಹೃತಂ ಮಹತ್ ॥ ೩೫ ॥

ತವ ಬಾಣಂ ವಧೋದ್ಯುಕ್ತಂ ಮಮ ನ ಛೇದ್ಮಿ ಚೇದಹಂ ।
ತದಾ ಪ್ರತಿಜ್ಞಾಂ ಶೃಣು ಮೇ ಸರ್ವವೀರಾಭಿಮಾನಿನಃ ॥ ೩೬ ॥

ತೀರ್ಥಂ ಜಿಗಮಿಷೋರ್ಯೋ ವೈ ಕುರ್ಯಾತ್ಸ್ವಾಂತವಿಖಂಡನಂ ।
ಏಕಾದಶೀವ್ರತಾದನ್ಯಜ್ಜಾನಾತಿ ವ್ರತಮುಚ್ಚಕೈಃ ॥ ೩೭ ॥

ತಸ್ಯ ಪಾಪಂ ಮಮೈವಾಸ್ತು ಪ್ರತಿಜ್ಞಾಪರಿಘಾತಿನಃ ।
ಇತಿವಾಕ್ಯಮುದೀರ್ಯೈವ ತೂಷ್ಣೀಂ ಭೂತೋ ಧನುರ್ದಧೇ ॥ ೩೮ ॥

ತದಾ ತೇನ ನಿಷಂಗಾತ್ಸ್ವಾದುದ್ಧೃತ್ಯ ಸಾಯಕಂ ವರಂ ।
ಕಥಿತಂ ತತ್ರ ವಿಶದಂ ವಾಕ್ಯಂ ಶತ್ರುವಧಾವಹಂ ॥ ೩೯ ॥

---

೩೪. ಎಲೈ! ಶೂರನೇ, ಪ್ರಾಣಿಗಳಿಗೆ ಮರಣವು ಎಲ್ಲಾ ಕಾಲದಲ್ಲೂ ಎಲ್ಲಾ ಜಾಗದಲ್ಲೂ ಬಿಟ್ಟಿದುದಲ್ಲ. ಆದ್ದರಿಂದ ಸಾವಿನಲ್ಲಿ ನನಗೆ ದುಃಖವಿಲ್ಲ.

೩೫-೩೬. ಎಲೈ! ವೀರನೇ, ನೀನು ಮಾಡಿದ ಪ್ರತಿಜ್ಞೆಯು ಸತ್ಯವಾದುದೇ. ನಾನು ಹೇಳುವುದನ್ನು ಕೇಳು. ಕೊಲ್ಲುವುದಕ್ಕೆ ಬರುತ್ತಿರುವ ನಿನ್ನ ಬಾಣವನ್ನು ನಾನು ಕತ್ತರಿಸದಿದ್ದರೆ ಆಗ ನನ್ನ ವೀರಪ್ರತಿಜ್ಞೆಯನ್ನು ಕೇಳು.

೩೭-೩೮. ತೀರ್ಥಯಾತ್ರೆಗೆ ಹೋಗುವವನ ಮನಸ್ಸನ್ನು ಖಂಡಿಸುವ ಮತ್ತು ಏಕಾದಶೀ ವ್ರತಕ್ಕಿಂತಲೂ ಹೆಚ್ಚಿನ ವ್ರತ ಮತ್ತೊಂದಿದೆ ಎಂದು ತಿಳಿದಿರುವವನ ಪಾಪವು, ನಾನು ನಿನ್ನ ಬಾಣವನ್ನು ಕತ್ತರಿಸದಿದ್ದರೆ ಬರಲಿ. ಹೀಗೆಂದು ಹೇಳಿ ಧನುಸ್ಸನ್ನು ತೆಗೆದುಕೊಂಡನು.

೩೯. ಆಗ ತನ್ನ ಬತ್ತಳಿಕೆಯಿಂದ ಬಾಣವನ್ನು ತೆಗೆದು ಪುಷ್ಕಲನು ವಿಶದವಾಗಿ ಇಂತೆಂದನು.

॥ ಪುಷ್ಕಲ ಉವಾಚ ॥

ಯದಿ ರಾಮಾಂಘ್ರಿಯುಗಳಂ ನಿಷ್ಕಾಪಟ್ಯೇನ ಚೇತಸಾ ।
ಉಪಾಸಿತಂ ಮಯಾ ತರ್ಹಿ ಮಮ ವಾಕ್ಯಂ ಭವತ್ವೃತಂ ॥ ೪೦ ॥

ಯದಿ ಸ್ವಮಹಿಳಾಂ ಭುಕ್ತ್ವಾ ನಾನ್ಯಾಂ ಜಾನಾಮಿ ಚೇತಸಾ ।
ತೇನ ಸತ್ಯೇನ ಮೇ ವಾಕ್ಯಂ ಸತ್ಯಂ ಭವತು ಸಂಗರೇ ॥ ೪೧ ॥

ಇತಿ ವಾಕ್ಯಮುದೀರ್ಯಾಶು ಬಾಣಂ ಧನುಷಿ ಸಂಧಿತಂ ।
ಕಾಲಾನಲೋಪಮಂ ವೀರಶಿರಚ್ಛೇದನಮಾಕ್ಷಿಪತ್ ॥ ೪೨ ॥

ತಂ ಬಾಣಂ ಮುಕ್ತಮಾಲೋಕ್ಯ ಸ ತು ರಾಜಸುತೋ ಬಲೀ ।
ಬಾಣಂ ಶರಾಸನೇಽಧತ್ತ ತೀಕ್ಷ್ಣಂ ಕಾಲಾನಲೋಪಮಂ ॥ ೪೩ ॥

ತೇನ ಬಾಣೇನ ಸಂಛಿನ್ನೋ ಬಾಣಸ್ತ್ವವಧ ಉದ್ಯತಃ ।
ಹಾಹಾಕಾರೋ ಮಹಾನಾಸೀಚ್ಛಿನ್ನೇ ತಸ್ಮಿನ್ನರೇ ತದಾ ॥ ೪೪ ॥

ಪರಾರ್ಧಂ ಪತಿತಂ ಭೂಮೌ ಪೂರ್ವಾರ್ಧಂ ಫಲಸಂಯುತಂ ।
ಶಿರೋಧರಾಂ ಚಕರ್ತಾಶು ಪದ್ಮನಾಳಮಿವ ಕ್ಷಣಾತ್ ॥ ೪೫ ॥

---

೪೦. ಪುಷ್ಕಲನು ಹೇಳಿದನು:— ರಾಮನ ಪಾದಗಳನ್ನು ಕಪಟವಿಲ್ಲದೆ ಸೇವಿಸಿದ್ದರೆ ಆಗ ನನ್ನ ಮಾತು ನಿಜವಾಗಲಿ.

೪೧. ನಾನು ನನ್ನ ಹೆಂಡತಿಯನ್ನು ಅನುಭವಿಸುತ್ತಾ ಬೇರೆ ಸ್ತ್ರೀಯನ್ನು ಮನಸ್ಸಿನಿಂದಲೂ ಸ್ಮರಿಸದಿದ್ದರೆ ನನ್ನ ಮಾತು ನಿಜವಾಗಲಿ.

೪೨. ಹೀಗೆಂದು ಹೇಳಿ ಪ್ರಳಯಾಗ್ನಿಯಂತೆ ಇದ್ದ ತಲೆಯನ್ನು ಕತ್ತರಿಸುವ ಬಾಣವನ್ನು ಧನುಸ್ಸಿಗೆ ಹೂಡಿದನು.

೪೩-೪೪. ಆ ಬಾಣವನ್ನು ಬಿಟ್ಟುದನ್ನು ನೋಡಿ ಚಿತ್ರಾಂಗಕನು ಉತ್ತಮವಾದ ಬಾಣವನ್ನು ಹೂಡಿ ಅದನ್ನು ಕತ್ತರಿಸಿದನು. ಆಗ ಹಾಹಾಕಾರವು ಉಂಟಾಯಿತು.

೪೫. ಆ ಬಾಣದ ಹಿಂದಿನ ಭಾಗವು ಕೆಳಗೆ ಬಿತ್ತು. ಚೂಪಿದ್ದ ಮುಂದಿನ ಭಾಗವು ಚಿತ್ರಾಂಗಕನ ತಲೆಯನ್ನು ಪದ್ಮವನ್ನು ನಾಳದಿಂದ ಕತ್ತರಿಸುವಂತೆ ಕತ್ತರಿಸಿತು.

ತದಾ ಭೂಮೌ ಪತಂತಂ ತು ದದೃಶುಸ್ಸರ್ವಸೈನಿಕಾಃ ।
ಹಾಹಾಕೃತ್ವಾ ಭೃಶಂ ಸರ್ವೇ ಪಲಾಯನಪರಾ ಗತಾಃ ॥ ೪೬ ॥

ಪೃಥಿವ್ಯಾಂ ಮಸ್ತಕಂ ಶ್ರೇಷ್ಠಂ ಸಕಿರೀಟಂ ಸಕುಂಡಲಂ ।
ಶುಶುಭೇತೀSವ ಪತಿತಂ ಚಂದ್ರಬಿಂಬಂ ದಿವೋ ಯಥಾ ॥ ೪೭ ॥

ತಂ ವೀಕ್ಷ್ಯ ಪತಿತಂ ವೀರಃ ಪುಷ್ಕಲೋ ಭರತಾತ್ಮಜಃ ।
ವ್ಯಗಾಹತ ವ್ಯೂಹಮಿಮಂ ಸರ್ವವೀರೈಕಶೋಭಿತಂ ॥ ೪೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಚಿತ್ರಾಂಗವಧನಿರೂಪಣಂ
ನಾಮ ಸಪ್ತವಿಂಶೋSಧ್ಯಾಯಃ



---

೪೬. ಆಗ ಆ ಚಿತ್ರಾಂಗಕನ ಸೈನಿಕರು ತಲೆಯು ಭೂಮಿಯಲ್ಲಿ ಬಿದ್ದುದನ್ನು ಕಂಡು ಹಾಹಾ ಎನ್ನುತ್ತಾ ಓಡುತ್ತಿದ್ದರು.

೪೭. ಭೂಮಿಯಲ್ಲಿ ಕಿರೀಟಕುಂಡಲಗಳಿಂದ ಸಹಿತವಾಗಿ ಬಿದ್ದಿದ್ದ ಆ ತಲೆಯು ಅಂತರಿಕ್ಷದಲ್ಲಿ ಚಂದ್ರನು ಪ್ರಕಾಶಿಸುವಂತೆ ಪ್ರಕಾಶಿಸುತ್ತಿತ್ತು.

೪೮. ಭರತಾತ್ಮಜನು ಅವನನ್ನು ಕೊಂದು ಆ ವ್ಯೂಹದ ಒಳಭಾಗಕ್ಕೆ ಪ್ರವೇಶಿಸಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದವಲ್ಲಿ,
ರಾಮಾಶ್ವಮೇಧದಲ್ಲಿ ಚಿತ್ರಾಂಗವಧೆಯೆಂಬ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅಷ್ಟಾವಿಂಶೋಽಧ್ಯಾಯಃ

---

॥ ಶೇಷ ಉವಾಚ ॥

ಅಥ ಪುತ್ರಂ ಸಮಾಲೋಕ್ಯ ಪತಿತಂ ವ್ಯಸುಮುದ್ಧತಂ ।
ವಿಲಲಾಪ ಭೃಶಂ ರಾಜಾ ಸುತದುಃಖೇನ ದುಃಖಿತಃ ॥ ೧ ॥

ಮೂರ್ಧ್ನಿ ಸಂತಾಡಯಾಮಾಸ ಪಾಣಿಭ್ಯಾಮತಿದುಃಖಿತಃ ।
ಕಂಪಮಾನೋ ಭೃಶಂ ಚಾಶ್ರೂಣ್ಯಮುಂಚನ್ನಯನಾಬ್ಜಯೋಃ ॥ ೨ ॥

ಗೃಹೀತ್ವಾ ಪತಿತಂ ವಕ್ತ್ರಂ ಚಂದ್ರಬಿಂಬಮನೋರಮಂ ।
ಪುಷ್ಕಲೇಷುಕ್ಷತಾಸೃಗ್ಭಿಶ್ಛನ್ನಂ ಕುಂಡಲಶೋಭಿತಂ ॥ ೩ ॥

ಕುಟಿಲಭ್ರೂಯುಗಶ್ರೇಷ್ಠಂ ಸಂದಷ್ಟಾಧರಪಲ್ಲವಂ ।
ಸಂಚುಂಬ್ಯ ಮುಖಪದ್ಮೇನ ವಿಲಪನ್ನಿದಮಬ್ರವೀತ್ ॥ ೪ ॥

---

## ಇಪ್ಪತ್ತೆಂಟನೆಯ ಅಧ್ಯಾಯವು

೧. ಶೇಷನು ಹೇಳಿದನು:—ಮಗನು ಸತ್ತುದನ್ನು ನೋಡಿ ಸುಬಾಹುವು ಪುತ್ರಶೋಕದಿಂದ ಬಹುವಾಗಿ ದುಃಖಿಸಿದನು.

೨. ಅತಿ ದುಃಖದಿಂದ ತಲೆಯ ಮೇಲೆ ಕೈಗಳಿಂದ ಚಚ್ಚಿಕೊಂಡನು. ನಡುಗುತ್ತ ಕಣ್ಣಿನಿಂದ ನೀರನ್ನು ಸುರಿಸಿದನು.

೩-೪. ಚಂದ್ರಬಿಂಬದಂತಿರುವ, ಪುಷ್ಕಲನ ಬಾಣದಿಂದ ಬಿದ್ದೇಟಿನಿಂದ ರಕ್ತವಾಗಿರುವ, ಹುಬ್ಬುಗಳನ್ನು ಗಂಟುಹಾಕಿಕೊಂಡಿರುವ, ಹಲ್ಲುಮುಡಿ ಕಚ್ಚಿರುವ, ಆ ಮಗನ ತಲೆಯನ್ನು ತೆಗೆದುಕೊಂಡು ಮುತ್ತುಕೊಡುತ್ತ ಇಂತೆಂದನು.

ಹಾ ಪುತ್ರ ವೀರ ಕಥಮುತ್ಸುಕಚೇತಸಂ ಮಾಂ
ಕಿಂ ನೇಕ್ಷಸೇ ವಿಶದನೇತ್ರಯುಗೇನ ಶೂರ ।
ಕಿಂ ಮದ್ವಿನೋದಕತಯಾ ರಹಿತಸ್ತ್ವಮೇವ
ರೋಷೋದಧಿಪ್ಲುತಮನಾಃ ಕಿಲ ಲಕ್ಷ್ಯಸೇ ಚ ॥ ೫ ॥

ವದ ಪುತ್ರ ಕಥಂ ಮಾಂ ತ್ವಂ ಪ್ರಬ್ರೂಷೇ ನ ಹಸನ್ಪುನಃ ।
ಅಮೃತೈರ್ಮಧುರಾಸ್ವಾದೈರ್ವಿನೋದಯಸಿ ಪುತ್ರಕ ॥ ೬ ॥

ಶತ್ರುಘ್ನಾಶ್ವಂ ಗೃಹಾಣ ತ್ವಂ ಸಿತಚಾಮರಶೋಭಿತಂ ।
ಸುವರ್ಣಪತ್ರಶೋಭಾಢ್ಯಂ ತ್ಯಕ್ತ್ವಾ ನಿದ್ರಾಂ ಮಹಾಮತೇ ॥ ೭ ॥

ಏಷ ಪ್ರತಾಪವಿಶದಃ ಪ್ರತಾಪಾಗ್ರ್ಯಃ ಪರಂತಪಃ ।
ಧನುರ್ಬಿಭ್ರತ್ಪುರೋ ಭಾತಿ ಪುಷ್ಕಲಃ ಪರವೀರಹಾ ॥ ೮ ॥

ಏನಂ ವಾರಯ ಸತ್ತೀಕ್ಷ್ಣೈರ್ಬಾಣೈಃ ಕೋದಂಡನಿರ್ಗತೈಃ ।
ಕಥಂ ತ್ವಂ ರಣಮಧ್ಯೇ ವೈ ಶೇಷೇ ವೀರ ವಿಮೋಹಿತಃ ॥ ೯ ॥

---

೫. ಅಯ್ಯಾ! ಮಗನೇ, ದುಃಖಪಡುತ್ತಿರುವ ನನ್ನನ್ನು ಕಣ್ಣುಬಿಟ್ಟು, ನೋಡದೆ ಇರುವೆಯಲ್ಲ! ನಾನೇನಾದರೂ ವಿನೋದವಾಗಿ ಮಾತನಾಡುತ್ತಿಲ್ಲವೆಂದು ರೋಷದಿಂದ ಇರುವಂತೆ ಕಾಣುತ್ತಿರುವೆಯಲ್ಲ!

೬. ಮಗನೇ! ಏತಕ್ಕೋಸ್ಕರ ನಗುತ್ತಾ ಮಾತಾಡುತ್ತ ಇಲ್ಲ? ಅಮೃತದಂತೆ ಮಧುರವಾದ ಮಾತುಗಳಿಂದ ವಿನೋದವನ್ನೇಕೆ ಪಡಿಸುತ್ತಿಲ್ಲ? ಹೇಳು.

೭. ಶತ್ರುಘ್ನನ ಈ ಯಾಗದ ಕುದುರೆಯನ್ನು ತೆಗೆದುಕೋ! ಅದನ್ನು ಬಿಟ್ಟು ಏಕೆ ನಿದ್ದೆಮಾಡುತ್ತಿದ್ದೀಯೆ?

೮. ಪ್ರತಾಪಶಾಲಿಯಾದ ಪ್ರತಾಪಾಗ್ರ್ಯನು ಇಲ್ಲೇ ಇದ್ದಾನೆ. ಧನುಸ್ಸನ್ನು ಹಿಡಿದುಕೊಂಡು ಪುಷ್ಕಲನು ಇಲ್ಲೇ ಇರುವನಲ್ಲ!

೯. ಇವನನ್ನು ಕ್ರೂರವಾದ ಬಾಣಗಳಿಂದ ನಿವಾರಿಸು. ರಣಮಧ್ಯದಲ್ಲಿ ಮೂರ್ಛೆಯಿಂದ ಏಕೆ ಸುಮ್ಮನಿರುವೆ?

ಹಸ್ತಿನಃ ಪತ್ತಯಶ್ಚೈವ ರಥಾರೂಢಾ ಭಯಾರ್ದಿತಾಃ ।
ಶರಣಂ ತ್ವಾಂ ಸಮಾಯಾಂತಿ ತಾನೀಕ್ಷಸ್ವ ಮಹಾಮತೇ ॥ ೧೦ ॥

ಪುತ್ರ ತ್ವಯಾ ವಿನಾ ಸೋಢುಂ ಕಥಂ ಶಕ್ತೋ ರಣಾಂಗಣೇ ।
ಶತ್ರುಘ್ನಸಾಯಕಾಂಸ್ತೀಕ್ಷ್ಣಾಶ್ಚಂಡಕೋದಂಡನಿರ್ಗತಾನ್ ॥ ೧೧ ॥

ಅತೋ ಮಾಂ ತು ತ್ವಯಾ ಹೀನಂ ಕೋ ವಾ ಪಾಲಯಿತುಂ ಕ್ಷಮಃ ।
ಯದಿ ತ್ಯಕ್ಷಸಿ ನಿದ್ರಾಂ ತ್ವಂ ಜಯಾಯಾಹಂ ಕ್ಷಮಸ್ತದಾ ॥ ೧೨ ॥

ಇತ್ಥಂ ವಿಲಪ್ಯ ಸುಭೃಶಂ ತತಾಡ ಹೃದಯಂ ಸ್ವಕಂ ।
ಬಹುಶಃ ಪಾಣಿನಾ ರಾಜಾ ಪುತ್ರದುಃಖೇನ ದುಃಖಿತಃ ॥ ೧೩ ॥

ತದಾ ವಿಚಿತ್ರದಮನೌ ಸ್ವಸ್ವಸ್ಯಂದನಸಂಸ್ಥಿತೌ ।
ಪಿತುಶ್ಚರಣಯೋರ್ನತ್ವಾ ಊಚತುಃ ಸಮಯೋಚಿತಂ ॥ ೧೪ ॥

ರಾಜನ್ನಸ್ಮತ್ಸು ಜೀವತ್ಸು ಕಿಂ ದುಃಖಂ ಹೃದಿ ತೇಽನಘ ।
ವೀರಾಣಾಂ ಪ್ರಧನೇ ಮೃತ್ಯುರ್ವಾಂಛಿತೋ ಜಾಯತೇ ಮಹಾನ್ ॥ ೧೫ ॥

---

೧೦. ಆನೆಗಳು, ಕಾಲಾಳುಗಳು, ಕೂಡ ಭಯದಿಂದ ರಥಿಕನಾದ ನಿನ್ನನ್ನು ಶರಣುಹೊಂದಿವೆ. ಅವರನ್ನು ನೋಡು.

೧೧-೧೨. ಶತ್ರುಘ್ನನ ತೀಕ್ಷ್ಣವಾದ ಬಾಣಗಳನ್ನು ನೀನಲ್ಲದೆ ಇನ್ನಾರು ತಡೆಯಲು ಶಕ್ತರು? ಅವನ ಬಾಣದಿಂದ ನನ್ನನ್ನು ನೀನು ಕಾಪಾಡದಿದ್ದರೆ ಯಾರು ತಾನೆ ಕಾಪಾಡಿಯಾರು? ನೀನು ನಿದ್ದೆಯನ್ನು ಬಿಟ್ಟು ಎದ್ದರೆ ಆಗ ನಾನು ಜಯಿಸುತ್ತೇನೆ.

೧೩. ಹೀಗೆಂದು ಹೇಳುತ್ತ ಕೈಯಿಂದ ಎದೆಯನ್ನು ಬಡಿದುಕೊಂಡು ಅತ್ತನು.

೧೪. ಆಗ ವಿಚಿತ್ರನೂ ದಮನನೂ ತಮ್ಮ ತಮ್ಮ ರಥದಲ್ಲಿ ಕುಳಿತು ತಂದೆಯ ಪಾದಗಳಿಗೆ ನಮಸ್ಕರಿಸಿ ಸಮಯಕ್ಕೆ ಉಚಿತವಾದ ಮಾತನ್ನು ಆಡಿದರು.

೧೫. ಎಲೈ! ರಾಜನೇ, ನಾವು ಜೀವದಿಂದಿರುವಾಗ ನಿನಗೇಕೆ ದುಃಖವು? ವೀರರಿಗೆ ಯುದ್ಧದಲ್ಲಿ ಮೃತ್ಯುವೆಂಬುದು ವಿಹಿತವಾದುದು. ಅಪೇಕ್ಷಿತವಾದುದು

ಧನ್ಯೋಽಯಂ ಬತ ಚಿತ್ರಾಂಗೋ ಯೋ ವೀರಭುವಿ ಶೋಭತೇ ।
ಸಕಿರೀಟಸ್ತು ಸಂದಷ್ಟದಂತಚ್ಛದಯುಗಃ ಪ್ರಭುಃ ॥ ೧೬ ॥

ಕಥಯಾಶು ಕಿಮದ್ಯೈವ ಕುರ್ವಸ್ತೇ ಕಾರ್ಯಮೀಪ್ಸಿತಂ ।
ಶತ್ರುಘ್ನವಾಹಿನೀಂ ಸರ್ವಾಮಾವಾಂ ಹನ್ವಃ ಪ್ರಮಾಥಿನೀಂ ॥ ೧೭ ॥

ಅದ್ಯೈವ ಪುಷ್ಕಲಂ ಭ್ರಾತುರ್ವಧಕಾರಿಣಮಾಹವೇ ।
ಪಾತಯಾವೋ ರಥಾಚ್ಛಿತ್ವಾ ಶಿರೋಮುಕುಟಮಂಡಿತಂ ॥ ೧೮ ॥

ತ್ಯಜ ಶೋಕಂ ಸುದುಃಖಾರ್ತಃ ಕಥಂ ಭಾಸಿ ಮಹಾಮತೇ ।
ಆಜ್ಞಾಪಯಾವಾಂ ಮಾನಾರ್ಹ ಕುರು ಯುದ್ಧೇ ಮತಿಂ ತಥಾ ॥ ೧೯ ॥

ಇತಿ ವಾಕ್ಯಂ ಸಮಾಕರ್ಣ್ಯ ಪುತ್ರಯೋರ್ವೀರಮಾನಿನೋಃ ।
ಶೋಕಂ ತ್ಯಕ್ತ್ವಾ ಮಹಾರಾಜೋ ಯುದ್ಧಾಯ ಮತಿಮಾದಧಾತ್ ॥ ೨೦ ॥

ತಾವಪಿ ಪ್ರತಿಯೋದ್ಧಾರಂ ವಾಂಛಂತೌ ರಣದುರ್ಮದೌ ।
ಜಗ್ಮತುಃ ಕಟಕೇ ಶತ್ರೋರನಂತಭಟಪೂರಿತೇ ॥ ೨೧ ॥

---

೧೬. ಈ ಚಿತ್ರಾಂಗನೇ ಧನ್ಯನು. ವೀರರ ಭೂಮಿಯಲ್ಲಿ ಶೋಭಿಸುತ್ತಿರುವನು. ಕಿರೀಟಿಯಾಗಿ ಹಲ್ಲುಮುಡಿ ಕಚ್ಚಿಕೊಂಡು ವೀರನಾಗಿ ಮೃತನಾಗಿರುವನಲ್ಲ!

೧೭. ಹೇಳು! ಈಗಲೇ ನಿನಗೆ ಇಷ್ಟವಾದ ಯಾವ ಕೆಲಸವನ್ನು ಮಾಡಬೇಕು? ಶತ್ರುಘ್ನನ ಸೇನೆಯೆಲ್ಲವನ್ನೂ ಕೊಂದುಹಾಕುತ್ತೇವೆ.

೧೮. ನಮ್ಮ ಸಹೋದರನನ್ನು ಕೊಂದ ಪುಷ್ಕಲನನ್ನು ಈಗಲೇ ಯುದ್ಧದಲ್ಲಿ ರಥದಿಂದ ಕತ್ತರಿಸಿ ಎಸೆಯುತ್ತೇವೆ.

೧೯. ತಂದೆಯೇ! ದುಃಖವನ್ನು ಬಿಡು; ದುಃಖದಿಂದ ನೀನು ಪ್ರಕಾಶಿಸುವುದಿಲ್ಲ. ನಮಗೆ ಅಪ್ಪಣೆಮಾಡು. ಯುದ್ಧದಲ್ಲಿ ಮನಸ್ಸುಮಾಡು.

೨೦. ವೀರರಾದ ಮಕ್ಕಳ ಈ ಮಾತನ್ನು ಕೇಳಿ ದುಃಖವನ್ನು ಬಿಟ್ಟು ದೊರೆಯು ಯುದ್ಧದಲ್ಲಿ ಮನಸ್ಸು ಮಾಡಿದನು.

೨೧. ಆ ವೀರರಿಬ್ಬರೂ ಯೋಧರನ್ನು ಹುಡುಕುತ್ತ ಶತ್ರುವಿನ ಶಿಬಿರದಲ್ಲಿ ಹೊಕ್ಕರು.

ರಿಪುತಾಪೇನ ದಮನೋ ನೀಲರತ್ನೇನ ಚೇತರಃ ।
ಯುಯುಧಾತೇ ರಣೇ ವೀರೌ ಪ್ರಾವೃಷೀವ ಬಲಾಹಕೌ ॥ ೨೨ ॥

ರಾಜಾ ಕನಕಸನ್ನದ್ಧೇ ರಥೇ ಮಣಿವಿಚಿತ್ರಿತೇ ।
ರತ್ನಕೂಬರಶೋಭಾಢ್ಯೇ ತಿಷ್ಠಂಶ್ಚಾಪಧರೊ ಬಲೀ ॥ ೨೩ ॥

ಯಯೌ ಯೋದ್ಧುಂ ತು ಶತ್ರುಘ್ನಂ ವೀರಕೋಟಿಭಿರಾವೃತಂ ।
ತೃಣೀಕುರ್ವನ್ಮಹಾವೀರಾನ್ ಧನುರ್ವಿದ್ಯಾವಿಶಾರದಾನ್ ॥ ೨೪ ॥

ತಂ ಯೋದ್ಧುಮಾಗತಂ ದೃಷ್ಟ್ವಾ ಸುಬಾಹುಂ ರೋಷಪೂರಿತಂ ।
ಪುತ್ರನಾಶೇನ ಕುರ್ವಂತಂ ಸರ್ವಸೈನ್ಯವಧಾದಿಕಂ ॥ ೨೫ ॥

ಶತ್ರುಘ್ನಪಾರ್ಶ್ವಸಂಚಾರೀ ಹನೂಮಾಂಸ್ತಮುಪಾದ್ರವತ್ ।
ನಖಾಯುಧೋ ಮಹಾನಾದಂ ಕುರ್ವನ್ಮೇಘ ಇವಾಹವೇ ॥ ೨೬ ॥

ಸುಬಾಹುಸ್ತಂ ಹನೂಮಂತಮಾಗಚ್ಛಂತಂ ಮಹಾರವಂ ।
ಉವಾಚ ಪ್ರಹಸನ್ವಾಕ್ಯಂ ರೋಷಪೂರಿತಲೋಚನಃ ॥ ೨೭ ॥

---

೨೨. ದಮನನು ರಿಪುತಾಪನೊಡನೆಯೂ, ವಿಚಿತ್ರನು ನೀಲರತ್ನನೊಡನೆಯೂ ಮಳೆಗಾಲದ ಮೇಘಗಳಂತೆ ಎದುರಿಸಿದರು.

೨೩. ಸುಬಾಹುವು ಒಳ್ಳೆಯ ರಥದಲ್ಲಿ ಕುಳಿತು ಚಾಪವನ್ನು ಹಿಡಿದನು.

೨೪. ಆ ರಾಜನು ಮಿಕ್ಕ ವೀರರನ್ನೆಲ್ಲಾ ಹುಲ್ಲಿಗಿಂತ ಕಡೆಯಾಗಿ ಕಾಣುತ್ತ ಶತ್ರುಘ್ನನೊಡನೆ ಯುದ್ಧಕ್ಕೆ ಹೋದನು.

೨೫. ಪುತ್ರನಾಶದಿಂದ ಎಲ್ಲರನ್ನೂ ಕೊಲ್ಲುತ್ತ ರೋಷಪೂರಿತನಾಗಿ ಬರುತ್ತಿರುವ ಆ ಸುಬಾಹುವನ್ನು ಶತ್ರುಘ್ನನು ನೋಡಿದನು.

೨೬. ಶತ್ರುಘ್ನನ ಪಕ್ಕದಲ್ಲೇ ಇರುವ ಹನುಮಂತನು ಕೈಯೇ ಆಯುಧವುಳ್ಳವನಾಗಿ ಮಹಾನಾದ ಮಾಡುತ್ತ ಅವನನ್ನು ಎದುರಿಸಿದನು.

೨೭. ಸುಬಾಹುವು ನಾದಮಾಡಿಕೊಂಡು ಬರುತ್ತಿರುವ ಹನುಮಂತನನ್ನು ನೋಡಿ ಕೋಪದಿಂದ ನಗುತ್ತ ಇಂತೆಂದನು.

ಕ್ವ ಗತಃ ಪುಷ್ಕಲೋ ಹತ್ವಾ ಮತ್ಪುತ್ರಂ ರಣಮಂಡಲೇ ।
ಪಾತಯಾಮ್ಯದ್ಯ ತಸ್ಯಾಶು ಶಿರೋಜ್ವಲಿತಕುಂಡಲಂ ॥ ೨೮ ॥

ಕ್ವ ಶತ್ರುಘ್ನೋ ನಾಪಪಾಲಃ ಕ್ವ ಚ ರಾಮಃ ಕುತೋ ಭಟಾಃ ।
ಪ್ರಾಣಹಂತಾರಮಾಯಾಂತಂ ಪಶ್ಯಂತು ಪ್ರಧನೇ ತು ಮಾಂ ॥ ೨೯ ॥

ಇತಿ ತದ್ವಾಕ್ಯಮಾಕರ್ಣ್ಯ ಹನೂಮಾನ್ನಿಜಗಾದ ತಂ ।
ಶತ್ರುಘ್ನೋ ಲವಣಚ್ಛೇತ್ತಾ ವರ್ತತೇ ಸೈನ್ಯಪಾಲಕಃ ॥ ೩೦ ॥

ಸ ಕಥಂ ಪ್ರಧನೇ ಯುದ್ಧ್ಯೇತ್ಸೇವಕೇಽಗ್ರಸ್ಥಿತೇ ನೃಪ ।
ಮಾಂ ವಿಜಿತ್ಯ ರಣೇ ತಂ ಚ ತ್ವಂ ಗಂತಾಸಿ ನರರ್ಷಭ ॥ ೩೧ ॥

ಇತ್ಯುಕ್ತವಂತಂ ತರಸಾ ವಿವ್ಯಾಧ ದಶಸಾಯಕೈಃ ।
ಹೃದಿ ತಂ ವೀರಮತ್ಯುಗ್ರಂ ಪರ್ವತಾಗ್ರ್ಯಮಿವ ಸ್ಥಿತಂ ॥ ೩೨ ॥

ತೇ ಬಾಣಾ ಆಗತಾಸ್ತೇನ ಗೃಹೀತಾಃ ಕರಕುಡ್ಮಲೇ ।
ಚೂರ್ಣಯಾಮಾಸ ತಿಲಶಃ ಶಿತಾನ್ವೈರಿವಿದಾರಣಾನ್ ॥ ೩೩ ॥

---

೨೮. ಯುದ್ಧರಂಗದಲ್ಲಿ ನನ್ನ ಮಗನನ್ನು ಕೊಂದು ಪುಷ್ಕಲನು ಎಲ್ಲಿ ಹೋದನು? ಅವನ ತಲೆಯನ್ನು ಜ್ವಲಿತವಾದ ಕುಂಡಲಗಳೊಡನೆ ಕೆಡವುತ್ತೇನೆ.

೨೯. ಶತ್ರುಘ್ನನೆಲ್ಲಿ? ರಾಮನೆಲ್ಲಿ? ಭಟರೆಲ್ಲರೂ ಎಲ್ಲಿ? ಯುದ್ಧದಲ್ಲಿ ಪ್ರಾಣ ತೆಗೆಯಲು ಬಂದಿರುವ ನನ್ನನ್ನು ನೋಡಲಿ.

೩೦. ಹನುಮಂತನು ಈ ಮಾತನ್ನು ಕೇಳಿ ಲವಣಹಂತನಾದ ಶತ್ರುಘ್ನನು ಸೈನ್ಯವನ್ನು ಕಾಪಾಡುತ್ತಿದ್ದಾನೆ ಎಂದನು.

೩೧. ಸೇವಕನಾದ ನಾನು ಮುಂದಿರುತ್ತಿರಲು ಆ ಶತ್ರುಘ್ನನು ಹೇಗೆತಾನೆ ಯುದ್ಧಕ್ಕೆ ಬಂದಾನು? ನನ್ನನ್ನು ಗೆದ್ದು ನೀನು ಅವನಲ್ಲಿಗೆ ಹೋಗಬಹುದು.

೩೨. ಹೀಗೆ ಹೇಳಿದ ಆ ವೀರನಿಗೆ ಬಾಣದಿಂದ ಏಟು ಕೊಟ್ಟನು. ಹೊಡೆದರೂ ಆ ವೀರನು ಪರ್ವತದಂತೆ ಅಚಲನಾಗಿದ್ದನು.

೩೩. ಹಾಗೆ ಬಂದ ಬಾಣಗಳನ್ನು ಹನುಮನು ಕೈಗಳಿಂದ ಹಿಡಿದುಕೊಂಡು ಪುಡಿಪುಡಿಮಾಡಿದನು.

ಚೂರ್ಣಯಿತ್ವಾ ಶರಾಂಸ್ತಾಂಸ್ತಾನ್ನಿನದನ್ಘನಗರ್ಜಿತೈಃ ।
ಪುಚ್ಛೇನಾವೇಷ್ಟ್ಯ ವೇಗೇನ ರಥಂ ನಿನ್ಯೇ ಮಹಾಬಲಃ ॥ ೩೪ ॥

ತಂ ಯಾಂತಂ ನೃಪವರ್ಯೋಽಸಾವಾಕಾಶೇ ಸ್ಥಿತ ಏವ ಸಃ ।
ಲಾಂಗೂಲಂ ತಾಡಯಾಮಾಸ ಶಿತಾಗ್ರೈಸ್ಸಾಯಕೈರ್ಮುಹುಃ ॥ ೩೫ ॥

ಸ ತಾಡಿತಸ್ತು ಪುಚ್ಛಾಗ್ರೇ ಶರೈಸ್ಸನ್ನತಪರ್ವಭಿಃ ।
ಮುಮೋಚ ತದ್ರಥಂ ದಿವ್ಯಂ ಕನಕೇನ ವಿಚಿತ್ರಿತಂ ॥ ೩೬ ॥

ಸ ಮುಕ್ತಸ್ತೇನ ತರಸಾ ಶರೈಸ್ತ್ರೀಕ್ಷ್ಣೈರ್ಜಘಾನ ತಂ ।
ಹನೂಮಂತಂ ಕಪಿವರಂ ರೋಷಸಂಪೂರಿತೇಕ್ಷಣಃ ॥ ೩೭ ॥

ಹನೂಮಾನ್ಬಾಣಸಂಭಿನ್ನಸ್ಸರ್ವತ್ರ ರುಧಿರಾಪ್ಲುತಃ ।
ಮಹಾರೋಷಂ ಸಮಾಧತ್ತ ನೃಪೋಪರಿ ಕಪೀಶ್ವರಃ ॥ ೩೮ ॥

ಗೃಹೀತ್ವಾ ತಸ್ಯ ದಂಷ್ಟ್ರಾಭಿಃ ರಥಂ ಹಯಸಮನ್ವಿತಂ ।
ಚೂರ್ಣಯಾಮಾಸ ವೇಗೇನ ತದದ್ಭುತಮಿವಾಭವತ್ ॥ ೩೯ ॥

---

೩೪. ಮೇಘದಂತೆ ಗರ್ಜಿಸುತ್ತಾ ಆಯಾ ಬಾಣಗಳನ್ನು ಪುಡಿಮಾಡುತ್ತ ಅವನ ರಥವನ್ನು ಬಾಲದಿಂದ ಕಟ್ಟಿ ತೆಗೆದುಕೊಂಡು ಹೋದನು.

೩೫. ಹೋಗುತ್ತಿರುವ ಅವನನ್ನು ನೋಡಿ ಆ ರಾಜನು ಮೇಲಿದ್ದುಕೊಂಡೇ ಬಾಲವನ್ನು ಬಾಣಗಳಿಂದ ಹೊಡೆದನು.

೩೬. ಹಾಗೆ ಏಟು ಬೀಳುತ್ತಲೂ ಹನುಮಂತನು ಆ ರಥವನ್ನು ಬಿಟ್ಟು ಬಿಟ್ಟನು.

೩೭. ಹನುಮಂತನು ರಥವನ್ನು ಬಿಟ್ಟುಬಿಡುತ್ತಲೂ ರಾಜನು ಕೋಪದಿಂದ ಅವನಿಗೆ ಹೊಡೆದನು.

೩೮. ಹನುಮಂತನು ಏಟುತಿಂದು ರಕ್ತದಿಂದ ನೆನೆದುಹೋಗಿ ಆ ರಾಜನ ಮೇಲೆ ಕೋಪವನ್ನು ಹೊಂದಿದನು.

೩೯. ಹನುಮಂತನು ಅವನ ಕುದುರೆಯನ್ನೂ ರಥವನ್ನೂ ಹಲ್ಲುಗಳಿಂದ ಪುಡಿಪುಡಿಮಾಡಿದನು. ಅದು ಆಶ್ಚರ್ಯಕರವಾಗಿದ್ದಿತು.

ಸ್ವರಥಂ ಭಜ್ಯಮಾನಂ ತು ದೃಷ್ಟ್ವಾ ರಾಜಾ ತ್ವರನ್ ಬಲೀ ।
ಅನ್ಯಂ ರಥಂ ಸಮಾಸ್ಥಾಯ ಯುಯುಧೇ ತಂ ಮಹಾಬಲಂ ॥ ೪೦ ॥

ಪುಚ್ಛೇ ಮುಖೇಽಥ ಹೃದಯೇ ಬಾಹ್ವೋಶ್ಚರಣಯೋರ್ನೃಪಃ ।
ಜಘಾನ ಶರಸಂಧಾನಕೋವಿದಃ ಪರಮಾಸ್ತ್ರವಿತ್ ॥ ೪೧ ॥

ತದಾ ಕ್ರುದ್ಧಃ ಕಪಿವರಸ್ತಾಡಯಾಮಾಸ ವಕ್ಷಸಿ ।
ಪಾದೇನೋತ್ಪ್ಲುತ್ಯ ವೇಗೇನ ರಾಜ್ಞಸ್ಸುಭಟಶೋಭಿನಃ ॥ ೪೨ ॥

ಸ ಪದಾ ಪ್ರಹತೋ ಭೂಮೌ ಪಪಾತ ಕಿಲ ಮೂರ್ಛಿತಃ ।
ಮುಖಾದ್ವಮನ್ನಸೃಕ್ಕೋಷ್ಣಂ ಶ್ವಾಸಪೂರಪ್ರವೇಪಿತಃ ॥ ೪೩ ॥

ತದಾ ಪ್ರಕುಪಿತೋಽತ್ಯಂತಂ ಹನೂಮಾನ್ಪೃಥನಾಂಗಣೇ ।
ಅಶ್ವಾನ್ಗಜಾನ್ರಥಾನ್ವೀರಾಂಶ್ಚೂರ್ಣಯಾಮಾಸ ವೇಗತಃ ॥ ೪೪ ॥

ತದಾ ಸುಕೇತುಸ್ತದ್ಭ್ರಾತಾ ತಥಾ ಲಕ್ಷ್ಮೀನಿಧಿರ್ನೃಪಃ ।
ಉಭಾವಪಿ ಸುಸಂನದ್ಧೌ ಯುದ್ಧಾಯ ಸಮುಪಸ್ಥಿತೌ ॥ ೪೫ ॥

---

೪೦. ತನ್ನ ರಥವು ನಾಶವಾಗಲು ರಾಜನು ಬೇರೆ ರಥಕ್ಕೆ ಹತ್ತಿ ಯುದ್ಧ ಮಾಡಿದನು.

೪೧. ಶರಗಳಿಂದ ಆ ರಾಜನು ಬಾಲ, ಮುಖ, ಎದೆ, ಕೈಕಾಲುಗಳಿಗೆ ಹೊಡೆದನು.

೪೨. ಆಗ ಕಪಿಯು ಕೋಪಗೊಂಡು ನೆಗೆದು ರಾಜನ ಎದೆಗೆ ಒದ್ದನು.

೪೩. ಈರೀತಿ ಹೊಡೆಯಲು ನಿಟ್ಟುಸುರುಬಿಡುತ್ತ ರಕ್ತವನ್ನು ಕಕ್ಕುತ್ತ ರಾಜನು ಕೆಳಕ್ಕೆ ಬಿದ್ದು ಮೂರ್ಛೆ ಹೋದನು.

೪೪. ಆಗ ಕೋಪಗೊಂಡ ಹನುಮಂತನು ಯುದ್ಧದಲ್ಲಿ ಕುದುರೆ, ಆನೆ, ರಥ, ವೀರರನ್ನು ಬಹುವಾಗಿ ಕೊಂದನು.

೪೫. ಆಗ ಸುಕೇತುವೆಂಬ ಆ ರಾಜನ ತಮ್ಮನೂ ಲಕ್ಷ್ಮೀನಿಧಿಯೂ ಯುದ್ಧ ಮಾಡುತ್ತಿದ್ದರು.

ರಾಜಾನಂ ಮೂರ್ಛಿತಂ ದೃಷ್ಟ್ವಾ ಪ್ರಪಲಾಯ್ಯ ಗತಾ ನರಾಃ ।
ಇತಸ್ತತೋ ಬಾಣಸಂಘೈಃ ಕ್ಷತಾಃ ಪುಷ್ಕಲವರ್ಷಿತೈಃ ॥ ೪೬ ॥

ತದ್ಭಜ್ಯಮಾನಂ ಸ್ವಬಲಂ ವೀಕ್ಷ್ಯ ರಾಜಾತ್ಮಜೋ ಬಲೀ ।
ದಮನಃ ಸ್ತಂಭಯಾಮಾಸ ಸೇತುರ್ವಾರ್ಧಿಮಿವೋಚ್ಚಲಂ ॥ ೪೭ ॥

ತದಾ ತು ಮೂರ್ಛಿತೋ ರಾಜಾ ಸ್ವಪ್ನಮೇಕಂ ದದರ್ಶ ಹ ।
ರಣಮಧ್ಯೇ ಕಪಿವರಪ್ರಪದಾಘಾತಪೀಡಿತಃ ॥ ೪೮ ॥

ರಾಮಚಂದ್ರಸ್ತ್ವಯೋಧ್ಯಾಯಾಂ ಸರಯೂತೀರಮಂಡಲೇ ।
ಬ್ರಾಹ್ಮಣೈರ್ಯಾಜ್ಞಿಕಶ್ರೇಷ್ಠೈರ್ಬಹುಭಿಃ ಪರಿವಾರಿತಃ ॥ ೪೯ ॥

ತತ್ರ ಬ್ರಹ್ಮಾದಯೋ ದೇವಾಸ್ತತ್ರ ಬ್ರಹ್ಮಾಂಡಕೋಟಯಃ ।
ಕೃತಪ್ರಾಂಜಲಯಸ್ತಂ ವೈ ಸ್ತುವಂತಿ ಸ್ತುತಿಭಿರ್ಮುಹುಃ ॥ ೫೦ ॥

ರಾಮಂ ಶ್ಯಾಮಂ ಸುನಯನಂ ಮೃಗಶೃಂಗಪರಿಗ್ರಹಂ ।
ಗಾಯಂತಿ ನಾರದಾದ್ಯಾಶ್ಚ ವೀಣೋಲ್ಲಸಿತಪಾಣಯಃ ॥ ೫೧ ॥

---

೪೬. ರಾಜನು ಮೂರ್ಛೆ ಹೊಂದುತ್ತಲೂ ಪುಷ್ಕಲನ ಏಟನ್ನು ತಡೆಯಲಾರದೆ ಭಟರೆಲ್ಲರೂ ಅಲ್ಲಿಗೆ ಇಲ್ಲಿಗೆ ಓಡಿದರು.

೪೭. ಓಡುತ್ತಿರುವ ಸೈನಿಕರನ್ನು ನೋಡಿ ರಾಜಪುತ್ರನಾದ ದಮನನು ಹೋಗುತ್ತಿರುವ ನೀರಿಗೆ ಅಣೆಕಟ್ಟಿನಂತೆ ತಾನು ತಡೆದನು.

೪೮. ರಣಮಧ್ಯದಲ್ಲಿ ಹನುಮಂತನು ಸುಬಾಹುವನ್ನು ಕಾಲಿನಿಂದ ತುಳಿದಿರಲು ಮೂರ್ಛೆಯಲ್ಲೇ ಒಂದು ಸ್ವಪ್ನವನ್ನು ಕಂಡನು.

೪೯-೫೦. ರಾಮಚಂದ್ರನು ಅಯೋಧ್ಯೆಯಲ್ಲಿ ಸರಯೂತೀರದಲ್ಲಿ ಬ್ರಾಹ್ಮಣರೊಡನೆ ಕೂಡಿಕೊಂಡು ಇದ್ದನು. ಅಲ್ಲಿ ಬ್ರಹ್ಮಾದಿದೇವತೆಗಳು ಕೈಮುಗಿದುಕೊಂಡು ರಾಮನನ್ನು ಸ್ತೋತ್ರಮಾಡುತ್ತಿದ್ದರು.

೫೧. ಶ್ಯಾಮನಾದ ಮೃಗಶೃಂಗಧರನಾದ ರಾಮನನ್ನು ನಾರದಾದಿಗಳು ಗಾನಮಾಡುತ್ತಿದ್ದರು.

ನೃತ್ಯಂತ್ಯಪ್ಸರಸಸ್ತತ್ರ ಘೃತಾಚೀಮೇನಕಾದಯಃ ।
ವೇದಾ ಮೂರ್ತಿಧರಾ ಭೂತ್ವಾ ಹ್ಯುಪತಿಷ್ಠಂತಿ ರಾಘವಂ ॥ ೫೨ ॥

ಯಚ್ಚ ಕಿಂಚಿದ್ವಸ್ತುಜಾತಂ ಸರ್ವಶೋಭಾಸಮನ್ವಿತಂ ।
ತಸ್ಯ ದಾತಾರಮಖಿಲಂ ಭಕ್ತಾನಾಂ ಭೋಗದಾಯಕಂ ॥ ೫೩ ॥

ಇತ್ಯೇವಮಾದಿ ಸಂಪಶ್ಯನ್ ಜಾಗ್ರತ್ಸಂಜ್ಞಾಮವಾಪ್ಯ ಸಃ ।
ಬ್ರಹ್ಮಶಾಪಹತಜ್ಞಾನಃ ಕಿಂ ದೃಷ್ಟಮಿತಿ ವೈ ವದನ್ ॥ ೫೪ ॥

ಪದ್ಭ್ಯಾಂ ಗಂತುಂ ಪ್ರವೃತ್ತೋಽಸೌ ಶತ್ರುಘ್ನಚರಣಂ ಪ್ರತಿ ।
ಭೃತ್ಯಕೋಟಿಪರೀವಾರೋ ರಥಕೋಟಿಸಮಾವೃತಃ ॥ ೫೫ ॥

ಸುಕೇತುಂ ಸ ಸಮಾಹೂಯ ವಿಚಿತ್ರಂ ದಮನಂ ತಥಾ ।
ಯುದ್ಧಂ ಕರ್ತುಂ ಸಮುದ್ಯುಕ್ತಾನ್ ವಾರಯಾಮಾಸ ಧರ್ಮವಿತ್ ॥೫೬॥

ಉವಾಚ ತಾನ್ಮಹಾರಾಜೋ ಧರ್ಮಾತ್ಮಾ ಧರ್ಮಸಂಯುತಃ ।
ಭ್ರಾತಃ ಪುತ್ರಾ ಶೃಣುತ ಮೇ ವಾಕ್ಯಂ ಧರ್ಮಸಮನ್ವಿತಂ ॥ ೫೭ ॥

---

೫೨. ಮೇನಕೆ, ಘೃತಾಚೀ ಮುಂತಾದ ಅಪ್ಸರಸ್ತ್ರೀಯರು ಅಲ್ಲಿ ಕುಣಿಯುತ್ತಿದ್ದರು. ವೇದಗಳು ಮೂರ್ತಿಮತ್ತಾಗಿ ರಾಮನನ್ನು ಸ್ತೋತ್ರಮಾಡುತ್ತಿದ್ದವು.

೫೩. ಯಾವ ಯಾವ ಪದಾರ್ಥಗಳಿವೆಯೋ ಅದೆಲ್ಲವನ್ನೂ ಕೊಡತಕ್ಕ, ಸರ್ವಭೋಗದಿಂದಲೂ ಕೂಡಿರುವ ಆ ಶ್ರೀರಾಮನನ್ನು ನೋಡಿದನು.

೫೪. ಇವೇ ಮುಂತಾದವುಗಳನ್ನು ನೋಡುತ್ತ ಎಚ್ಚೆತ್ತು, ಬ್ರಹ್ಮಶಾಪದಿಂದ ಜ್ಞಾನವು ನಷ್ಟವಾಗಿ ಏನು ಮಾಡಿದೆ? ಎಂದು ಯೋಚಿಸುತ್ತಿದ್ದನು.

೫೫-೫೬. ಅನೇಕ ಭೃತ್ಯರಿಂದಲೂ ರಥಗಳಿಂದಲೂ ಕೂಡಿ ಶತ್ರುಘ್ನನ ಪಾದಗಳನ್ನು ಕುರಿತು ಹೋಗಲಿಚ್ಛಿಸುವವನಾಗಿ ಯುದ್ಧಮಾಡಲು ಸಿದ್ಧರಾಗಿರುವ ಸುಕೇತು, ದಮನ, ವಿಚಿತ್ರರನ್ನು ಕರೆದು ಬೇಡವೆಂದನು.

೫೭. ಎಲೈ! ತಮ್ಮನೇ, ಪುತ್ರರೇ, ನನ್ನ ಧರ್ಮದಿಂದ ಕೂಡಿದ ಈ ಮಾತನ್ನು ಕೇಳಿರೆಂದು ಹೇಳಿದನು.

ಮಾ ಯುದ್ಧಂ ಕುರುತ ಕ್ಷಿಪ್ರಮನಯಸ್ತು ಮಹಾನಭೂತ್ ।
ಯದ್ರಾಮಚಂದ್ರವಾಹಂ ತ್ವಮಗೃಹ್ಣಾ ದಮನೋರ್ಜಿತಂ　　॥ ೫೮ ॥

ಏಷ ರಾಮಃ ಪರಂ ಬ್ರಹ್ಮ ಕಾರ್ಯಕಾರಣತಃ ಪರಃ ।
ಚರಾಚರಜಗತ್ಸ್ವಾಮೀ ನ ಮಾನುಷವಪುರ್ಧರಃ　　॥ ೫೯ ॥

ಏತದ್ಧಿ ಬ್ರಹ್ಮವಿಜ್ಞಾನಮಧುನಾ ಜ್ಞಾತವಾನಹಂ ।
ಪುರಾಽಸಿತಾಂಗಶಾಪೇನ ಹೃತಜ್ಞಾನ ಧನೋಽನಘಾಃ　　॥ ೬೦ ॥

ಅಹಂ ಪುರಾ ತೀರ್ಥಯಾತ್ರಾಂ ಗತಸ್ತತ್ತ್ವವಿವಿತ್ಸಯಾ ।
ತತ್ರಾನೇಕೇ ಮಯಾ ದೃಷ್ಟಾ ಮುನಯೋ ಧರ್ಮವಿತ್ತಮಾಃ　　॥ ೬೧ ॥

ಅಸಿತಾಂಗಂ ಮುನಿಮಹಂ ಗತವಾನ್ ಜ್ಞಾತುಮಿಚ್ಛಯಾ ।
ತದಾ ಪ್ರೋವಾಚ ಮಾಂ ವಿಪ್ರಃ ಕೃಪಾಂ ಕೃತ್ವಾ ಮಮೋಪರಿ　　॥ ೬೨ ॥

ಯೋಽಸಾವಯೋಧ್ಯಾಧಿಪತಿಃ ಸ ಪರಬ್ರಹ್ಮಚಬ್ದಿತಃ ।
ತಸ್ಯ ಯಾ ಜಾನಕೀ ದೇವೀ ಸಾ ಸಾಕ್ಷಾಚ್ಚಿನ್ಮಯೀ ಸ್ಮೃತಾ　　॥ ೬೩ ॥

---

೫೮. ಯುದ್ಧಮಾಡಬೇಡಿ. ದಮನನು ರಾಮಚಂದ್ರನ ಯಜ್ಞಾಶ್ವವನ್ನು ಹಿಡಿದುದು ಅಪರಾಧವಾಯಿತು.

೫೯. ಈ ರಾಮನು ಪರಬ್ರಹ್ಮನು ಕಾರ್ಯಕಾರಣಕ್ಕಿಂತ ದೂರನು. ಚರಾಚರಗಳಿಗೆ ಸ್ವಾಮಿಯು. ಮನುಷ್ಯನಲ್ಲ.

೬೦. ಈ ಬ್ರಹ್ಮಜ್ಞಾನವನ್ನು ಈಗ ನಾನು ತಿಳಿದೆನು. ಪೂರ್ವದಲ್ಲಿ ಅಸಿತಾಂಗ ಮುನಿಯ ಶಾಪದಿಂದ ಇದು ಹೋಗಿದ್ದಿತು.

೬೧. ನಾನು ಹಿಂದೆ ತತ್ತ್ವವನ್ನು ತಿಳಿಯಬೇಕೆಂದು ತೀರ್ಥಯಾತ್ರೆಗೆ ಹೋಗಿ ಅನೇಕ ಧರ್ಮಜ್ಞರನ್ನು ನೋಡಿದೆನು.

೬೨. ಜ್ಞಾನಸಂಪಾದನೆಗೆ ಅಸಿತಾಂಗನ ಬಳಿಗೆ ಹೋಗಲು ನನ್ನ ಮೇಲಿನ ಕೃಪೆಯಿಂದ ಅವನು ಇಂತೆಂದನು.

೬೩. ಅಯೋಧ್ಯಾಧಿಪತಿಯಾದ ಶ್ರೀರಾಮನೇ ಪರಬ್ರಹ್ಮನೆಂಬುವನು. ಅವನ ಹೆಂಡತಿಯಾದ ಜಾನಕಿಯೇ ಸಾಕ್ಷಾಚ್ಚಿನ್ಮಯಿಯು.

ಏನಂ ತು ಯೋಗಿನಸ್ಸಾಕ್ಷಾದುಪಾಸತೇ ಯಮಾದಿಭಿಃ ।
ದುಸ್ತರಾಪಾರಸಂಸಾರವಾರಿಧಿಂ ಸಂತಿತೀರ್ಷವಃ ॥ ೬೪ ॥

ಸ್ಮೃತಮಾತ್ರೋ ಮಹಾಪಾಪಹಾರೀ ಸ ಗರುಡಧ್ವಜಃ ।
ಯ ಏನಂ ಸೇವತೇ ವಿದ್ವಾನ್ಸ ಸಂಸಾರಂ ತರಿಷ್ಯತಿ ॥ ೬೫ ॥

ತದಾಹಮುಹಸಂ ವಿಪ್ರಂ ಕೋಽಯಂ ರಾಮಸ್ತು ಮಾನುಷಃ ।
ಕೇಯಂ ಸಾ ಜಾನಕೀ ದೇವೀ ಹರ್ಷಶೋಕಸಮಾಕುಲಾ ॥ ೬೬ ॥

ಅಜನ್ಮನಃ ಕಥಂ ಜನ್ಮ ಅಕರ್ತುಃ ಕೃತ್ಯಮತ್ರ ಕಿಂ ।
ಜನ್ಮದುಃಖಜರಾತೀತಂ ಕಥಯ ತ್ವಂ ಮುನೇ ಮಮ ॥ ೬೭ ॥

ಇತ್ಯುಕ್ತವಂತಂ ಮಾಂ ಪ್ರಾಜ್ಞಃ ಶಶಾಪ ಸ ಮುನೀಶ್ವರಃ ।
ಅಜ್ಞಾತ್ವಾ ತತ್ಸ್ವರೂಪಂ ತ್ವಂ ಪ್ರತಿಬ್ರೂಷೇ ಮಮಾಧಮ ॥ ೬೮ ॥

ಏವಂ ನಿಂದಸಿ ರಾಮಂ ತ್ವಂ ಮಾನುಷೋಽಯಮಿದಂ ಹಸನ್ ।
ತಸ್ಮಾತ್ತ್ವಂ ತತ್ತ್ವಸಂಮೂಢೋ ಭವಿಷ್ಯಸ್ಯುದರಂಭರಿಃ ॥ ೬೯ ॥

---

೬೪. ಇವನನ್ನೇ ಯೋಗಿಗಳು ಯಮಾದಿನಿಯಮಗಳಿಂದ ಉಪಾಸನೆಮಾಡುತ್ತಾರೆ. ಅದರಿಂದ ಸಂಸಾರವನ್ನು ಕಳೆದುಕೊಳ್ಳುತ್ತಾರೆ.

೬೫. ಇವನನ್ನು ಸ್ಮರಿಸಿದರೇನೇ ಮಹಾಪಾಪಗಳು ಹೋಗುತ್ತವೆ. ಇವನನ್ನು ಸೇವಿಸಿದರೆ ಜನ್ಮಮರಣಗಳುಂಟಾಗುವುದಿಲ್ಲ. ಅದನ್ನು ಕಳೆದುಕೊಳ್ಳುತ್ತಾರೆ.

೬೬. ಆಗ ನಾನು ರಾಮನೆಂಬುವನು ಮನುಷ್ಯನು. ಬ್ರಹ್ಮನಂತೆ! ದುಃಖ ಹರ್ಷಗಳುಳ್ಳ ಈ ಜಾನಕಿಯು ಚಿತ್ತಂತೆ! ಎಂದು ಹಾಸ್ಯಮಾಡಿದೆನು.

೬೭. ಜನ್ಮವಿಲ್ಲದವನಿಗೆ ಜನ್ಮವೆಂದರೇನು? ಕೆಲಸಮಾಡದವನಿಗೆ ಇಲ್ಲೇನು ಕೆಲಸ? ಆದ್ದರಿಂದ ಜನ್ಮ, ದುಃಖ, ಮುಪ್ಪುಗಳಿಂದ ದೂರವಾದ ಆ ಪರಬ್ರಹ್ಮನನ್ನು ಹೇಳು ಎನ್ನಲು,

೬೮-೬೯. ಆ ರಾಮನ ಸ್ವರೂಪವನ್ನು ತಿಳಿಯದೆ ಅವನನ್ನು ನಿಂದಿಸುತ್ತಾ ಮನುಷ್ಯನೆಂದು ಹಾಸ್ಯಮಾಡುತ್ತಿಯೇ. ಆದ್ದರಿಂದ ತತ್ವವನ್ನು ತಿಳಿಯದೆ ಬರೀ ಹೊಟ್ಟೆ ಹೊರೆದುಕೊಳ್ಳುವನಾಗೆಂದು ನನ್ನನ್ನು ಆತನು ಶಪಿಸಿದನು

ತದಾಹಂ ತಸ್ಯ ಚರಣೌ ಗೃಹೀತ್ವಾ ದಯಯಾ ಯುತಂ ।
ಕೃತವಾನ್ಸ ಪ್ರಸಮರ್ಾಂ ತು ಪ್ರೋವಾಚ ಕರುಣಾನಿಧಿಃ ॥ ೭೦ ॥

ತ್ವಂ ರಾಮಸ್ಯ ಮಖೇ ವಿಘ್ನಂ ಕರಿಷ್ಯಸಿ ಯದಾ ನೃಪ ।
ಪದಾ ತದಾ ಹನೂಮಾಂಸ್ತ್ವಾಂ ತಾಡಯಿಷ್ಯತಿ ವೇಗತಃ ॥ ೭೧ ॥

ತದಾ ತಂ ಜ್ಞಾಸ್ಯಸೇ ರಾಜನ್ನಾನ್ಯಥಾ ಸ್ವಮನೀಷಯಾ ।
ಪುರಾಹಮುಕ್ತಸ್ತೇನೈವ ತದ್ದೃಷ್ಟಮಧುನಾ ಮಯಾ ॥ ೭೨ ॥

ಯದಾ ಮಾಂ ಹನುಮಾನ್ಕ್ರುದ್ಧಸ್ತಾಡಯಾಮಾಸ ವಕ್ಷಸಿ ।
ತದಾದರ್ಶಂ ರಮಾನಾಥಂ ಪೂರ್ಣಬ್ರಹ್ಮಸ್ವರೂಪಿಣಂ ॥ ೭೩ ॥

ತಸ್ಮಾದಶ್ವಂ ತು ಶೋಭಾಢ್ಯಮಾನಯಂತು ಮಹಾಬಲಾಃ ।
ಧನಾನಿ ಚೈವ ವಾಸಾಂಸಿ ರಾಜ್ಯಂ ಚೇದಂ ಸಮರ್ಪಯೇ ॥ ೭೪ ॥

---

೭೦. ಆಗ ಅವನ ಕಾಲುಗಳನ್ನು ಕಟ್ಟಿಕೊಳ್ಳಲು ದಯೆಯಿಂದ ಆತನು ಇಂತೆಂದನು.

೭೧-೭೨. ನೀನು ರಾಮನ ಯಜ್ಞಕ್ಕೆ ವಿಘ್ನವನ್ನು ಮಾಡುತ್ತೀಯೆ. ಆಗ ಹನುಮಂತನು ನಿನ್ನ ಎದೆಗೆ ಒದೆಯುತ್ತಾನೆ. ಆಗ ನೀನು ಅವನನ್ನು ತಿಳಿಯು ತ್ತೀಯೆ. ಬೇರೆ ತಿಳಿಯಲಾರೆ. ಎಂದು ಆತನು ಹಿಂದೆ ಹೇಳಿದ್ದನು. ಅದನ್ನು ಈಗ ನಾನು ನೋಡಿದೆನು.

೭೩. ಹನುಮಂತನು ಎದೆಗೆ ಒದ್ದಾಗ ಪೂರ್ಣಬ್ರಹ್ಮಸ್ವರೂಪಿಯಾದ ರಮಾನಾಥನನ್ನು ಕಂಡೆನು.

೭೪. ಆದ್ದರಿಂದ ಕುದುರೆಯನ್ನು ತನ್ನಿ. ಹಣ, ಬಟ್ಟೆ, ರಾಜ್ಯವೆಲ್ಲವನ್ನೂ ಅವನಿಗೆ ಅರ್ಪಿಸುತ್ತೇನೆ.

**ರಾಮಂ ದೃಷ್ಟ್ವಾ ಕೃತಾರ್ಥಸ್ಸ್ಯಾಮಹಂ ಯಜ್ಞೇsತಿಪುಣ್ಯದೇ ।**
**ಇತಿ ಮೈ ಸ ಹಯಂ ಮಹ್ಯಂ ರೋಚತೇ ತು ತದರ್ಪಣಂ ॥ ೭೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಶತ್ರುಘ್ನವಿಜಯೋ ನಾಮ ಅಷ್ಟಾವಿಂಶೋsಧ್ಯಾಯಃ**



೭೫. ಯಜ್ಞದಲ್ಲಿ ರಾಮನನ್ನು ನೋಡಿ ಅವನಿಗೆ ಕುದುರೆಯನ್ನು ಕೊಟ್ಟು ಕೃತಾರ್ಥನಾಗುತ್ತೇನೆ. ಇದು ನನಗೆ ಇಷ್ಟವಾಗಿದೆ. ಅವನಿಗೆಲ್ಲವನ್ನೂ ಅರ್ಪಿಸುವುದೇ ಶ್ರೇಯಸ್ಕರವು. ಎಂದನು

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ಶತ್ರುಘ್ನವಿಜಯವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕೋನತ್ರಿಂಶೋಽಧ್ಯಾಯಃ

॥ ಶೇಷ ಉವಾಚ ॥

ತೇ ತು ತಾತವಚಶ್ಶ್ರುತ್ವಾ ಹರ್ಷಿತಾಸ್ಸತ್ಪ್ರಹಾರಿಣಃ ।
ತಥೇತ್ಯೂಚುರ್ಮಹಾರಾಜಂ ರಾಮದರ್ಶನಲಾಲಸಂ ॥ ೧ ॥

॥ ಪುತ್ರಾ ಊಚುಃ ॥

ರಾಜನ್ಭವತ್ಪಾದನ್ಯನ್ನ ಜಾನೀಮ ಪರಂತಪ ।
ತಸ್ಮಾತ್ತ್ವದ್ಧೃದಿ ಯಜ್ಜಾತಂ ತದ್ಭವತ್ವದ್ಯ ವೇಗತಃ ॥ ೨ ॥

ಅಶ್ವೋಽಯಂ ನೀಯತಾಂ ತತ್ರ ಸಿತಚಾಮರಭೂಷಿತಃ ।
ರತ್ನಮಾಲಾದಿಶೋಭಾಢ್ಯಶ್ಚಂದನಾದಿಕಚರ್ಚಿತಃ ॥ ೩ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಶೇಷನು ಹೇಳಿದನು:—ಅವರೂ ಕೂಡ ರಾಜನ ಮಾತನ್ನು ಕೇಳಿ ಯುದ್ಧಮಾಡಲು ಶಕ್ತರಾದಾಗ್ಯೂ ನೀನು ಹೇಳಿದಂತೆಯೇ ಆಗಲೆಂದರು.

೨. ಮಕ್ಕಳು ಹೇಳಿದರು:—ಎಲೈ! ರಾಜನೇ, ನಿನ್ನ ಪಾದಗಳನ್ನು ಹೊರ ತಾಗಿ ಬೇರೆ ಯಾವುದನ್ನೂ ನಾವು ತಿಳಿಯೆವು. ಆದ್ದರಿಂದ ನಿನ್ನ ಮನಸ್ಸಿನಲ್ಲಿ ಉಂಟಾದುದು ವೇಗದಿಂದ ನೆರವೇರಲಿ.

೩. ಆ ಯಜ್ಞದ ಕುದುರೆಯನ್ನು ಪೂಜೆಮಾಡಿ ಅಲ್ಲಿಗೆ ತೆಗೆದುಕೊಂಡು ಹೋಗು.

ರಾಜ್ಯಮಾಜ್ಞಾಫಲಂ ಸ್ವಾಮಿನ್ ಕೋಶಾ ಬಹುಸಮೃದ್ಧಯಃ ।
ಚಂದನಂ ಚಂದ್ರಕಂ ಚೈವ ವಾಜಿನಸ್ಸುಮನೋಹರಾಃ ॥ ೪ ॥

ಹಸ್ತಿನಸ್ತು ಮದೋದ್ಧೂತಾ ರಥಾಃ ಕಾಂಚನಕೂಬರಾಃ ।
ವಾಸಾಂಸಿ ಸುಮಹಾರ್ಹಾಣಿ ಸೂಕ್ಷ್ಮಾಣಿ ಸುಗುಣಾನಿ ಚ ॥ ೫ ॥

ವಿಚಿತ್ರತರವರ್ಣಾನಿ ನಾನಾಭರಣಭೂಷಿತಾಃ ।
ದಾಸ್ಯಃ ಶತಸಹಸ್ರಂ ಚ ದಾಸಾಶ್ಚ ಸುಮನೋರಮಾಃ ॥ ೬ ॥

ಮಣಯಃ ಸೂರ್ಯಸಂಕಾಶಾ ರತ್ನಾನಿ ವಿವಿಧಾನಿ ಚ ।
ಮುಕ್ತಾಫಲಾನಿ ಶುಭ್ರಾಣಿ ಗಜಕುಂಭಭವಾನಿ ಚ ॥ ೭ ॥

ವಿದ್ರುಮಾಶ್ಯತಸಾಹಸ್ರಾ ಯದ್ಯದ್ವಸ್ತು ಮಹೋದಯಂ ।
ತತ್ಸರ್ವಂ ರಾಮಚಂದ್ರಾಯ ದೇಹಿ ರಾಜನ್ಮಹಾಮತೇ ॥ ೮ ॥

ಸುತಾನಸ್ಮಾನ್ ಕಿಂಕರಾನ್ನಃ ಸರ್ವಾನರ್ಪಯ ಭೂಪತೇ ।
ಕಥಂ ನ ಕುರುಷೇ ರಾಜಂಸ್ತ್ವದಧೀನಂ ನೃಪಾಸನಂ ॥ ೯ ॥

॥ ಶೇಷ ಉವಾಚ ॥

ಇತಿ ಪುತ್ರವಚಶ್ಶ್ರುತ್ವಾ ಹರ್ಷಿತೋಽಭೂನ್ಮಹೀಪತಿಃ ।
ಉವಾಚ ಸ್ವಸುತಾನ್ವೀರಾನ್ಸ್ವವಾಕ್ಯಕರಣೋದ್ಯತಾನ್ ॥ ೧೦ ॥

---

೪-೮. ಆಜ್ಞೆಯೇ ಫಲವಾಗಿ ಉಳ್ಳ ರಾಜ್ಯವು, ಹಣವಿರುವ ಕೋಶವು, ಚಂದನ, ಚಂದ್ರ, ಕುದುರೆ, ಮದಿಸಿದ ಆನೆಗಳು, ಕಾಂಚನದ ರಥಗಳು, ಒಳ್ಳೆಯ ಬಟ್ಟೆಗಳು, ನಾನಾ ಒಡವೆಗಳನ್ನು ತೊಟ್ಟಿರುವ ದಾಸಿಯರು, ದಾಸರು, ಉತ್ತಮವಾದ ಮಣಿಗಳು, ನಾನಾಬಗೆಯ ರತ್ನಗಳು, ಶುಭ್ರವಾದ ಮುತ್ತುಗಳು, ಹವಳಗಳು, ಇನ್ನೂ ಉತ್ತಮವಾದವು ಯಾವುವಿವೆಯೋ ಅವೆಲ್ಲವನ್ನೂ ರಾಮಚಂದ್ರನಿಗೆ ಕೊಡು.

೯. ನಿನ್ನ ಮಕ್ಕಳಾದ ಆಳುಗಳಾದ ನಮ್ಮನ್ನೂ ಅರ್ಪಿಸು: ರಾಜ್ಯಭಾರವೇ ನಿನ್ನದಾಗಿರುವಾಗ ಏನು ಬೇಕಾದರೂ ಮಾಡು.

೧೦. ಶೇಷನು ಹೇಳಿದನು:—ಈರೀತಿ ಮಕ್ಕಳು ಹೇಳಿದುದನ್ನು ಕೇಳಿ ಸಂತೋಷಗೊಂಡು ಮಕ್ಕಳನ್ನು ಕುರಿತು ಇಂತೆಂದನು.

॥ ರಾಜೋವಾಚ ॥

ಆನಯಂತು ಹಯಂ ಸರ್ವೇ ಸನ್ನದ್ಧಾಶ್ಶಸ್ತ್ರಪಾಣಯಃ ।
ನಾನಾರಥಪರೀವಾರಾಸ್ತತೋ ಯಾಸ್ಯೇ ನೃಪಂ ಪ್ರತಿ ॥ ೧೧ ॥

॥ ಶೇಷ ಉವಾಚ ॥

ಇತಿ ರಾಜ್ಞೋ ವಚಶ್ಶ್ರುತ್ವಾ ವಿಚಿತ್ರೋ ದಮನಸ್ತಥಾ ।
ಸುಕೇತುಶ್ಚಾಪರೇ ಶೂರಾ ಜಗ್ಮುಸ್ತಸ್ಯಾಜ್ಞಯೋದ್ಯತಾಃ ॥ ೧೨ ॥

ತೇ ಗತ್ವಾಥ ಪುರೀಂ ಶೂರಾ ವಾಜಿನಂ ಸುಮನೋಹರಂ ।
ಸಿತಚಾಮರಸಂಯುಕ್ತಂ ಸ್ವರ್ಣಪತ್ರಾದ್ಯಲಂಕೃತಂ ॥ ೧೩ ॥

ರತ್ನಮಾಲಾವಿಭೂಷಾಢ್ಯಂ ಮುಕ್ತಾಜಾಲಸ್ವಲಂಕೃತಂ ।
ವಿಚಿತ್ರಮಣಿಭೂಷಾಢ್ಯಂ ಚಿತ್ರಪತ್ರೇಣಶೋಭಿತಂ ॥ ೧೪ ॥

ರಜ್ಜ್ವಾ ಧೃತಂ ಮಹಾವೀರೈಃ ಪೂರ್ವತಃ ಪೃಷ್ಠತೋ ಭಟೈಃ ।
ಮಹಾಶಸ್ತ್ರಾಸ್ತ್ರಸಂಯುಕ್ತೈಸ್ಸರ್ವಶೋಭಾಸಮನ್ವಿತೈಃ ॥ ೧೫ ॥

---

೧೧. ರಾಜನು ಹೇಳಿದನು:—ಶಸ್ತ್ರಪಾಣಿಗಳಾಗಿ ರಥವನ್ನು ಹಿಂದೆ ತೆಗೆದುಕೊಂಡು, ಮೊದಲು ಕುದುರೆಯನ್ನು ತೆಗೆದುಕೊಂಡು ಬನ್ನಿರಿ. ಅನಂತರ ಶತ್ರುಘ್ನನ ಬಳಿಗೆ ಹೋಗುತ್ತೇನೆ.

೧೨. ಶೇಷನು ಹೇಳಿದನು:—ಈರೀತಿ ರಾಜನ ಮಾತನ್ನು ಕೇಳಿ ವಿಚಿತ್ರನೂ, ದಮನನೂ, ಸುಕೇತುವೇ ಮೊದಲಾದವರೂ ಅವನ ಅಪ್ಪಣೆಯಂತೆ ಹೋದರು.

೧೩—೧೫. ಅವರು ಊರಿಗೆ ಹೋಗಿ ಬಿಳೀ ಚಾಮರಗಳಿಂದ ಕೂಡಿದ, ಸುವರ್ಣ ಪಟ್ಟಿಯುಳ್ಳ, ರತ್ನದ ಒಡವೆಯಿಂದ ಶೋಭಿತವಾದ, ಚಿತ್ರಿಸಿದ ಒಡವೆಯ ಎಲೆಗಳನ್ನು ಹಾಕಿರುವ, ಮಣಿಗಳನ್ನು ನೇತುಹಾಕಿರುವ, ಮುತ್ತಿನ ಸರವನ್ನುಳ್ಳ, ಆ ಕುದುರೆಯನ್ನು ಹಗ್ಗದಿಂದ ಆಳುಗಳು ಹಿಂದೆಯೂ ಮುಂದೆಯೂ ಹಿಡಿದು ತಂದರು.

ಸಿತಾತಪತ್ರಮಸ್ಯೋಚ್ಚೈರ್ಭಾತಿ ಮೂರ್ಧನಿ ವಾಜಿನಃ ।
ಚಾಮರದ್ವಯಕೇ ತಸ್ಯ ಧ್ರಿಯೇತೇ ಪುರತೋ ಮುಹುಃ ॥ ೧೬ ॥

ಕೃಷ್ಣಾಗರ್ವಾದಿಧೂಪೈಶ್ಚ ಧೂಪಿತಂ ವಾಯುವೇಗಿನಂ ।
ರಾಜ್ಞಃ ಪುರೋ ನಿನಾಯಾಶ್ವಂ ಹಯಮೇಧಸ್ಯ ಸತ್ಕೃತೋಃ ॥ ೧೭ ॥

ತಮಾನೀತಂ ಹಯಂ ದೃಷ್ಟ್ವಾ ರತ್ನಮಾಲಾವಿಭೂಷಿತಂ ।
ಮನೋಜವಂ ಕಾಮರೂಪಂ ಜಹರ್ಷ ಮತಿಮಾನ್ನೃಪಃ ॥ ೧೮ ॥

ಜಗಾಮ ಪದ್ಭ್ಯಾಂ ಶತ್ರುಘ್ನಂ ರಾಜಚಿಹ್ನಾದ್ಯಲಂಕೃತಂ ।
ಸ್ವಪುತ್ರಪೌತ್ರೈಸ್ಸಂಯುಕ್ತೋ ರಾಜಾ ಪರಮಧಾರ್ಮಿಕಂ ॥ ೧೯ ॥

ಯಯೌ ಕರ್ತುಂ ಧನಾನಾಂ ಚ ಸದ್ವ್ಯಯಂ ಚಲಗಾಮಿನಾಂ ।
ಏತದ್ಧಿ ನಶ್ವರಂ ಮತ್ವಾ ದುಃಖದಂ ಸಕ್ತಚೇತಸಾಂ ॥ ೨೦ ॥

ಶತ್ರುಘ್ನಂ ಸ ದದರ್ಶಾಥ ಸಿತಚ್ಛತ್ರೇಣ ಶೋಭಿತಂ ।
ಚಾಮರೈರ್ವೀಜ್ಯಮಾನಂ ಚ ಸೇವಕೈಃ ಪುರತಃಸ್ಥಿತೈಃ ॥ ೨೧ ॥

---

೧೬-೧೭. ಈ ಕುದುರೆಯ ತಲೆಯ ಮೇಲೆ ಶ್ವೇತಚ್ಛತ್ರಿಯನ್ನು ಹಿಡಿದಿದ್ದಾರೆ. ಪಕ್ಕದಲ್ಲಿ ಚಾಮರಗಳನ್ನು ಬೀಸುತ್ತಿದ್ದಾರೆ. ಅಗರು ಮುಂತಾದುವನ್ನು ಹಾಕಿ ಧೂಪದ ವಾಸನೆ ಕೊಟ್ಟಿದ್ದಾರೆ. ಇಂತಹ ಯಾಗದ ಕುದುರೆಯನ್ನು ರಾಜನ ಹತ್ತಿರಕ್ಕೆ ತಂದರು.

೧೮. ರತ್ನಮಾಲೆಯಿಂದ ಕೂಡಿದ ಆ ಕುದುರೆಯನ್ನು ನೋಡಿ ರಾಜನು ಸಂತೋಷಗೊಂಡನು.

೧೯. ಪುತ್ರಪೌತ್ರರಿಂದ ಕೂಡಿಕೊಂಡು ಕಾಲುನಡಿಗೆಯಿಂದಲೇ ರಾಜನಾದ ಶತ್ರುಘ್ನನ ಬಳಿಗೆ ಹೋದನು.

೨೦. ಚಲಿಸುವ, ನಶ್ವರವಾದ, ಆಸೆಯುಳ್ಳವರಿಗೆ ದುಃಖವನ್ನು ಕೊಡುವ ಧನಕ್ಕೆ ಸದ್ವ್ಯಯವನ್ನು ಮಾಡಲು ಹೊರಟನು.

೨೧. ಶ್ವೇತಚ್ಛತ್ರವನ್ನು ಹಿಡಿಸಿಕೊಂಡು ಎದುರಿನಲ್ಲಿ ಚಾಮರಗಳಿಂದ ಬೀಸಿಸಿ ಕೊಳ್ಳುತ್ತಿರುವ ಶತ್ರುಘ್ನನನ್ನು ನೋಡಿದನು.

ಸುಮತಿಂ ಪರಿಪೃಚ್ಛಂತಂ ರಾಮಚಂದ್ರಕಥಾನಕಂ ।
ಭಯವಾರ್ತಾವಿನಿರ್ಮುಕ್ತಂ ವೀರಶೋಭಾಸ್ವಲಂಕೃತಂ ॥ ೨೨ ॥

ವೀರಕೋಟಿಭಿರಾಕೀರ್ಣಂ ನೇತ್ರಪಾತಾಭಿಕಾಂಕ್ಷಕೈಃ ।
ವಾನರಾಣಾಂ ಸಹಸ್ರೈಶ್ಚ ಸಮಂತಾತ್ಪರಿವಾರಿತಂ ॥ ೨೩ ॥

ದೃಷ್ಟ್ವಾ ಶತ್ರುಘ್ನಚರಣೌ ಪ್ರಣನಾಮ ಸಪುತ್ರಕಃ ।
ಧನ್ಯೋಽಹಮಿತಿ ಸಂಹೃಷ್ಟೋ ವದನ್ ರಾಮೈಕಮಾನಸಃ ॥ ೨೪ ॥

ಶತ್ರುಘ್ನಸ್ತಂ ಪ್ರಣಯಿನಂ ದೃಷ್ಟ್ವಾ ರಾಜಾನಮುದ್ಭಟಂ ।
ಉತ್ಥಾಯಾಸನತಸ್ಸರ್ವೈರ್ದೋರ್ಭ್ಯಾಂ ಚ ಪರಿಷಸ್ವಜೇ ॥ ೨೫ ॥

ದೃಢಂ ಸಂಪೂಜ್ಯ ರಾಜಾ ತಂ ಶತ್ರುಘ್ನಂ ಪರವೀರಹಾ ।
ಉವಾಚ ಹರ್ಷಮಾಪನ್ನೋ ಗದ್ಗದಸ್ವರಭೂಷಿತಃ ॥ ೨೬ ॥

॥ ಸುಬಾಹುರುವಾಚ ॥

ಅದ್ಯ ಧನ್ಯೋಽಸ್ಮಿ ಸಸುತಃ ಸಕುಟುಂಬಸ್ಸವಾಹನಃ ।
ಯದ್ಯುಷ್ಮಚ್ಚರಣೌ ದ್ರಕ್ಷ್ಯೇ ನೃಪಕೋಟಿಭಿರೀಡಿತೌ ॥ ೨೭ ॥

---

೨೨. ರಾಮಚಂದ್ರನ ಕಥೆಯನ್ನು ಸುಮತಿಯಿಂದ ಕೇಳುತ್ತಿರುವ, ವೀರ ಶೋಭೆಯಿಂದ ಕೂಡಿ ಭಯದ ಮಾತೇ ಇಲ್ಲದಿರುವ ಶತ್ರುಘ್ನನನ್ನು ನೋಡಿದನು.

೨೩. ಹುಬ್ಬಿನ ಸಂಜ್ಞೆಯನ್ನೇ ಎದುರು ನೋಡುತ್ತಿರುವ ವೀರರಿಂದಲೂ ಅನೇಕ ಕಪಿಗಳಿಂದಲೂ ಸುತ್ತುವರಿಯಲ್ಪಟ್ಟಿದ್ದನು.

೨೪. ಶತ್ರುಘ್ನನ ಪಾದಗಳನ್ನು ದರ್ಶಿಸಿ ನಮಸ್ಕರಿಸಿದನು. ರಾಮನಲ್ಲಿಯೇ ಮನಸ್ಸುಳ್ಳವನಾಗಿ ಧನ್ಯನೆಂದು ಹೇಳುತ್ತಿದ್ದನು.

೨೫. ಶತ್ರುಘ್ನನು ಬಂದ ಆ ರಾಜನನ್ನು ನೋಡಿ ಎಲ್ಲರೊಡನೆಯೂ ಎದ್ದು ಆಲಿಂಗಿಸಿಕೊಂಡನು.

೨೬. ಸುಬಾಹುವು ಶತ್ರುಘ್ನನನ್ನು ಗೌರವಿಸಿ ಹರ್ಷದಿಂದ ಇಂತೆಂದನು.

೨೭. ಸುಬಾಹುವು ಹೇಳಿದನು :—ತಮ್ಮ ಪಾದದರ್ಶನದಿಂದ ಕುಟುಂಬ ದೊಡನೆ ಧನ್ಯನಾದೆನು.

ಅಜ್ಞಾನಿನಾ ಸುತೇನಾಯಂ ಗೃಹೀತೋ ವಾಜಿನಾಂ ವರಃ ।
ದಮನೇನ ತು ಯಜ್ಞಸ್ಯ ಕ್ಷಮಸ್ವ ಕರುಣಾನಿಧೇ ॥ ೨೮ ॥

ನ ಜಾನಾತಿ ರಘೂತ್ತಂಸಂ ಸರ್ವದೇವಾಧಿದೈವತಂ ।
ಲೀಲಯಾ ವಿಶ್ವಸ್ರಷ್ಟಾರಂ ಹಂತಾರಮಪಿ ಪಾಲಕಂ ॥ ೨೯ ॥

ಇದಂ ರಾಜ್ಯಂ ಸಮೃದ್ಧಾಂಗಂ ಸಮೃದ್ಧಬಲವಾಹನಂ ।
ಇಮೇ ಕೋಶಾ ಧನೈಃ ಪೂರ್ಣಾ ಇಮೇ ಪುತ್ರಾ ಇಮೇ ವಯಂ ॥ ೩೦ ॥

ಸರ್ವೇ ವಯಂ ರಾಮನಾಥಾಸ್ತ್ವದಾಜ್ಞಾಪ್ರತಿಪಾಲಕಾಃ ।
ಗೃಹಾಣ ಸರ್ವಂ ಸಫಲಂ ನ ಮೇಽಸ್ತಿ ಕ್ವಚಿದುನ್ಮತಂ ॥ ೩೧ ॥

ಕ್ವಾಸೌ ಹನೂಮಾನ್ರಾಮಸ್ಯ ಚರಣಾಂಭೋಜಷಟ್ಪದಃ ।
ಯತ್ಪ್ರಸಾದಾದಹಂ ಪ್ರಾಪ್ಸ್ಯೇ ರಾಜರಾಜಸ್ಯ ದರ್ಶನಂ ॥ ೩೨ ॥

ಸಾಧೂನಾಂ ಸಂಗಮೇ ಕಿಂ ಕಿಂ ಪ್ರಾಪ್ಯತೇ ನ ಮಹೀತಳೇ ।
ಯತ್ಪ್ರಸಾದಾದಹಂ ಮೂಢೋ ಬ್ರಹ್ಮಶಾಪಮತೀತರಂ ॥ ೩೩ ॥

---

೨೮. ಈ ದಮನನು ಅಜ್ಞಾನದಿಂದ ಈ ಕುದುರೆಯನ್ನು ಹಿಡಿದನು. ದಯವಿಟ್ಟು ಕ್ಷಮಿಸು.

೨೯. ಸರ್ವದೇವತೆಗಳಿಗೂ ದೇವತೆಯಾದ, ಲೀಲೆಯಿಂದ ಕೊಲ್ಲುವ, ಸೃಷ್ಟಿಸುವ ಆ ರಘುರಾಮನನ್ನು ತಿಳಿಯನು.

೩೦-೩೧. ವೃದ್ಧಿಹೊಂದಿದ ವಾಹನಗಳಿರುವ ಈ ರಾಜ್ಯವು, ಈ ಕೋಶವು, ಈ ಮಕ್ಕಳು, ನಾವು ಎಲ್ಲರೂ ರಾಮನ ಅಧೀನರು. ನಿಮ್ಮ ಆಜ್ಞೆಯನ್ನು ಪಾಲಿಸತಕ್ಕವರು. ಎಲ್ಲವನ್ನೂ ತೆಗೆದುಕೋ. ಸಫಲವಾಯಿತು. ನನಗೆ ಯಾವುದರಲ್ಲೂ ದುಃಖವಿಲ್ಲ.

೩೨. ರಾಮನ ಪಾದಸೇವಕನಾದ ಆ ಹನುಮಂತನೆಲ್ಲಿ? ಅವನ ಅನುಗ್ರಹದಿಂದ ರಾಮನ ದರ್ಶನವನ್ನು ಹೊಂದುವಂತಾಯಿತು.

೩೩. ಸಾಧುಗಳ ಸಹವಾಸವು ಭೂಮಿಯಲ್ಲಿ ಏನೇನನ್ನು ತಾನೆ ಮಾಡುವುದಿಲ್ಲ? ಆ ಹನುಮಂತನ ಅನುಗ್ರಹದಿಂದಲೇ ಬ್ರಾಹ್ಮಣಶಾಪದಿಂದ ಪಾರಾದೆನು.

ದೃಷ್ಟ್ವಾ ತ್ವದ್ಯ ಮಹಾರಾಜಂ ಪದ್ಮಪತ್ರನಿಭೇಕ್ಷಣಂ ।
ಪ್ರಾಪ್ಸ್ಯಾಮಿ ಜನ್ಮನಸ್ಸರ್ವಂ ಫಲಂ ದುರ್ಲಭಮತ್ರ ಚ ॥ ೩೪ ॥

ಮಮ ತಾವದ್ಗತಂ ಚಾಯುರ್ಬಹು ರಾಮವಿಯೋಗಿನಃ ।
ಸ್ವಲ್ಪಮುರ್ವರಿತಂ ತತ್ರ ಕಥಂ ದ್ರಕ್ಷ್ಯೇ ರಘೂತ್ತಮಂ ॥ ೩೫ ॥

ಮಹ್ಯಂ ದರ್ಶಯ ತಂ ರಾಮಂ ಯಜ್ಞಕರ್ಮವಿಚಕ್ಷಣಂ ।
ಯದಂಘ್ರಿರಜಸಾ ಪೂತಾ ಶಿಲಾಭೂತಾ ಮುನಿಪ್ರಿಯಾ ॥ ೩೬ ॥

ಕಾಕಃ ಪರಂ ಪದಂ ಪ್ರಾಪ್ತೋ ಯದ್ಬಾಣಸ್ಪರ್ಶನಾತ್ಖಗಃ ।
ಅನೇಕೇ ಯಸ್ಯ ವಕ್ತ್ರಾಬ್ಜಂ ವೀಕ್ಷ್ಯ ಸಂಖ್ಯೇ ಪದಂ ಗತಾಃ ॥ ೩೭ ॥

ಯೇ ತ್ವಸ್ಯ ರಘುನಾಥಸ್ಯ ನಾಮ ಗೃಹ್ಣಂತಿ ಸಾದರಾಃ ।
ತೇ ಯಾಂತಿ ಪರಮಂ ಸ್ಥಾನಂ ಯೋಗಿಭಿರ್ಯದ್ವಿಚಿಂತ್ಯತೇ ॥ ೩೮ ॥

---

೩೪. ರಾಮನನ್ನು ನೋಡಿ ಜನ್ಮಸಾಫಲ್ಯವನ್ನು ಹೊಂದಿ ದುರ್ಲಭವಾದ ಫಲವನ್ನು ಹೊಂದುತ್ತೇನೆ.

೩೫. ರಾಮನನ್ನು ಬಿಟ್ಟು ಬಹು ಆಯುಸ್ಸು ಕಳೆಯಿತು. ಸ್ವಲ್ಪಮಾತ್ರ ಬಹು ಉಪಯುಕ್ತವಾಗಿದೆ. ರಾಮನನ್ನು ಹೇಗೆ ನೋಡಲಿ ?

೩೬. ಯಾವ ರಾಮನ ಪಾದಧೂಳಿಯಿಂದ ಶಿಲೆಯಾಗಿದ್ದ ಅಹಲ್ಯೆಯು ಪರಿಶುದ್ಧಳಾದಳೋ ಅಂತಹ ಯಜ್ಞಕರ್ಮಮಾಡುತ್ತಿರುವ ರಾಮನನ್ನು ತೋರಿಸು.

೩೭. ಬಾಣಸ್ಪರ್ಶಮಾತ್ರದಿಂದಲೇ ಕಾಕಾಸುರನು ಉತ್ತಮಸ್ಥಾನವನ್ನು ಹೊಂದಿದನು. ಅನೇಕ ಜನರು ಯುದ್ಧದಲ್ಲಿ ಅವನನ್ನು ದರ್ಶನಮಾಡಿ ಉತ್ತಮ ಪದವನ್ನು ಹೊಂದಿದರು.

೩೮. ಯಾರು ಪ್ರೀತಿಯಿಂದ ರಾಮನಾಮವನ್ನು ಉಚ್ಚರಿಸುತ್ತಾರೋ ಅವರು ಯೋಗಿಗಳು ಚಿಂತಿಸುವ ಪರಮಪದವನ್ನು ಹೊಂದುತ್ತಾರೆ.

ಧನ್ಯಾಯೋಧ್ಯಾಭವಾ ಲೋಕಾ ಯೇ ರಾಮಮುಖಪಂಕಜಂ ।
ಸ್ವಲೋಚನಪುಟೈಃ ಪೀತ್ವಾ ಸುಖಂ ಯಾಂತಿ ಮಹೋದಯಂ ॥ ೩೯ ॥

ಇತಿ ಸಂಭಾಷ್ಯ ನೃಪತಿಂ ವಾಹಂ ರಾಜ್ಯಂ ಧನಾನಿ ಚ ।
ಸರ್ವಂ ಸಮರ್ಪ್ಯ ಚಾವೋಚತ್ಕಿಂ ಕರೋಽಸ್ಮಿ ಮಹೀಪತೇ ॥ ೪೦ ॥

ಇತಿ ವಾಕ್ಯಂ ಸಮಾಕರ್ಣ್ಯ ರಾಜ್ಞಃ ಪರಪುರಂಜಯಃ ।
ಪ್ರತ್ಯುಚೇ ವಿನತಂ ಭೂಪಂ ವಾಗ್ಮೀ ವಾಕ್ಯವಿಶಾರದಃ ॥ ೪೧ ॥

॥ ಶತ್ರುಘ್ನ ಉವಾಚ ॥

ಕಥಂ ರಾಜನ್ನಿದಂ ಬ್ರೂಷೇ ತ್ವಂ ವೃದ್ಧೋ ಮಮ ಪೂಜಿತಃ ।
ಸರ್ವಂ ತ್ವದೀಯಂ ತ್ವದ್ರಾಜ್ಯಂ ದಮನೋ ವಿದಧಾತ್ವಯಂ ॥ ೪೨ ॥

ಕ್ಷತ್ರಿಯಾಣಾಮಿದಂ ಕೃತ್ಯಂ ಯತ್ಸಂಗ್ರಾಮವಿಧಾಯಕಂ ।
ಸರ್ವಂ ರಾಜ್ಯಂ ಧನಂ ಚೇದಂ ಪ್ರತಿಯಾತು ಮಮಾಜ್ಞಯಾ ॥ ೪೩ ॥

---

೩೯. ಅಯೋಧ್ಯೆಯ ಜನರು ತಮ್ಮ ಕಣ್ಣುಗಳಿಂದಲೇ ರಾಮನನ್ನು ನೋಡು ವುದರಿಂದ ಧನ್ಯರು.

೪೦. ಹೀಗೆಂದು ಹೇಳಿ ವಾಹನ, ರಾಜ್ಯ, ಧನ, ಎಲ್ಲವನ್ನೂ ಸಮರ್ಪಿಸಿ ನಾನು ರಾಮಚಂದ್ರನ ಆಳಾಗಿದ್ದೇನೆ ಎಂದನು.

೪೧. ಈ ಮಾತನ್ನು ಕೇಳಿ ವೀರನಾದ ಶತ್ರುಘ್ನನು ವಿನತನಾದ ಆ ರಾಜನಿಗೆ ಹೇಳಿದನು.

೪೨. ಶತ್ರುಘ್ನನು ಹೇಳಿದನು:—ಎಲೈ! ರಾಜನೇ, ಇದೇಕೆ ಹೀಗೆನ್ನು ತ್ತೀಯೆ? ರಾಜ್ಯವೆಲ್ಲವೂ ನಿನ್ನದೇ! ದಮನನಿಗೆ ಪಟ್ಟವನ್ನು ಕಟ್ಟು.

೪೩. ಯುದ್ಧಮಾಡತಕ್ಕದ್ದು ಕ್ಷತ್ರಿಯರಿಗೆ ಧರ್ಮವು. ಈತನ ಈ ರಾಜ್ಯ ವೆಲ್ಲವೂ ನನ್ನ ಅಪ್ಪಣೆಯಿಂದ ಹಿಂದಕ್ಕೆ ಹೋಗಲಿ.

**ಯಥಾ ಮೇ ರಘುನಾಥಸ್ತು ಪೂಜ್ಯೋ ವಾಙ್ಮನಸಾ ಸದಾ ।**
**ತಥಾ ತ್ವಮಪಿ ಮತ್ಪೂಜ್ಯೋ ಭವಿಷ್ಯಸಿ ಮಹೀಪತೇ ॥ ೪೪ ॥**

**ಭವಾನ್ ಸಜ್ಜೋ ಭವತ್ವಸ್ಯ ಹಯಸ್ಯಾನುಗಮಂ ಪ್ರತಿ ।**
**ಸನ್ನದ್ಧಃ ಕವಚೀ ಖಡ್ಗೀ ರಥಯೂಥಪಸಂಯುತಃ ॥ ೪೫ ॥**

**ಇತಿ ವಾಕ್ಯಂ ಸಮಾಕರ್ಣ್ಯ ಶತ್ರುಘ್ನಸ್ಯ ಮಹಾಮತೇಃ ।**
**ಪುತ್ರಂ ರಾಜ್ಯೇಽಭಿಷಿಚ್ಯೈವ ಶತ್ರುಘ್ನೇನ ಸುಪೂಜಿತಃ ॥ ೪೬ ॥**

**ಮಹಾರಥೈಃ ಪರಿವೃತೋ ನಿಜಂ ಪುತ್ರಂ ರಣಾಂಗಣೇ ।**
**ಪುಷ್ಕಲೇನ ಹತಂ ಭೂಯಃ ಸಂಸ್ಕೃತ್ಯ ವಿಧಿಪೂರ್ವಕಂ ॥ ೪೭ ॥**

**ಕ್ಷಣಂ ಶುಶೋಚ ತತ್ತ್ವಜ್ಞೋ ಲೋಕದೃಷ್ಟ್ಯಾ ಮಹಾರಥಃ ।**
**ಜ್ಞಾನೇನಾಶಮಯಚ್ಛೋಕಂ ರಘುನಾಥಮನುಸ್ಮರನ್ ॥ ೪೮ ॥**

**ಸಜ್ಜೀಭೂತೋ ರಥೇ ತಿಷ್ಠನ್ ಮಹಾಸೈನ್ಯಸಮಾವೃತಃ ।**
**ಆಜಗಾಮ ಸ ಶತ್ರುಘ್ನಂ ಮಹಾರಥಿಪುರಸ್ಕೃತಃ ॥ ೪೯ ॥**

---

೪೪. ರಾಮನು ಹೇಗೆ ಮನೋವಾಕ್ಕಾಯಗಳಿಂದ ನನಗೆ ಪೂಜ್ಯನೋ ಅದರಂತೆಯೇ ನೀನೂ ಕೂಡ ಪೂಜ್ಯನು.

೪೫. ನೀನು ಕವಚ, ಖಡ್ಗ, ರಥಗಳನ್ನು ಸಿದ್ಧಮಾಡಿಕೊಂಡು ಕುದುರೆಯ ಹಿಂದೆ ಬರಲು ಸಿದ್ಧನಾಗು.

೪೬—೪೮. ಶತ್ರುಘ್ನನ ಈ ಮಾತನ್ನು ಕೇಳಿ ಮಗನನ್ನು ರಾಜ್ಯದಲ್ಲಿ ಅಭಿಷೇಕಮಾಡಿಸಿ ಯುದ್ಧದಲ್ಲಿ ಸತ್ತ ಮಗನಿಗೆ ಸಂಸ್ಕಾರಗಳನ್ನು ಮಾಡಿ ಲೋಕ ದೃಷ್ಟಿಯಿಂದ ದುಃಖಿಸಿ, ರಘುನಾಥನ ಜ್ಞಾನದಿಂದ ಶಾಂತಿಯನ್ನು ಪಡೆದನು.

೪೯. ಸೈನ್ಯದೊಡನೆ ಸಿದ್ಧನಾಗಿ ರಥದಲ್ಲಿ ಕುಳಿತು ಶತ್ರುಘ್ನನ ಬಳಿಗೆ ಬಂದನು.

ರಾಜಾ ತಮಾಗತಂ ದೃಷ್ಟ್ವಾ ಸರ್ವಸೈನ್ಯಸಮನ್ವಿತಂ ।
ಗಂತುಂ ಚಕಾರ ಧಿಷಣಾಂ ಹಯವರ್ಯಸ್ಯ ಪಾಲನೇ ॥ ೫೦ ॥

ಸೋಽಶ್ವೋ ವಿಮೋಚಿತಸ್ತೇನ ಭಾಲೇ ಪತ್ರೇಣ ಚಿಹ್ನಿತಃ ।
ವಾಮಾವರ್ತಂ ಭ್ರಮನ್ಪ್ರಾಯಾತ್ಪೂರ್ವಾನ್ಜನಪದಾನ್ಬಹೂನ್ ॥ ೫೧ ॥

ತತ್ರ ತತ್ರ ಚ ಭೂಪಾಲೈರ್ಮಹಾಶೂರಾಭಿಪೂಜಿತೈಃ ।
ಪ್ರಣತಿಃ ಕ್ರಿಯತೇ ತಸ್ಯ ನ ಕೋಽಪಿ ತಮುಗ್ರಹೀತ ॥ ೫೨ ॥

ಕೇಚಿದ್ವಾಸಾಂಸಿ ಚಿತ್ರಾಣಿ ಕೇಚಿದ್ರಾಜ್ಯಂ ಸ್ವಕಂ ಮಹತ್ ।
ಕೇಚಿದ್ಧನಾನಿ ವಾ ಕಿಂಚಿದಾನೀಯ ಪ್ರಣಮಂತಿ ತಂ ॥ ೫೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಶತ್ರುಘ್ನಸುಬಾಹುಭೂಪಯೋಃ
ಪರಸ್ಪರಸಂಯೋಗೋ ನಾಮ ಏಕೋನತ್ರಿಂಶೋಽಧ್ಯಾಯಃ

---

೫೦. ಸೈನ್ಯದೊಡನೆ ಬಂದ ಆತನನ್ನು ನೋಡಿ ಕುದುರೆಯ ರಕ್ಷಣೆಗೆ ಅವನನ್ನು ಕರೆದುಕೊಂಡು ಹೊರಡಲು ಅನುವಾದನು.

೫೧. ಆ ಕುದುರೆಯ ಹಣೆಯಲ್ಲಿ ಆ ಪಟ್ಟಿಯನ್ನು ಕಟ್ಟಿಬಿಟ್ಟರು ಅದು ಎಡಕ್ಕೆ ತಿರುಗಿ ಪೂರ್ವದೇಶಕ್ಕೆ ಸುತ್ತುತ್ತ ಹೊರಟಿತು.

೫೨. ಮಹಾ ಶೂರರಾದ ರಾಜರೂ ಕೂಡ ಅದನ್ನು ಗೌರವಿಸಿದರು. ಒಬ್ಬನೂ ಹಿಡಿಯಲೇ ಇಲ್ಲ.

೫೩. ಕೆಲವರು ಬಟ್ಟೆಗಳನ್ನೂ, ಕೆಲವರು ರಾಜ್ಯವನ್ನೂ, ಕೆಲವರು ಧನವನ್ನೂ ಒಪ್ಪಿಸಿ ಆ ರಾಜನಾದ ಶತ್ರುಘ್ನನಿಗೆ ನಮಸ್ಕರಿಸುತ್ತಿದ್ದರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಶತ್ರುಘ್ನ ಸುಬಾಹುಗಳ ಸಂಯೋಗವೆಂಬ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರಿಂಶೋಽಧ್ಯಾಯಃ

॥ ಶೇಷ ಉವಾಚ ॥

ಅಥ ತೇಜಃಪುರಂ ಪ್ರಾಪ್ತಸ್ತುರಗಃ ಪತ್ರಶೋಭಿತಃ ।
ಯಸ್ಯಾಂ ಪಾಲಯತೇ ರಾಜಾ ಪ್ರಜಾಸ್ಸತ್ಯೇನ ಸತ್ಯವಾನ್ ॥ ೧ ॥

ಅಥ ಕೋಟಿಪರೀವಾರೋ ರಘುನಾಥಾನುಜಸ್ತತಃ ।
ಹಯಾನುಗೋ ಯಯೌ ತಸ್ಯ ಪುರತಃ ಪುರಧರ್ಷಣಃ ॥ ೨ ॥

ತದ್ದೃಷ್ಟ್ವಾ ನಗರಂ ರಮ್ಯಂ ಚಿತ್ರಪ್ರಾಕಾರಶೋಭಿತಂ ।
ಕಾಂಚನೈಃ ಕಲಶೈಸ್ತತ್ರ ಪರಿತಃ ಪ್ರತಿಭಾಸಿತಂ ॥ ೩ ॥

---

## ಮೂವತ್ತನೆಯ ಅಧ್ಯಾಯವು

೧. ಶೇಷನು ಹೇಳಿದನು :—ಅನಂತರ ಸತ್ಯವಂತನಾದ ಸತ್ಯವಂತನಾಳುತ್ತಿರುವ ತೇಜಃಪುರಕ್ಕೆ ಕುದುರೆಯು ಹೋಯಿತು.

೨. ಶತ್ರುಘ್ನನೂ ಕೂಡ ವೀರರೊಡನೆ ಕೂಡಿಕೊಂಡು ಆ ಊರಿಗೆ ಹೋದನು.

೩. ಚಿತ್ರವಾದ ಕೋಟೆಗಳಿಂದಲೂ ಚಿನ್ನದ ಕಲಶಗಳಿಂದಲೂ ಶೋಭಿಸುತ್ತಿದೆ.

ದೇವಾಯತನಸಾಹಸ್ರೈಃ ಸರ್ವತಶ್ಚ ವಿರಾಜಿತಂ ।
ಯತೀನಾಂ ತು ಮಠಾಸ್ತತ್ರ ಶೋಭಂತೇ ಯತಿಪೂರಿತಾಃ ॥ ೪ ॥

ವಹತ್ಯತ್ರ ಮಹಾದೇವೀ ಶಿಖಿಲೋಚನಮೂರ್ಧಗಾ ।
ಹಂಸಕಾರಂಡವಾಕೀರ್ಣಾ ಮುನಿವೃಂದನಿಷೇವಿತಾ ॥ ೫ ॥

ಬ್ರಾಹ್ಮಣಾನಾಂ ಪ್ರತ್ಯಗಾರಮಗ್ನಿಹೋತ್ರಭವಃ ಪುನಃ ।
ಧೂಮಸ್ತತ್ರ ಪುನಾತ್ಯಂಗ ಪಾತಕಾಪ್ಲುತಮಾನಸಾನ್ ॥ ೬ ॥

ಉವಾಚ ಸುಮತಿಂ ರಾಜಾ ಶತ್ರುಘ್ನಶ್ಚ್ಯತ್ರುತಾಪನಃ ।
ತತ್ಪುರಪ್ರೇಕ್ಷಣೋದ್ಭೂತಹರ್ಷವಿಸ್ಮಿತಮಾನಸಃ ॥ ೭ ॥

॥ ಶತ್ರುಘ್ನ ಉವಾಚ ॥

ಮಂತ್ರಿನ್ ಕಥಯ ಕಸ್ಯೇದಂ ಪುರಂ ಮೇ ದೃಷ್ಟಿಗೋಚರಂ ।
ಕರೋತಿ ಮಾನಸಾಹ್ಲಾದಂ ಧರ್ಮೇಣ ಪ್ರತಿಪಾಲಿತಂ ॥ ೮ ॥

---

೪. ಅನೇಕ ದೇವಾಲಯಗಳೂ ಯತಿಗಳಿಂದ ಕೂಡಿದ ಅನೇಕ ಮಠಗಳೂ ಇವೆ.

೫. ಹಂಸ, ಬಕಗಳಿಂದ ಕೂಡಿದ, ಮುನಿಗಳಿಂದ ಸೇವಿಸಲ್ಪಟ್ಟ ಗಂಗಾ ನದಿಯು ಅಲ್ಲಿ ಹರಿಯುತ್ತದೆ.

೬. ಬ್ರಾಹ್ಮಣರು ತಮ್ಮ ಮನೆಯಲ್ಲಿಟ್ಟುಕೊಂಡಿರುವ ಅಗ್ನಿಹೋತ್ರದ ಹೊಗೆಯು ಅಲ್ಲಿನ ಪಾಪಿಗಳನ್ನು ಪೂತವನ್ನಾಗಿ ಮಾಡುತ್ತದೆ.

೭. ಊರನ್ನು ನೋಡಿದುದರಿಂದ ಸಂತೋಷಪಟ್ಟ ಶತ್ರುಘ್ನನು ಸುಮತಿಗೆ ಇಂತೆಂದನು.

೮. ಶತ್ರುಘ್ನನು ಹೇಳಿದನು:—ಎಲೈ! ಮಂತ್ರಿಯೇ, ಕಾಣುತ್ತಿರುವ ಪಟ್ಟಣವಾವುದು? ಯಾರದು? ನನ್ನ ಮನಸ್ಸಿಗೆ ಬಹು ಸಂತೋಷವನ್ನುಂಟು ಮಾಡುತ್ತಿದೆಯಲ್ಲ.

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಶತ್ರುಘ್ನಸ್ಯ ಮಹೀಪತೇಃ ।
ಉವಾಚ ಸುಮತಿಸ್ಸರ್ವಂ ಯಥಾತಥಮನುದ್ಧತಂ ॥ ೯ ॥

॥ ಸುಮತಿರುವಾಚ ॥

ಶೃಣುಷ್ವಾವಹಿತಸ್ಸ್ವಾಮಿನ್ ವೈಷ್ಣವಸ್ಯ ಕಥಾಶ್ಶುಭಾಃ ।
ಯಾಃ ಶ್ರುತ್ವಾ ಮುಚ್ಯತೇ ಪಾಪಾದ್ಬ್ರಹ್ಮಹತ್ಯಾಸಮಾದಪಿ ॥ ೧೦ ॥

ಜೀವನ್ಮುಕ್ತೋ ವರೀವರ್ತಿ ರಾಮಾಂಘ್ರ್ಯಂಬುಜಷಟ್ಪದಃ ।
ಸತ್ಯವಾನ್ಯಜ್ಞಯಜ್ಞಾಂಗಜ್ಞಾತಾ ಕರ್ತಾವಿತಾ ಮಹಾನ್ ॥ ೧೧ ॥

ಧೇನುಂ ಪ್ರಸಾದ್ಯ ಬಹುಭಿರ್ವ್ರತೈರ್ಯಂ ಪ್ರಾಪ ತತ್ಪಿತಾ ।
ಋತಂಭರಾಖ್ಯೋ ಜಗತಿ ಖ್ಯಾತಃ ಪರಮಧಾರ್ಮಿಕಃ ॥ ೧೨ ॥

ಗೌಃ ಪ್ರಸನ್ನಾ ದದೌ ಪುತ್ರಮನೇಕಗುಣಸಂಸ್ಕೃತಂ ।
ಸತ್ಯವಾನ್ನಾಮ ಶೋಭಾಢ್ಯಂ ತಂ ಜಾನೀಹಿ ನೃಪೋತ್ತಮಂ ॥ ೧೩ ॥

---

೯. ಶೇಷನು ಹೇಳಿದನು:—ಶತ್ರುಘ್ನನ ಈ ಮಾತನ್ನು ಕೇಳಿ ಸುಮತಿಯು ನಿಜವಾದ ವಿಷಯವನ್ನು ತಿಳಿಸಿದನು.

೧೦. ಸುಮತಿಯು ಹೇಳಿದನು:—ವೈಷ್ಣವನ ಉತ್ತಮವಾದ ಕಥೆಗಳನ್ನು ಕೇಳು. ಅದರಿಂದ ಪಾಪಗಳು ಹೋಗುತ್ತವೆ.

೧೧. ರಾಮಸೇವೆ ಮಾಡುತ್ತ ಅವನು ಜೀವನ್ಮುಕ್ತನಾಗಿದ್ದಾನೆ. ಅನೇಕ ಯಜ್ಞಗಳನ್ನು ಮಾಡಿ, ಮಾಡಿಸುತ್ತಲೂ ಇದ್ದಾನೆ.

೧೨. ಅನೇಕ ವ್ರತಗಳಿಂದ ಧೇನುವನ್ನು ಪ್ರಸನ್ನಮಾಡಿಕೊಂಡು ಋತಂಭರನೆಂಬ ಅವನ ತಂದೆಯು ಯಾವ ಸದ್ಗತಿಯನ್ನು ಹೊಂದಿದನೋ ಅದೇ ಇವನಿಗೆ ಬರುವುದು.

೧೩. ಆ ಋತಂಭರನಿಗೆ ಕಾಮಧೇನು ಪ್ರಸನ್ನವಾಗಿ ಅನೇಕ ಗುಣಗಳಿಂದ ಕೂಡಿದ ಪುತ್ರನನ್ನು ಕೊಟ್ಟಿತು.

ಶತ್ರುಘ್ನ ಉವಾಚ ॥

ಕೋ ವಾ ಋತಂಭರೋ ರಾಜಾ ಕಿಮರ್ಥಂ ಧೇನುಪೂಜನಂ ।
ಕಥಂ ಪ್ರಾಪ್ತಸ್ಸುತಸ್ತೇನ ವೈಷ್ಣವೋ ವಿಷ್ಣುಸೇವಕಃ ॥ ೧೪ ॥

ಸರ್ವಮೇತತ್ಸಮಾಚಕ್ಷ್ವ ವೈಷ್ಣವಸ್ಯ ಕಥಾನಕಂ ।
ಶ್ರುತಂ ಹರತಿ ಜಂತೂನಾಂ ಮಹಾಪಾತಕಪರ್ವತಂ ॥ ೧೫ ॥

॥ ಶೇಷ ಉವಾಚ ॥

ಇತಿವಾಕ್ಯಂ ಸಮಾಕರ್ಣ್ಯ ಶತ್ರುಘ್ನಸ್ಯ ಮಹಾರ್ಥಕಂ ।
ಕಥಯಾಮಾಸ ವಿಶದಂ ತದುತ್ಪತ್ತಿಕಥಾನಕಂ ॥ ೧೬ ॥

ಋತಂಭರೋಽತ್ರ ನೃಪತಿರನಪತ್ಯಃ ಪುರಾಽಭವತ್ ।
ಕಳತ್ರಾಣಿ ಬಹೂನ್ಯಸ್ಯ ನ ಪುತ್ರಂ ಪ್ರಾಪ ತೇಷು ವೈ ॥ ೧೭ ॥

ತದಾ ಜಾಬಾಲಿನಾಮಾನಂ ಮುನಿಂ ದೈವಾದುಪಾಗತಂ ।
ಪಪ್ರಚ್ಛ ಕುಶಲೋದ್ಯುಕ್ತಃ ಸ ಪುತ್ರೋತ್ಪತ್ತಿಕಾರಣಂ ॥ ೧೮ ॥

---

೧೪. ಶತ್ರುಘ್ನನು ಕೇಳಿದನು:—ಋತಂಭರ ರಾಜನಾರು ? ಧೇನುವನ್ನೇಕೆ ಪೂಜಿಸಿದನು ? ವಿಷ್ಣು ಸೇವಕನಾದ ಮಗನು ಹೇಗೆ ಹುಟ್ಟಿದನು ?

೧೫. ವೈಷ್ಣವನ ಕಥೆಯನ್ನು ಹೇಳು. ಕೇಳುವುದರಿಂದ ಪ್ರಾಣಿಗಳ ಮಹಾ ಪಾತಕವು ಹೋಗುತ್ತದೆ.

೧೬. ಶೇಷನು ಹೇಳಿದನು:—ಶತ್ರುಘ್ನನ ಈ ಮಾತನ್ನು ಕೇಳಿ ಅವನ ಉತ್ಪತ್ತಿಯ ಕಥೆಯನ್ನು ಹೇಳಿದನು.

೧೭. ಋತಂಭರನಿಗೆ ಮಕ್ಕಳಿರಲಿಲ್ಲ. ಬಹಳಜನ ಹೆಂಡರಿದ್ದರು.

೧೮. ಅಕಸ್ಮಾತ್ತಾಗಿ ಜಾಬಾಲಿಯು ಬರಲು ಅವನನ್ನು ಪುತ್ರೋತ್ಪತ್ತಿಗೆ ಕಾರಣವನ್ನು ಕೇಳಿದನು.

॥ ಋತಂಭರ ಉವಾಚ ॥

ಸ್ವಾಮಿನ್ ವಂಧ್ಯಸ್ಯ ಮೇ ಬ್ರೂಹಿ ಪುತ್ರೋತ್ಪತ್ತಿಕರಂ ವಚಃ ।
ಯತ್ಕೃತ್ವಾ ಜಾಯತೇಽಪತ್ಯಂ ಮಮ ವಂಶಧರಂ ವರಂ ॥ ೧೯ ॥

ತಜ್ಜ್ಞಾತ್ವಾ ಭವತೋ ಭವ್ಯಂ ಪ್ರಕುರ್ಯಾಂ ನಿಶ್ಚಿತಂ ವಚಃ ।
ದಾನಂ ವ್ರತಂ ವಾ ತೀರ್ಥಂ ವಾ ಮಖಂ ವಾ ಮುನಿಸತ್ತಮ ॥ ೨೦ ॥

ಇತಿ ರಾಜ್ಞೋ ವಚಶ್ಶ್ರುತ್ವಾ ಜಗಾದ ಮುನಿಸತ್ತಮಃ ।
ಸುತೋತ್ಪತ್ತಿಕರಂ ವಾಕ್ಯಂ ಪ್ರಣತಸ್ಯ ಸುತಾರ್ಥಿನಃ ॥ ೨೧ ॥

ಅಪತ್ಯಪ್ರಾಪ್ತಿಕಾಮಸ್ಯ ಸಂತ್ಯುಪಾಯಾಸ್ತ್ರಯಃ ಪ್ರಭೋ ।
ವಿಷ್ಣೋಃ ಪ್ರಸಾದೋ ಗೋಶ್ಚಾಪಿ ಶಿವಸ್ಯಾಪ್ಯಥವಾ ಪುನಃ ॥ ೨೨ ॥

ತಸ್ಮಾತ್ತ್ವಂ ಕುರು ವೈ ಪೂಜಾಂ ಧೇನೋರ್ದೇವತನೋರ್ನೃಪ ।
ಯಸ್ಯಾಃ ಪುಚ್ಛೇ ಮುಖೇ ಶೃಂಗೇ ಪೃಷ್ಠೇ ದೇವಾಃ ಪ್ರತಿಷ್ಠಿತಾಃ ॥ ೨೩ ॥

---

೧೯. ಋತಂಭರನು ಕೇಳಿದನು:—ಬಂಜೆಯಾದ ನನಗೆ ಪುತ್ರೋತ್ಪತ್ತಿಯು ಹೇಗಾದೀತು? ಏನುಮಾಡಿದರೆ ಮಕ್ಕಳಾಗುತ್ತವೆ?

೨೦. ಅದನ್ನು ತಿಳಿದು ದಾನ, ವ್ರತ, ತೀರ್ಥಸೇವೆ, ಯಾಗ ಯಾವುದನ್ನಾದರೂ ನಿಶ್ಚಯವಾಗಿ ಮಾಡುತ್ತೇನೆ.

೨೧. ಮಗನನ್ನು ಹೊಂದಲು ಅಪೇಕ್ಷಿಸುವ ಆ ರಾಜನಿಗೆ ಅದಕ್ಕೆ ತಕ್ಕ ಮಾತನ್ನು ಆ ಋಷಿಯು ಹೇಳಿದನು.

೨೨. ಮಕ್ಕಳನ್ನು ಹೊಂದಲಪೇಕ್ಷಿಸುವವನಿಗೆ ವಿಷ್ಣುವಿನ ಪ್ರಸಾದ, ಗೋಸೇವೆ, ಶಿವನ ಪ್ರಸಾದ ಇವು ಮೂರೂ ಇವೆ.

೨೩. ಆದ್ದರಿಂದ ಬಾಲ, ಮುಖ, ಕೊಂಬು, ಬೆನ್ನುಗಳನ್ನು ದೇವತೆಗಳು ಆಶ್ರಯಿಸಿಕೊಂಡು ಇರುವ ದೇವಶರೀರವಾದ ಗೋವನ್ನು ಪೂಜೆಮಾಡು.

ಸಾ ತುಷ್ಟಾ ದಾಸ್ಯತಿ ಕ್ಷಿಪ್ರಂ ವಾಂಛಿತಂ ಧರ್ಮಸಂಯುತಂ ।
ಏವಂ ವಿದಿತ್ವಾ ಗೋಪೂಜಾಂ ವಿಧೇಹಿ ತ್ವಮೃತಂಭರ ॥ ೨೪ ॥

ಯೋ ವೈ ನಿತ್ಯಂ ಪೂಜಯತಿ ಗಾಂ ಗೇಹೇ ಯವಸಾದಿಭಿಃ ।
ತಸ್ಯ ದೇವಾಶ್ಚ ಪಿತರೋ ನಿತ್ಯಂ ತೃಪ್ತಾ ಭವಂತಿ ಹಿ ॥ ೨೫ ॥

ಯೋ ವೈ ಗವಾಹ್ನಿಕಂ ದದ್ಯಾನ್ನಿಯಮೇನ ಶುಭವ್ರತಃ ।
ತೇನ ಸತ್ಯೇನ ತಸ್ಯ ಸ್ಯುಸ್ಸರ್ವೇ ಪೂರ್ಣಾ ಮನೋರಥಾಃ ॥ ೨೬ ॥

ತೃಷಿತಾ ಗೌರ್ಗೃಹೇ ಬದ್ಧಾ ಗೇಹೇ ಕನ್ಯಾ ರಜಸ್ವಲಾ ।
ದೇವತಾಶ್ಚ ಸನಿರ್ಮಾಲ್ಯಾ ಹಂತಿ ಪುಣ್ಯಂ ಪುರಾಕೃತಂ ॥ ೨೭ ॥

ಯೋ ವೈ ಗಾಂ ಪ್ರತಿಷಿಧ್ಯೇತ ಚರಂತೀಂ ಸ್ವಂ ತೃಣಂ ನರಃ ।
ತಸ್ಯ ಪೂರ್ವೇ ಚ ಪಿತರಃ ಕಂಪಂತೇ ಪತನೋನ್ಮುಖಾಃ ॥ ೨೮ ॥

---

೨೪. ಆ ಗೋವು ತೃಪ್ತಿಹೊಂದಿ ಶೀಘ್ರದಲ್ಲಿಯೇ ಅನುಗ್ರಹಿಸುತ್ತದೆ. ಇದನ್ನು ತಿಳಿದು-ಗೋಪೂಜೆಯನ್ನು ಮಾಡು.

೨೫. ಯಾವನು ನಿತ್ಯವೂ ಮನೆಯಲ್ಲಿ ಹುಲ್ಲು ಮೊದಲಾದುವುಗಳಿಂದ ಗೋಪೂಜೆಮಾಡುತ್ತಾನೋ ಅವನಿಗೆ ದೇವತೆಗಳು ಪಿತೃಗಳು ನಿತ್ಯವೂ ತೃಪ್ತರಾಗಿರುತ್ತಾರೆ.

೨೬. ಯಾವನು ದಿನವೂ ಹಸುವಿಗೆ ಕಬಳವನ್ನು ನಿಯಮದಿಂದ ಕೊಡುತ್ತಾನೆಯೋ ಅವನಿಗೆ ಎಲ್ಲಾ ಇಷ್ಟಾರ್ಥಗಳೂ ಲಭಿಸುತ್ತವೆ.

೨೭. ಹಸಿದ ಗೋವನ್ನು ಮನೆಯಲ್ಲಿ ಕಟ್ಟಿದ್ದರೂ, ಮನೆಯಲ್ಲಿರುವ ಕನ್ಯೆಯು ಮುಟ್ಟಾದರೂ, ದೇವತೆಗಳು ನಿರ್ಮಾಲ್ಯದಿಂದಿದ್ದರೂ, ಅವನ ಪೂರ್ವದ ಪುಣ್ಯವನ್ನು ನಾಶಮಾಡುತ್ತಾರೆ.

೨೮. ಯಾವನು ತನ್ನ ಹುಲ್ಲನ್ನು ಮೇಯುವ ಹಸುವನ್ನು ಓಡಿಸುತ್ತಾನೋ ಅವನ ಪೂರ್ವಿಕರಾದ ಪಿತೃಗಳು ಕೆಳಗೆ ಬೀಳುವುದಕ್ಕೆ ಸಿದ್ಧರಾಗಿ ನಡುಗುತ್ತಿರುರುತ್ತಾರೆ.

ಯೋ ವೈ ತಾಡಯತೇ ಯಷ್ಟ್ಯಾ ಧೇನುಂ ಮರ್ತ್ಯೋ ವಿಮೂಢಧೀಃ ।
ಧರ್ಮರಾಜಸ್ಯ ನಗರೇ ಸ ಯಾತಿ ಕರವರ್ಜಿತಃ ॥ ೨೯ ॥

ಯೋ ವೈ ದಂಶಾನ್ವಾರಯತಿ ತಸ್ಯ ಪೂರ್ವೇ ಕೃತಾರ್ಥಕಾಃ ।
ನೃತ್ಯಂತ್ಯತ್ಯುತ್ಸವಾದಸ್ಮಾನ್ತಾರಯಿಷ್ಯತಿ ಭಾಗ್ಯವಾನ್ ॥ ೩೦ ॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಜನಕಸ್ಯ ಪುರಾವೃತ್ತಂ ಧರ್ಮರಾಜಪುರೇಽದ್ಭುತಂ ॥ ೩೧ ॥

ಏಕದಾ ಜನಕೋ ರಾಜಾ ಯೋಗೇನ ತನುಮತ್ಯಜತ್ ।
ತದಾ ವಿಮಾನಂ ಸಂಪ್ರಾಪ್ತಂ ಕಿಂಕಿಣೀಜಾಲಭೂಷಿತಂ ॥ ೩೨ ॥

ತದಾರುಹ್ಯ ಗತೋ ರಾಜಾ ಸೇವಕೈ ರೂಢದೇಹವಾನ್ ।
ಮಾರ್ಗೇ ಜಗಾಮ ಧರ್ಮಸ್ಯ ಸಂಯಮಿನ್ಯಾಃ ಪುರೋಂತಿಕೇ ॥ ೩೩ ॥

---

೨೯. ಕೋಲಿನಿಂದ ಹಸವನ್ನು ಹೊಡೆದರೆ ಅವನು ಯಮಪಟ್ಟಣಕ್ಕೆ ಕೈಯಿಲ್ಲದೆ ಹೋಗುತ್ತಾನೆ.

೩೦. ಹಸುವಿನ ಮೇಲಿನ ನೊಣಗಳನ್ನು ಓಡಿಸಿದರೆ ಅವನ ಪೂರ್ವಿಕರು ಕೃತಾರ್ಥರಾಗಿ, ಇವನು ನಮ್ಮನ್ನು ನರಕದಿಂದುದ್ಧಾರಮಾಡುತ್ತಾನೆ ಎಂದು ಕುಣಿಯುತ್ತಾರೆ.

೩೧. ಧರ್ಮರಾಜನ ನಗರದಲ್ಲಿ ಜನಕನಿಗುಂಟಾದ ಒಂದು ಪೂರ್ವಕಥೆಯನ್ನು ಹೇಳುತ್ತೇನೆ. ಕೇಳು.

೩೨. ಒಂದುಸಾರಿ ಜನಕಚಕ್ರವರ್ತಿಯು ಯೋಗದಿಂದ ದೇಹವನ್ನು ಬಿಡಲು ಒಂದು ಉತ್ತಮವಾದ ವಿಮಾನವು ಬಂದಿತು.

೩೩. ಸೇವಕರು ಆ ವಿಮಾನಕ್ಕೆ ಹತ್ತಿಸಲು, ಅದರಲ್ಲಿ ಕುಳಿತು ಸಂಯಮಿನೀ ಎಂಬ ಯಮನ ಪಟ್ಟಣದ ದಾರಿಯಲ್ಲಿ ಹೊರಟನು.

ತದಾ ನರಕಕೋಟೀಷು ಪೀಡ್ಯಂತೇ ಪಾಪಕಾರಿಣಃ ।
ಜನಕಸ್ಯಾಂಗಪವನಂ ಪ್ರಾಪ್ಯ ಸೌಖ್ಯಂ ಪ್ರಪೇದಿರೇ ॥ ೩೪ ॥

ನಿರಯೇ ಪಾಪಜಾ ಪೀಡಾ ಜಾತೈಷಾಂ ಸುಖಕಾರಿಣೀ ।
ಮಹದ್ದುಃಖಂ ತದಾ ನಷ್ಟಂ ಜನಕಸ್ಯಾಂಗವಾಯುನಾ ॥ ೩೫ ॥

ತದಾ ತಂ ನಿರ್ಗತಂ ದೃಷ್ಟ್ವಾ ಜಂತವಃ ಪಾಪಪೀಡಿತಾಃ ।
ಅತ್ಯಂತಂ ಚುಕ್ರುಶುರ್ಭೀತಾಸ್ತದ್ವಿಯೋಗಮನಿಚ್ಛವಃ ॥ ೩೬ ॥

ಊಚುಸ್ತೇ ಕರುಣಾಂ ವಾಚಂ ಮಾ ಗಚ್ಛ ಸುಕೃತಿನ್ನಿತಃ ।
ತ್ವದಂಗವಾಯುಸಂಸ್ಪರ್ಶಾತ್ಸುಖಿನಸ್ಸ್ಯಾಮ ಪೀಡಿತಾಃ ॥ ೩೭ ॥

ಇತಿ ವಾಕ್ಯಂ ಸಮಾಕರ್ಣ್ಯ ರಾಜಾ ಪರಮಧಾರ್ಮಿಕಃ ।
ಮಾನಸೇ ಚಿಂತಯಾಮಾಸ ಕರುಣಾಪೂರಪೂರಿತೇ ॥ ೩೮ ॥

ಚೇನ್ಮತ್ತಃ ಪ್ರಾಣಿನಾಂ ಸೌಖ್ಯಂ ಭವೇದಿಹ ತದಾ ಪುನಃ ।
ಅತ್ರೈವ ಚ ಪುರೇ ಸ್ಥಾಸ್ಯೇ ಸ್ವರ್ಗ ಏಷ ಮನೋರಮಃ ॥ ೩೯ ॥

---

೩೪. ಆಗ ಅನೇಕ ನರಕಗಳಲ್ಲಿ ಬಿದ್ದಿದ್ದವರು ಈತನ ಅಂಗಸಂಪರ್ಕದ ಗಾಳಿಯಿಂದ ಸೌಖ್ಯವನ್ನು ಹೊಂದಿದರು.

೩೫. ಆ ನರಕದಲ್ಲಿ ಬಾಯಾರಿಕೆಯು ಹೋಯಿತು. ಆ ಗಾಳಿಯಿಂದ ನರಕದ ದುಃಖವೂ ಶಮನವಾಯಿತು.

೩೬. ಆ ಪಾಪಿಗಳು ಅವನು ಹೋದುದನ್ನು ನೋಡಿ ಅವನ ವಿಯೋಗದಿಂದ ದುಃಖಗೊಂಡರು.

೩೭. ಅವರು ದೀನತೆಯಿಂದ ಎಲೈ! ಪುಣ್ಯಶಾಲಿಯೇ, ಇಲ್ಲಿಂದ ನೀನು ಹೋಗಬೇಡ. ನಮಗೆ ದುಃಖವಾಗುತ್ತದೆ; ಎಂದು ಅಳುತ್ತ ಹೇಳಿದರು.

೩೮. ಈ ಮಾತನ್ನು ಕೇಳಿ ಆ ಧಾರ್ಮಿಕನು ದುಃಖಗೊಂಡು ಮನಸ್ಸಿನಲ್ಲಿ ಚಿಂತಿಸಿದನು.

೩೯. ನನ್ನಿಂದ ಪ್ರಾಣಿಗಳಿಗೆ ಸೌಖ್ಯವುಂಟಾಗುವ ಪಕ್ಷದಲ್ಲಿ ಇಲ್ಲಿಯೇ ಇರುತ್ತೇನೆ. ಇದೇ ನನಗೆ ಸ್ವರ್ಗವು.

ಏವಂ ಕೃತ್ವಾ ನೃಪಸ್ತತ್ರ ತತ್ರೈವ ನಿರಯಾಗ್ರತಃ ।
ವಿಧದತ್ಪ್ರಾಣಿನಾಂ ಸೌಖ್ಯಮನುಕಂಪಿತಮಾನಸಃ ॥ ೪೦ ॥

ತತ್ರ ಧರ್ಮಸ್ತು ಸಂಪ್ರಾಪ್ತೋ ನಿರಯದ್ವಾರಿ ದುಃಖದೇ ।
ಕಾರಯನ್ಯಾತನಾಸ್ತೀವ್ರಾ ನಾನಾಪಾತಕಕಾರಿಣಾಂ ॥ ೪೧ ॥

ಸ ತಂ ದದರ್ಶ ರಾಜಾನಂ ಜನಕಂ ದ್ವಾರಸಂಸ್ಥಿತಂ ।
ವಿಮಾನೇನ ಮಹಾಪುಣ್ಯಕಾರಿಣಂ ದಯಯಾ ಯುತಂ ॥ ೪೨ ॥

ತಮುವಾಚ ಪ್ರೇತಪತಿರ್ಜನಕಂ ಸ ಹಸನ್ಗಿರಾ ।
ರಾಜನ್ಕುತಸ್ತ್ವಂ ಸಂಪ್ರಾಪ್ತಸ್ಸರ್ವಧರ್ಮಶಿರೋಮಣಿಃ ॥ ೪೩ ॥

ಏತತ್ಸ್ಥಾನಂ ತ್ವಘವತಾಂ ದುಷ್ಟಾನಾಂ ಪ್ರಾಣಘಾತಿನಾಂ ।
ನಾಯಾಂತಿ ಪುರುಷಾ ಭೂಪ ತ್ವಾದೃಶಾಃ ಪುಣ್ಯಕಾರಿಣಃ ॥ ೪೪ ॥

ಅತ್ರಾಯಾಂತಿ ನರಾಸ್ತೇ ವೈ ಯೇ ಪರದ್ರೋಹತತ್ಪರಾಃ ।
ಪರಾಪವಾದನಿರತಾಃ ಪರದ್ರವ್ಯಪರಾಯಣಾಃ ॥ ೪೫ ॥

---

೪೦. ದಯೆಯಿಂದ ಆ ಪ್ರಾಣಿಗಳಿಗೆ ಸೌಖ್ಯವನ್ನುಂಟುಮಾಡುತ್ತ ಅಲ್ಲಿ ನರಕದ ಎದುರಿನಲ್ಲಿಯೇ ಇದ್ದನು.

೪೧. ಅಲ್ಲಿಗೆ ನಾರಕಿಗಳಿಗೆ ಅನೇಕಬಗೆಯಾದ ಯಾತನೆಗಳನ್ನು ವಿಧಿಸುತ್ತಾ ಯಮಧರ್ಮರಾಜನು ಬಂದನು.

೪೨.- ಮಹಾಪುಣ್ಯಶಾಲಿಯಾದ, ದಯಾವಂತನಾದ, ವಿಮಾನದಲ್ಲಿ ನರಕದ ಬಾಗಿಲಿನಲ್ಲಿ ನಿಂತಿರುವ ಜನಕನನ್ನು ಆ ಯಮನು ನೋಡಿದನು.

೪೩. ಆಗ ಯಮನು ಎಲೈ! ರಾಜನೇ, ನೀನು ಧರ್ಮಿಷ್ಠರಲ್ಲಿ ಶ್ರೇಷ್ಠನು. ಇಲ್ಲೇಕೆ ಬಂದೆ? ಎಂದನು.

೪೪. ಈ ಜಾಗವು ಘಾತಕರು, ದುಷ್ಟರು, ಪ್ರಾಣಾಪಹಾರಿಗಳು ಇವರಿಗೆ. ನಿನ್ನಂತಹ ಪುಣ್ಯಕಾರಿಗಳು ಇಲ್ಲಿ ಬರಬಾರದು.

೪೫. ಪರದ್ರೋಹಿಗಳು, ಪರನಿಂದಕರು, ಪರದ್ರವ್ಯಾಪಹಾರಿಗಳು ಬರತಕ್ಕ ಜಾಗ.

ಯೋ ವೈ ಕಳತ್ರಂ ಧರ್ಮಿಷ್ಠಂ ನಿಜಸೇವಾಪರಾಯಣಂ ।
ಅಪರಾಧಾದೃತೇ ಜಹ್ಯಾತ್ಸ ನರೋಽತ್ರ ಸ ಮಾವ್ರಜೇತ್ ॥ ೪೬ ॥

ಮಿತ್ರಂ ವಂಚಯತೇ ಯಸ್ತು ಧನಲೋಭೇನ ಲೋಭಿತಃ ।
ಆಗತ್ಯಾತ್ರ ನರಃ ಪೀಡಾಂ ಮತ್ತಃ ಪ್ರಾಪ್ನೋತಿ ದಾರುಣಾಂ ॥ ೪೭ ॥

ಯೋ ರಾಮಂ ಮನಸಾ ವಾಚಾ ಕರ್ಮಣಾ ದಂಭತೋಽಪಿ ವಾ ।
ದ್ವೇಷಾದ್ವಾ ಚೋಪಹಾಸಾದ್ವಾ ನ ಸ್ಮರತ್ಯೇವ ಮೂಢಧೀಃ ॥ ೪೮ ॥

ತಂ ಬಧ್ನಾಮಿ ಪುನಸ್ತ್ವೇಷು ನಿಕ್ಷಿಪ್ಯ ಕ್ಲಪಯಾಮಿ ಚ ।
ಯೈಃಸ್ಮೃತೋ ವೈ ರಮಾನಾಥೋ ನರಕಕ್ಲೇಶವಾರಕಃ ॥ ೪೯ ॥

ತೇ ಮತ್ಸ್ಥಾನಂ ವಿಹಾಯಾಶು ವೈಕುಂಠಾಖ್ಯಂ ಪ್ರಯಾಂತ್ಯಹೋ ।
ತಾವತ್ಪಾಪಂ ಮನುಷ್ಯಾಣಾಮಂಗೇಷು ನೃಪ ತಿಷ್ಠತಿ ॥ ೫೦ ॥

ಯಾವದ್ರಾಮಂ ರಸನಯಾ ನ ಗೃಹ್ಣಾತಿ ಸುದುರ್ಮತಿಃ ।
ಮಹಾಪಾಪಕರಾ ರಾಜನ್ಯೇ ಭವಂತಿ ಮಹಾಮತೇ ॥ ೫೧ ॥

---

೪೬. ಧರ್ಮದಿಂದಿರುವ ತನ್ನ ಸೇವೆಯಲ್ಲಿ ಆಸಕ್ತಳಾದ ಹೆಂಡತಿಯನ್ನು ಅಪರಾಧವಿಲ್ಲದೆ ಯಾವನು ಬಿಡುತ್ತಾನೋ ಅವನು ಬರತಕ್ಕ ಜಾಗ.

೪೭. ಧನದ ಆಶೆಯಿಂದ ಮಿತ್ರರನ್ನು ವಂಚಿಸುವವನು ಇಲ್ಲಿ ಬಂದು ನನ್ನಿಂದ ಪೀಡೆಯನ್ನು ಅನುಭವಿಸುತ್ತಾನೆ.

೪೮-೪೯. ರಾಮನನ್ನು ಮನೋವಾಕ್ಕಾಯಗಳಿಂದಲಾಗಲಿ, ಡಂಭಾಚಾರದಿಂದಲಾಗಲಿ, ದ್ವೇಷ ಹಾಸ್ಯದಿಂದಲಾಗಲಿ ಯಾವನು ಸ್ಮರಿಸುವುದಿಲ್ಲವೋ ಅವನನ್ನು ಇಲ್ಲಿ ಹಾಕಿ ತೊಂದರೆಕೊಡುತ್ತೇನೆ. ಯಾರು ಶ್ರೀರಾಮನನ್ನು ಸ್ಮರಿಸುತ್ತಾರೋ ಅವರು ನನ್ನ ಸ್ಥಾನವನ್ನು ಬಿಟ್ಟು ವೈಕುಂಠಕ್ಕೆ ಹೋಗುತ್ತಾರೆ.

೫೦. ಎಲ್ಲಿಯವರಿಗೂ ಮನುಷ್ಯನು ರಾಮಸ್ಮರಣೆಮಾಡುವುದಿಲ್ಲವೋ ಅಲ್ಲಿಯವರಿಗೂ ಅವನ ಅಂಗದಲ್ಲಿ ಪಾಪಗಳಿರುತ್ತವೆ.

೫೧-೫೨. ಮಹಪಾಪಿಗಳಾದವರನ್ನು ನನ್ನ ಆಳುಗಳು ಇಲ್ಲಿಗೆ ಕರೆತರುತ್ತಾರೆ.

ತಾನಾನಯಂತಿ ಮದ್ಭೃತ್ಯಾಸ್ತ್ವಾದೃಶಾನ್ದ್ರಷ್ಟುಮಕ್ಷಮಾಃ ।
ತಸ್ಮಾದ್ಗಚ್ಛ ಮಹಾರಾಜ ಭುಂಕ್ಷ್ವ ಭೋಗಾನನೇಕಶಃ ॥ ೫೨ ॥

ವಿಮಾನವರಮಾರುಹ್ಯ ಭುಂಕ್ಷ್ವ ಪುಣ್ಯಮುಪಾರ್ಜಿತಂ ।
ಇತಿವಾಕ್ಯಂ ಸಮಾಕರ್ಣ್ಯ ಧರ್ಮರಾಜಸ್ಯ ತತ್ಪತೇಃ ॥
ಉವಾಚ ಧರ್ಮರಾಜಾನಂ ಕರುಣಾಪೂರಪೂರಿತಃ ॥ ೫೩ ॥

॥ ಜನಕ ಉವಾಚ ॥

ಅಹಂ ಗಚ್ಛಾಮಿ ನೋ ನಾಥ ಜೀವಾನಾಮನುಕಂಪಕಃ ।
ಮದಂಗವಾಯುನಾ ಹ್ಯೇತೇ ಸುಖಂ ಪ್ರಾಪ್ತಾಸ್ತ್ವಸಂಸ್ಥಿತಾಃ ॥ ೫೪ ॥

ಏತಾನ್ ಮುಂಚಸಿ ಚೇದ್ರಾಜನ್ ಸರ್ವಾನ್ವೈ ನಿರಯಸ್ಥಿತಾನ್ ।
ತತೋ ಗಚ್ಛಾಮಿ ಸುಖಿತಃ ಸ್ವರ್ಗಂ ಪುಣ್ಯಜನಾಶ್ರಿತಂ ॥ ೫೫ ॥

---

ನಿನ್ನಂತಹವರನ್ನು ನೋಡಲು ಕೂಡ ಅಸಮರ್ಥರು. ಆದ್ದರಿಂದ ನೀನು ಪುಣ್ಯ ಲೋಕಗಳಿಗೆ ಹೋಗಿ ಇಷ್ಟವಾದ ಭೋಗಗಳನ್ನು ಅನುಭವಿಸು.

೫೩. ವಿಮಾನವನ್ನು ಹತ್ತಿಹೋಗಿ ಅಲ್ಲಿ ಬೇಕಾದ ಭೋಗಗಳನ್ನು ಅನುಭವಿಸು ಎಂದನು. ಧರ್ಮರಾಜನ ಈ ಮಾತನ್ನು ಕೇಳಿ ದಯಾಳುವಾದ ಜನಕನು ಇಂತೆಂದನು.

೫೪. ಜನಕನು ಹೇಳಿದನು:—ನನ್ನ ಅಂಗಸ್ಪರ್ಶದಿಂದ ಬಂದ ವಾಯುವು ಇವರಿಗೆ ಸುಖವನ್ನು ಉಂಟುಮಾಡುತ್ತಿರುವುದರಿಂದ ಪ್ರಾಣಿಗಳಲ್ಲಿ ಅನುಕಂಪನಾದ ನಾನು ಅಲ್ಲಿಗೆ ಹೋಗುವುದಿಲ್ಲ.

೫೫. ಇವರನ್ನು ನೀನು ನರಕದಿಂದ ಬಿಟ್ಟರೆ ನಾನು ಸುಖವಾಗಿ ಸ್ವರ್ಗಕ್ಕೆ ಹೋಗುತ್ತೇನೆ.

॥ ಜಾಬಾಲಿರುವಾಚ ॥

ಇತಿವಾಕ್ಯಮಥಾ ಶ್ರುತ್ಯ ಜನಕಂ ಪ್ರತ್ಯುವಾಚ ಸಃ ।
ಪ್ರತ್ಯೇಕಂ ನಿರ್ದಿಶನ್ಜೀವಾನ್ನಿರಯಸ್ಥಾನನೇಕಶಃ ॥ ೫೬ ॥

॥ ಧರ್ಮರಾಜ ಉವಾಚ ॥

ಅಯಂ ಮಿತ್ರಕಳತ್ರಂ ವೈ ವಿಶ್ವಸ್ತಮನುಜಗ್ಮಿವಾನ್ ।
ತಸ್ಮಾದೇನಂ ಲೋಹಶಂಕೌ ವರ್ಷಾಯುತಮಪೀಪಚಂ ॥ ೫೭ ॥

ಪಶ್ಚಾದೇನಂ ಶೂಕರಾಣಾಂ ಯೋನೌ ನಿಕ್ಷಿಪ್ಯ ದೋಷಿಣಂ ।
ಮಾನುಷೇಷ್ವವತಾರ್ಯೋಽಯಂ ಷಂಡಚಿಹ್ನೇನ ಚಿಹ್ನಿತಃ ॥ ೫೮ ॥

ಅನೇನ ಪರದಾರಾಶ್ಚ ಬಲಾದಾಲಿಂಗಿತಾ ಮುಹುಃ ।
ತಸ್ಮಾದಯಂ ಪಚ್ಯತೇಽತ್ರ ರೌರವೇ ಶತಹಾಯನಂ ॥ ೫೯ ॥

ಅಯಂ ತು ಪರಕೀಯಂ ಸ್ವಂ ಮುಷಿತ್ವಾ ಬುಭುಜೇ ಕುಧೀಃ ।
ತಸ್ಮಾದಸ್ಯ ಕರೌ ಛಿತ್ವಾ ಪಚೇಯಂ ಪೂಯಶೋಣಿತೇ ॥ ೬೦ ॥

---

೫೬. ಜಾಬಾಲಿಯು ಹೇಳಿದನು :—ಈ ಮಾತನ್ನು ಕೇಳಿ ಜನಕನಿಗೆ ಧರ್ಮರಾಜನು ಒಂದೊಂದು ನರಕದಲ್ಲೂ ಇರುವ ಪ್ರಾಣಿಗಳನ್ನು ತೋರಿಸುತ್ತ ಇಂತೆಂದನು.

೫೭-೫೮. ಧರ್ಮರಾಜನು ಹೇಳಿದನು :—ಇವನು ವಿಶ್ವಾಸಹೊಂದಿದ ಮಿತ್ರನ ಹೆಂಡತಿಯ ಬಳಿಗೆ ಹೋದವನು. ಆದ್ದರಿಂದ ಇವನನ್ನು ಉಕ್ಕಿನ ಸಲಾಕೆಯಲ್ಲಿ ಹತ್ತುಸಾವಿರ ವರ್ಷಗಳು ಹಾಕಿದ್ದೇನೆ. ಅನಂತರ ಹಂದಿಯಲ್ಲಿ ಅವತರಿಸುವಂತೆ ಮಾಡುತ್ತೇನೆ. ಆಮೇಲೆ ಮನುಷ್ಯರಲ್ಲಿ ಹುಟ್ಟಬೇಕು. ಹುಟ್ಟಿಯೂ ಷಂಡನಾಗಿರುತ್ತಾನೆ.

೫೯. ಇವನು ಪರರ ಹೆಂಡಿರನ್ನು ಅನೇಕರನ್ನು ಕೆಡಿಸಿದ್ದಾನೆ. ಆದ್ದರಿಂದ ಇವನನ್ನು ರೌರವನರಕದಲ್ಲಿ ನೂರು ವರ್ಷಗಳು ಹಾಕಿದ್ದೇನೆ.

೬೦. ಇವನು ಪರರ ಹಣವನ್ನು ಕದ್ದು ಅನುಭವಿಸಿದನು. ಆದ್ದರಿಂದ ಇವನ ಕೈಗಳನ್ನು ಕತ್ತರಿಸಿ ಕೀವುಗಳಿರುವ ನರಕದಲ್ಲಿ ಬೇಯಿಸುತ್ತೇನೆ.

ಅಯಂ ಸಾಯಂತನಂ ಪ್ರಾಪ್ತಮತಿಥಿಂ ಕ್ಷುಧಯಾರ್ದಿತಂ ।
ವಾಣ್ಯಾಪಿ ನಾಽಕರೋತ್ತಸ್ಯ ಪೂಜನಂ ಸ್ವಾಗತಂ ನ ಚ　　॥ ೬೧ ॥

ತಸ್ಮಾದಯಂ ಪಾತನೀಯಸ್ತಾಮಿಸ್ರೇಂಧೇನ ಪೂರಿತೇ ।
ಭ್ರಮರೈಃ ಪೀಡಿತೋ ಯಾತು ಯಾತನಾಂ ಶತಹಾಯನಾಂ　　॥ ೬೨ ॥

ಅಯಂ ತಾವತ್ಪರಸ್ಯೋಚ್ಚೈರ್ನಿಂದಾಂ ಕುರ್ವನ್ನ ಲಜ್ಜಿತಃ ।
ಅಯಮಪ್ಯಶೃಣೋತ್ಕರ್ಣೌ ಪ್ರೇರಯನ್ಸುಹುಶಸ್ತು ತಾಂ　　॥ ೬೩ ॥

ತಸ್ಮಾದಿಮಾವಂಧಕೂಪೇ ಪತಿತೌ ದುಃಖದುಃಖಿತೌ ।
ಅಯಂ ಮಿತ್ರಧ್ರುಗುದ್ವಿಗ್ನಃ ಪಚ್ಯತೇ ರೌರವೇ ಭೃಶಂ　　॥ ೬೪ ॥

ತಸ್ಮಾದೇತಾನ್ ಪಾಪಭೋಗಾನ್ ಕಾರಯಿತ್ವಾ ವಿಮೋಚಯೇ ।
ತ್ವಂ ಗಚ್ಛ ನರಶಾರ್ದೂಲ ಪುಣ್ಯರಾಶಿವಿಧಾಯಕಃ　　॥ ೬೫ ॥

---

೬೧. ಇವನು ಸಾಯಂಕಾಲದಲ್ಲಿ ಬಂದ ಅತಿಥಿಗೆ ಉಪಚಾರಮಾಡಲಿಲ್ಲ. ಬಾಯಿಂದಲೂ ಒಂದು ಒಳ್ಳೆಯ ಮಾತನ್ನಾಡಲಿಲ್ಲ.

೬೨. ಆದ್ದರಿಂದ ಇವನನ್ನು ಅಂಧಕಾರ ನರಕದಲ್ಲಿ ಹಾಕುತ್ತೇನೆ. ದುಂಬಿಗಳಿಂದ ಕಚ್ಚಿಸಿಕೊಂಡು ನೂರು ವರ್ಷಗಳು ಅಲ್ಲಿರಲಿ.

೬೩. ಇವನು ಪರನಿಂದೆಯನ್ನು ಲಜ್ಜೆಪಡದೆ ಮಾಡುತ್ತಿದ್ದನು. ಇವನು ಅದನ್ನು ಬಗೆಬಗೆಯಾಗಿ ಕೇಳುತ್ತಿದ್ದನು.

೬೪. ಆದ್ದರಿಂದ ಇವರಿಬ್ಬರನ್ನೂ ಅಂಧಕೂಪದಲ್ಲಿ ಹಾಕಿದ್ದೇನೆ. ಇವನು ಮಿತ್ರದ್ರೋಹಿಯು. ರೌರವದಲ್ಲಿ ಹಾಕಿ ಬೇಯಿಸುತ್ತೇನೆ.

೬೫. ಆದ್ದರಿಂದ ಈ ಭೋಗಗಳನ್ನು ಅನುಭವಿಸಿದ ಮೇಲೆ ಬಿಟ್ಟುಬಿಡುತ್ತೇನೆ. ನೀನು ಹೋಗು. ಪುಣ್ಯದ ರಾಶಿಯನ್ನು ಸಂಪಾದಿಸಿದ್ದೀಯೆ.

॥ ಜಾಬಾಲಿರುವಾಚ ॥

ಏವಂ ಸ ನಿರ್ದಿಶ್ಯ ಜೀವಾಂಸ್ತೂಷ್ಣೀಮಾಸಾಘಕಾರಿಣಃ ।
ಪ್ರೋವಾಚ ರಾಮಭಕ್ತೋಽಸೌ ಕರುಣಾಪೂರಿತೇಕ್ಷಣಃ ॥ ೬೬ ॥

॥ ಜನಕ ಉವಾಚ ॥

ಕಥಂ ನಿರಯನಿರ್ಮುಕ್ತಿರ್ಜೀವಾನಾಂ ದುಃಖಿನಾಂ ಭವೇತ್ ।
ತದತ್ರ ಕಥಯ ತ್ವಂ ವೈ ಯತ್ಕೃತ್ವಾ ಸುಖಮಾಪ್ನುಯುಃ ॥ ೬೭ ॥

॥ ಧರ್ಮರಾಜ ಉವಾಚ ॥

ನೈಭಿರಾರಾಧಿತೋ ವಿಷ್ಣುರ್ನೈಭಿಸ್ತಸ್ಯ ಕಥಾ ಶ್ರುತಾ ।
ಕಥಂ ನಿರಯನಿರ್ಮುಕ್ತಿರ್ಭವೇದ್ವೈ ಪಾಪಕಾರಿಣಾಂ ॥ ೬೮ ॥

ಯದಿ ತ್ವಂ ಮೋಚಯಸ್ಯೇತಾನ್ ಮಹಾಪಾಪಕರಾನಪಿ ।
ತದರ್ಪಯ ಮಹಾರಾಜ ಪುಣ್ಯಂ ತತ್ಕಥಯಾಮ್ಯತಃ ॥ ೬೯ ॥

ಏಕದಾ ಪ್ರಾತರುತ್ಥಾಯ ಶುದ್ಧಭಾವೇನ ಚೇತಸಾ ।
ಧ್ಯಾತಃ ಶ್ರೀ ರಘುನಾಥೋಽಸೌ ಮಹಾಪಾಪಹರಾಭಿದಃ ॥ ೭೦ ॥

---

೬೬. ಜಾಬಾಲಿಯು ಹೇಳಿದನು :— ಹೀಗೆ ಪಾಪಿಗಳನ್ನು ತೋರಿಸಿ ಯಮನು ಸುಮ್ಮನಾದನು. ರಾಮಭಕ್ತನಾದ ಜನಕನು ಇಂತೆಂದನು.

೬೭. ಜನಕನು ಕೇಳಿದನು :— ದುಃಖಗೊಂಡ ಪ್ರಾಣಿಗಳಿಗೆ ನರಕದಿಂದ ವಿಮೋಚನೆಯು ಹೇಗಾದೀತು? ಅದನ್ನು ಹೇಳು. ಏನು ಮಾಡಿದರೆ ಸುಖಿಗಳಾಗುವರು?

೬೮. ಧರ್ಮರಾಜನು ಹೇಳಿದನು :— ಇವರು ವಿಷ್ಣುವನ್ನು ಪೂಜಿಸಿಲ್ಲ. ಅವನ ಕಥೆಯನ್ನು ಕೇಳಿಯೂ ಇಲ್ಲ. ಹೇಗೆತಾನೆ ಮುಕ್ತಿ ಬಂದೀತು?

೬೯. ಈ ಪಾಪಿಗಳನ್ನು ನೀನು ಬಿಡಿಸಬೇಕೆಂದಿದ್ದರೆ ನಾನು ಹೇಳುವ ಪುಣ್ಯವನ್ನು ಕೊಡು.

೭೦-೭೧. ಒಂದುಸಾರಿ ಬೆಳಿಗ್ಗೆ ಎದ್ದು ಶುದ್ಧವಾದ ಮನಸ್ಸಿನಿಂದ ಪಾಪ

ರಾಮರಾಮೇತಿ ವೈ ಪ್ರೋಕ್ತಂ ತ್ವಯಾಕಸ್ಮಾನ್ನರೋತ್ತಮ ।
ತತ್ಪುಣ್ಯಮರ್ಪಯೈತೇಭ್ಯೋ ಯೇನ ಸ್ಯಾನ್ನಿರಯಾಚ್ಯುತಿಃ ॥ ೭೧ ॥

॥ ಜಾಬಾಲಿರುವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ಧರ್ಮರಾಜಸ್ಯ ಧೀಮತಃ ।
ಪುಣ್ಯಂ ದದೌ ಮಹಾರಾಜ ಆಜನ್ಮಸಮುಪಾರ್ಜಿತಂ ॥ ೭೨ ॥

ಮದಾಜನ್ಮಕೃತೈಃ ಪುಣ್ಯೈ ರಘುನಾಥಾರ್ಚನೋದ್ಭವೈಃ ।
ಏತೇಷಾಂ ನಿರಯಾನ್ಮುಕ್ತಿರ್ಭವತ್ವತ್ರ ಮನೋರಮಾ ॥ ೭೩ ॥

ಏವಂ ಕಥಯತಸ್ತಸ್ಯ ಜೀವಾ ನಿರಯಸಂಸ್ಥಿತಾಃ ।
ತತ್ಕ್ಷಣಾನ್ನಿರಯಾನ್ಮುಕ್ತಾ ಜಾತಾ ದಿವ್ಯವಪುರ್ಧರಾಃ ॥ ೭೪ ॥

ಊಚುಸ್ತೇ ಜನಕಂ ರಾಜಂಸ್ತ್ವತ್ಪ್ರಸಾದಾದ್ವಯಂ ಕ್ಷಣಾತ್ ।
ದುಃಖದಾನ್ನಿರಯಾನ್ಮುಕ್ತಾ ಯಾಮೋ ವೈ ಪರಮಂ ಪದಂ ॥ ೭೫ ॥

---

ತಾರಕನಾದ ಶ್ರೀರಾಮಚಂದ್ರನನ್ನು ರಾಮರಾಮ ಎಂದು ಸ್ಮರಿಸಿದ ಪುಣ್ಯವನ್ನು ಕೊಟ್ಟರೆ ಈ ಪಾಪಿಗಳು ಮುಕ್ತರಾಗುವರು.

೭೨. ಜಾಬಾಲಿಯು ಹೇಳಿದನು :— ಇದನ್ನು ಕೇಳಿ ಜನಕನು ಆ ಜನ್ಮದಲ್ಲಿ ಸಂಪಾದಿಸಿದ್ದ ಪುಣ್ಯವೆಲ್ಲವನ್ನೂ ಕೊಟ್ಟನು.

೭೩. ನಾನು ಜನ್ಮಪ್ರಭೃತಿ ಮಾಡಿರುವ ರಘುನಾಥನ ಪೂಜೆಯ ಧರ್ಮವನ್ನು ಕೊಡುತ್ತೇನೆ. ಅದರಿಂದ ಇವರ ಮುಕ್ತಿಯಾಗಲಿ.

೭೪. ಹೀಗೆ ಹೇಳುತ್ತಿರುವಾಗಲೇ ನರಕದಲ್ಲಿದ್ದ ಪ್ರಾಣಿಗಳು ಮುಕ್ತಿಹೊಂದಿ ದಿವ್ಯವಾದ ಶರೀರವನ್ನು ಹೊಂದಿದರು.

೭೫. ಅವರು ಜನಕನನ್ನು ಕುರಿತು ಎಲೈ! ದೊರೆಯೇ, ನಿನ್ನ ಅನುಗ್ರಹದಿಂದ ದುಃಖಕರವಾದ ಈ ನರಕದಿಂದ ಬಿಡಲ್ಪಟ್ಟು ಪರಮಪದವನ್ನು ಹೊಂದುತ್ತೇವೆ.

ತಾನ್ದೃಷ್ಟ್ವಾ ಸೂರ್ಯಸಂಕಾಶಾನ್ನರಾನ್ನಿರಯನಿಸ್ಸೃತಾನ್ ।
ತುತೋಷ ಚಿತ್ತೇ ಸುಭೃಶಂ ಸರ್ವಭೂತದಯಾರತಃ ॥ ೭೬ ॥

ತೇ ಸರ್ವೇ ಪ್ರಯಯುರ್ಲೋಕಂ ದಿವ್ಯಂ ದೇವೈರಲಂಕೃತಂ ।
ಜನಕಂ ತು ಪ್ರಶಂಸಂತೋ ಮಹಾರಾಜಂ ದಯಾನಿಧಿಂ ॥ ೭೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಸತ್ಯವದಾಖ್ಯಾನಂ
ನಾಮ ತ್ರಿಂಶೋಽಧ್ಯಾಯಃ



---

೭೬. ಆ ನರಕದಿಂದ ಹೊರಟ ಸೂರ್ಯತೇಜಸ್ಸುಳ್ಳ ಅವರನ್ನು ನೋಡಿ ಕೃಪಾಳುವಾದ ಜನಕನು ಬಹು ಸಂತೋಷಪಟ್ಟನು.

೭೭. ಇವರೆಲ್ಲರೂ ಮಹಾರಾಜನಾದ ಜನಕನನ್ನು ಹೊಗಳುತ್ತಾ ದೇವತೆಗಳಿರುವ ದಿವ್ಯಲೋಕಕ್ಕೆ ಹೋದರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಸತ್ಯವದಾಖ್ಯಾನವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ
## ಏಕತ್ರಿಂಶೋಽಧ್ಯಾಯಃ

॥ ಜಾಬಾಲಿರುವಾಚ ॥

ಅಥ ತೇಷು ಪ್ರಯಾತೇಷು ನರಕಸ್ಥೇಷು ವೈ ನೃಷು ।
ರಾಜಾ ಪಪ್ರಚ್ಛ ಕೀನಾಶಂ ಸರ್ವಧರ್ಮವಿದಾಂ ವರಂ ॥ ೧ ॥

॥ ರಾಜೋವಾಚ ॥

ಧರ್ಮರಾಜ ತ್ವಯಾ ಪ್ರೋಕ್ತಂ ಯತ್ಪಾತಕಕರಾ ನರಾಃ ।
ಆಯಾಂತಿ ತವ ಸಂಸ್ಥಾನಂ ನ ಚ ಧರ್ಮಕಥಾರತಾಃ ॥ ೨ ॥

ಮದಾಗಮನಮತ್ರಾಭೂತ್ ಕೇನ ಪಾಪೇನ ಧಾರ್ಮಿಕ ।
ತದ್ವೈ ಕಥಯ ಸರ್ವಂ ಮೇ ಪಾಪಕಾರಣಮಾದಿತಃ ॥ ೩ ॥

---

## ಮೂವತ್ತೊಂದನೆಯ ಅಧ್ಯಾಯವು

೧. ಜಾಬಾಲಿಯು ಹೇಳಿದನು:—ಆ ನರಕದವರೆಲ್ಲರೂ ಹೊರಟುಹೋದ ಮೇಲೆ ಜನಕರಾಜನು ಯಮನನ್ನು ಹೀಗೆಂದು ಕೇಳಿದನು.

೨. ರಾಜನು ಹೇಳಿದನು:—ಎಲೈ! ಧರ್ಮರಾಜನೇ, ಪಾಪಿಗಳೇ ನಿನ್ನ ಆಸ್ಥಾನಕ್ಕೆ ಬರುವರೆಂದೂ ಧರ್ಮದಲ್ಲಿ ಆಸಕ್ತರಾದವರು ಬರುವುದಿಲ್ಲವೆಂದೂ ನೀನು ಹೇಳಿದೆ.

೩. ಆದರೆ ನಾನು ಇಲ್ಲಿಗೆ ಯಾವ ಪಾಪದ ಪರಿಪಾಕದಿಂದ ಬಂದೆ? ಇದನ್ನು ಮೊದಲಿನಿಂದಲೂ ಹೇಳು.

ಇತಿ ಶ್ರುತ್ವಾ ತು ತದ್ವಾಕ್ಯಂ ಧರ್ಮರಾಜಃ ಪರಂತಪಃ ।
ಕಥಯಾಮಾಸ ತಸ್ಯೈವಂ ಯಮಪುರ್ಯಾಗಮಂ ತದಾ ॥ ೪ ॥

॥ ಧರ್ಮರಾಜ ಉವಾಚ ॥

ರಾಜಂಸ್ತ್ವ ಮಹತ್ಪುಣ್ಯಂ ನೈತಾದೃಕ್ಕಸ್ಯ ಭೂತಳೇ ।
ರಘುನಾಥಪದದ್ವಂದ್ವಮಕರಂದಮಧುವ್ರತ ॥ ೫ ॥

ತ್ವತ್ಕೀರ್ತಿಸ್ವರ್ಧುನೀ ಸರ್ವಾನ್ ಪಾಪಿನೋ ಮಲಸಂಯುತಾನ್ ।
ಪುನಾತಿ ಪರಮಾಹ್ಲಾದಕಾರಿಣೀ ದುಷ್ಟತಾರಿಣೀ ॥ ೬ ॥

ತಥಾಪಿ ಪಾಪಲೇಶಸ್ತೇ ವರ್ತತೇ ನೃಪಸತ್ತಮ ।
ಯೇನ ಸಂಯಮಿನೀಪಾರ್ಶ್ವಮಾಗತಃ ಪುಣ್ಯಪೂರಿತಃ ॥ ೭ ॥

ಏಕದಾ ತು ಚರಂತೀಂ ಗಾಂ ವಾರಯಾಮಾಸ ವೈ ಭವಾನ್ ।
ತೇನ ಪಾಪವಿಪಾಕೇನ ನಿರಯದ್ವಾರದರ್ಶನಂ ॥ ೮ ॥

---

೪. ಧರ್ಮರಾಜನು ಆ ಮಾತನ್ನು ಕೇಳಿ ಅವನ ಯಮಪುರಿಯ ಆಗಮನ ವನ್ನು ಕುರಿತು ಮೊದಲಿನಿಂದ ಹೇಳಿದನು.

೫. ಧರ್ಮರಾಜನು ಹೇಳಿದನು:—ರಘುನಾಥನ ಪಾದಾರವಿಂದದಲ್ಲಿ ನಿರತ ನಾದ ಜನಕನೇ, ನೀನು ಬಹು ಪುಣ್ಯವಂತನು. ಇಂತಹ ಪುಣ್ಯವು ಭೂಮಿಯಲ್ಲಿ ಯಾರಿಗೂ ಇಲ್ಲ.

೬. ನಿನ್ನ ಕೀರ್ತಿಯೆಂಬ ಗಂಗಾನದಿಯು ಪಾಪಿಗಳೆಂಬ ಕೊಳಕರನ್ನು ತೊಳೆದು ಪವಿತ್ರರನ್ನಾಗಿ ಮಾಡುತ್ತದೆ.

೭. ಆದರೂ ನಿನಗೆ ಸ್ವಲ್ಪ ಪಾಪಶೇಷವಿದೆ. ಅದರಿಂದಲೇ ಈ ಸಂಯಮಿನೀ ಪಟ್ಟಣದ ಸಮೀಪಕ್ಕೆ ಬಂದಿದ್ದೀಯೆ

೮. ಒಂದುಸಾರಿ ಹುಲ್ಲು ಮೇಯುತ್ತಿದ್ದ ಗೋವನ್ನು ಓಡಿಸಿದೆ. ಆದ್ದರಿಂದ ನೀನು ನರಕದ ಬಾಗಿಲಿನ ದರ್ಶನಮಾಡಬೇಕಾಯಿತು.

ಇದಾನೀಂ ಪಾಪನಿರ್ಮುಕ್ತೋ ಬಹುಪುಣ್ಯಸಮನ್ವಿತಃ ।
ಭುಂಕ್ಷ್ವ ಭೋಗಾನ್ಸುವಿಪುಲಾನ್ನಿಜಪುಣ್ಯಾರ್ಜಿತಾನ್ ಬಹೂನ್ ॥ ೯ ॥

ಏತೇಷಾಂ ಕರುಣಾವಾರ್ಧಿಃ ರಘುನಾಥೋऽ ಸುಖಂ ಹರನ್ ।
ಸಂಯಮಿನ್ಯಾ ಮಹಾಮಾರ್ಗೇ ಪ್ರೇರಯಾಮಾಸ ವೈಷ್ಣವಂ ॥ ೧೦ ॥

ನಾಗಮಿಷ್ಯೋ ಯದಿ ತ್ವಂ ವೈ ಮಾರ್ಗೇಣಾನೇನ ಸುವ್ರತ ।
ಅಭವಿಷ್ಯತ್ಕಥಂ ತ್ವೇಷಾಂ ನಿರಯಾತ್ಪರಿಮೋಚನಂ ॥ ೧೧ ॥

ತ್ವಾದೃಶಾಃ ಪರದುಃಖೇನ ದುಃಖಿತಾಃ ಕರುಣಾಲಯಾಃ ।
ಪ್ರಾಣಿನಾಂ ದುಃಖವಿಚ್ಛೇದಂ ಕುರ್ವಂತ್ಯೇವ ಮಹಾಮತೇ ॥ ೧೨ ॥

॥ ಜಾಬಾಲಿರುವಾಚ ॥

ಏವಂ ವದಂತಂ ಶಮನಂ ಪ್ರಣಮ್ಯ ಸ ದಿವಂ ಗತಃ ।
ದಿವ್ಯೇನ ಸುವಿಮಾನೇನ ಅಪ್ಸರೋಗಣಶೋಭಿನಾ ॥ ೧೩ ॥

---

೯. ಬಹು ಪುಣ್ಯಶಾಲಿಯಾದ ನಿನ್ನಲ್ಲಿದ್ದ ಆ ಪಾಪವು ಹೋಯಿತು. ಆದ್ದರಿಂದ ಬಹು ಪುಣ್ಯಗಳಿಂದ ಸಂಪಾದಿಸಿದ ಲೋಕಗಳನ್ನು ಅನುಭವಿಸು.

೧೦. ಕರುಣಾಮಯನಾದ ರಘುನಾಥನು ಈ ನಾರಕಿಗಳ ವಿಷಯದಲ್ಲಿ ಕೃಪೆ ತೋರಿಸಿ ನಿನ್ನನ್ನು ಈ ಸಂಯಮಿನಿಯ ಪಕ್ಕಕ್ಕೆ ಕಳುಹಿಸಿದನು.

೧೧. ಈ ದಾರಿಯಲ್ಲಿ ನೀನು ಬಾರದಿದ್ದರೆ ಇವರ ಮೋಕ್ಷವು ಹೇಗಾಗುತ್ತಿದ್ದಿತು.

೧೨. ನಿಮ್ಮಂಥವರು ಪರರ ದುಃಖದಿಂದ ದುಃಖಿತರಾಗುತ್ತೀರಿ. ಆದ್ದರಿಂದಲೇ ಪರರ ದುಃಖದ ನಾಶವನ್ನು ಮಾಡುತ್ತೀರಿ.

೧೩. ಜಾಬಾಲಿಯು ಹೇಳಿದನು:—ಹೀಗೆ ಹೇಳಿದ ಯಮನಿಗೆ ನಮಸ್ಕರಿಸಿ ಅಪ್ಸರಸ್ತ್ರೀಯರು ಸೇವಿಸುವ ವಿಮಾನದಿಂದ ಸ್ವರ್ಗಕ್ಕೆ ಹೋದನು.

ತಸ್ಮಾದ್ಗಾವೋಽನಿಶಂ ಪೂಜ್ಯಾ ಮನಸಾಪಿ ನ ಗರ್ಹಯೇತ್ ।
ಗರ್ಹಯನ್ನಿರಯಂ ಯಾತಿ ಯಾವದಿಂದ್ರಾಶ್ಚತುರ್ದಶ ॥ ೧೪ ॥

ತಸ್ಮಾತ್ತ್ವಂ ನೃಪತಿಶ್ರೇಷ್ಠ ಗೋಪೂಜಾಂ ವೈ ಸಮಾಚರ ।
ಸಾ ತುಷ್ಟಾ ದಾಸ್ಯತಿ ಕ್ಷಿಪ್ರಂ ಪುತ್ರಂ ಧರ್ಮಪರಾಯಣಂ ॥ ೧೫ ॥

॥ ಸುಮತಿರುವಾಚ ॥

ತಚ್ಛ್ರುತ್ವಾ ಧೇನುಪೂಜಾಂ ಸ ಪಪ್ರಚ್ಛ ಕಥಮಾದರಾತ್ ।
ಪೂಜನೀಯಾ ಪ್ರಯತ್ನೇನ ಕೀದೃಶಂ ಕುರುತೇ ನರಂ ॥ ೧೬ ॥

ಜಾಬಾಲಿಃ ಕಥಯಾಮಾಸ ಧೇನುಪೂಜಾಂ ಯಥಾವಿಧಿ ।
ಪ್ರತ್ಯಹಂ ವಿಪಿನಂ ಗಚ್ಛೇಚ್ಚಾರಣಾಯ ವ್ರತೀ ತು ಗೋಃ ॥ ೧೭ ॥

ಗವೇ ಯವಾಂಸ್ತು ಸಂಭೋಜ್ಯ ಗೋಮಯಸ್ಥಾನ್ ಸಮಾಹರೇತ್ ।
ಭಕ್ಷಣೀಯಾ ಯವಾಸ್ತೇ ತು ಪುತ್ರಕಾಮೇನ ಭೂಪತೇ ॥ ೧೮ ॥

---

೧೪. ಆದ್ದರಿಂದ ಗೋವುಗಳನ್ನು ಮನಸ್ಸಿನಿಂದಲೂ ನಿಂದಿಸಬಾರದು. ನಿಂದಿಸಿದರೆ ಹದಿನಾಲ್ಕು ಜನ ಇಂದ್ರರಿರುವವರೆಗೆ ನರಕದಲ್ಲಿ ಬೀಳುತ್ತಾರೆ.

೧೫. ಆದ್ದರಿಂದ ಎಲೈ! ರಾಜನೇ, ನೀನು ಗೋಪೂಜೆಯನ್ನು ಮಾಡು. ಆ ಗೋವು ಸಂತೋಷಪಟ್ಟು ಮಕ್ಕಳ ಫಲವನ್ನು ಕೊಡುತ್ತದೆ.

೧೬. ಸಮತಿಯು ಹೇಳಿದನು :—ಅದನ್ನು ಕೇಳಿ ಧೇನುಪೂಜೆಯನ್ನು ಹೇಗೆ ಮಾಡುವುದು? ಪೂಜೆಮಾಡಿದರೆ ಮನುಷ್ಯನು ಏನು ಹೊಂದುವನು? ಎಂದು ಕೇಳಿದನು.

೧೭. ಪ್ರತಿದಿನವೂ ಹಸುವನ್ನು ಮೇಯಿಸಲು ಕಾಡಿಗೆ ಹೋಗಬೇಕು? ಎಂದು ಜಾಬಾಲಿಯು ಹೇಳಿದನು.

೧೮. ಗೋವುಗಳಿಗೆ ಅಕ್ಕಿಯನ್ನು ತಿನ್ನಿಸಿ ಸಗಣಿಯಲ್ಲಿ ಬಂದ ಅವುಗಳನ್ನು ಆರಿಸಬೇಕು. ಮಕ್ಕಳನ್ನು ಅಪೇಕ್ಷಿಸುವವನು ಅದನ್ನು ತಿನ್ನಬೇಕು.

ಸಾ ಯದಾ ಪಿಬತೇ ತೋಯಂ ತದಾ ಪೇಯಂ ಜಲಂ ಶುಚಿ ।
ಸೋಚ್ಚಸ್ಥಾನೇ ಯದಾ ತಿಷ್ಠೇತ್ತದಾ ನೀಚಾಸನಸ್ಥಿತಃ ॥ ೧೯ ॥

ದಂಶಾನ್ನಿವಾರಯೇನ್ನಿತ್ಯಂ ಯವಸಂ ಸ್ವಯಮಾಹರೇತ್ ।
ಏವಂ ಪ್ರಕುರ್ವತಃ ಪುತ್ರಂ ದಾಸ್ಯತೇ ಧರ್ಮತತ್ಪರಂ ॥ ೨೦ ॥

॥ ಸುಮತಿರುವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಪುತ್ರಕಾಮ ಋತಂಭರಃ ।
ವ್ರತಂ ಚಕಾರ ಧರ್ಮಾತ್ಮಾ ಧೇನುಪೂಜಾಂ ಸಮಾಚರನ್ ॥ ೨೧ ॥

ಪ್ರತ್ಯಹಂ ಕುರುತೇ ಗಾಂ ಚ ಯವಸಾದ್ಯೇನ ತೋಷಿತಾಂ ।
ದಂಶಾನ್ನ್ಯವಾರಯದ್ಧೀಮಾನ್ ಯವಭಕ್ಷಕೃತಾದರಃ ॥ ೨೨ ॥

ಏವಂ ಧೇನುಂ ಪೂಜಯತೋ ಗತಾಸ್ತು ದಿವಸಾ ಘನಾಃ ।
ವನಮಧ್ಯೇ ತೃಣಾದೀಂಶ್ಚ ಚರಂತೀಮಕುತೋಭಯಾಂ ॥ ೨೩ ॥

---

೧೯-೨೦. ಅದು ನೀರು ಕುಡಿದಾಗ ನಾವೂ ನೀರು ಕುಡಿಯಬೇಕು. ಅದು ಮೇಲೆ ನಿಂತಿದ್ದರೆ ನಾವು ಕೆಳಗೆ ನಿಂತಿರಬೇಕು. ನಿತ್ಯವೂ ಸೊಳ್ಳೆ ನೊಣಗಳನ್ನು ಓಡಿಸುತ್ತಿರಬೇಕು. ಹುಲ್ಲನ್ನು ತಾನೇ ತರಬೇಕು. ಹೀಗೆ ಮಾಡಿದವನಿಗೆ ಧರ್ಮಿಷ್ಠನಾದ ಮಗನನ್ನು ಕೊಡುತ್ತದೆ.

೨೧. ಸುಮತಿಯು ಹೇಳುತ್ತಾನೆ:—ಈ ಮಾತನ್ನು ಕೇಳಿ ಮಗನನ್ನು ಅಪೇಕ್ಷಿಸಿದ ಋತಂಭರನು ವ್ರತವನ್ನು ಹಿಡಿದು ಧೇನುಪೂಜೆಯನ್ನು ಮಾಡಿದನು.

೨೨. ಪ್ರತಿದಿನವೂ ಗೋವಿಗೆ ಅಕ್ಕಿ ಮುಂತಾದುವನ್ನು ಕೊಟ್ಟು ಸಂತೋಷಪಡಿಸುತ್ತಿದ್ದನು. ಸೊಳ್ಳೆ ನೊಣಗಳನ್ನು ಓಡಿಸುತ್ತಾ ಆ ಅಕ್ಕಿಯನ್ನು ತಿನ್ನುತ್ತಿದ್ದನು.

೨೩. ವನಮಧ್ಯದಲ್ಲಿ ಹುಲ್ಲನ್ನು ತಿನ್ನುತ್ತಾ ಭಯವಿಲ್ಲದಿರುವ ಹಸುವನ್ನು ಈರೀತಿ ಬಹು ದಿನಗಳು ಸೇವಿಸಿದನು.

ಏಕದಾ ನೃಪತಿಸ್ತಸ್ಯ ವನಸ್ಯ ಶ್ರೀನಿರೀಕ್ಷಣೇ ।
ನ್ಯಸ್ತದೃಷ್ಟಿಸ್ಸ ಪರಿತೋ ಬಭ್ರಾಮ ಸುಕುತೂಹಲೀ ॥ ೨೪ ॥

ತದಾಗತ್ಯಾಹನದ್ಗಾಂ ವೈ ಪಂಚಾಸ್ಯಃ ಕಾನನಾಂತರಾತ್ ।
ಕ್ರೋಶಂತೀಂ ಬಹುಧಾ ದೀನಾಂ ಹಂಭಾರಾವೇಣ ದುಃಖಿತಾಂ ॥ ೨೫ ॥

ತದಾ ನೃಪಃ ಸಮಾಗತ್ಯ ವಿಲೋಕ್ಯ ನಿಜಮಾತರಂ ।
ಸಿಂಹೇನ ನಿಹತಾಂ ಪಶ್ಯನ್ ರುರೋದಾತೀವ ವಿಹ್ವಲಃ ॥ ೨೬ ॥

ಸ ದುಃಖಿತಃ ಸಮಾಗತ್ಯ ಜಾಬಾಲಿಂ ಮುನಿಸತ್ತಮಂ ।
ನಿಷ್ಕೃತಿಂ ತಸ್ಯ ಪಪ್ರಚ್ಛ ಗೋವಧಸ್ಯ ಪ್ರಮಾದತಃ ॥ ೨೭ ॥

॥ ಋತಂಭರ ಉವಾಚ ॥

ಸ್ವಾಮಿಂಸ್ತ್ವದಾಜ್ಞಯಾ ಧೇನುಂ ಪಾಲಯನ್ವನಮಾಸ್ಥಿತಃ ।
ಕುತೋಽಪ್ಯಾಗತ್ಯ ತಾಂ ಸಿಂಹೋ ಜಘಾನಾದೃಷ್ಟಿಗೋಚರಃ ॥ ೨೮ ॥

ತಸ್ಯ ಪಾಪಸ್ಯ ನಿಷ್ಕೃತ್ಯೈ ಕಿಂ ಕರೋಮಿ ತ್ವದಾಜ್ಞಯಾ ।
ಕಥಂ ವಾ ವ್ರತಸಂಪೂರ್ತಿರ್ಮಮ ಪುತ್ರಪ್ರದಾಯಿನೀ ॥ ೨೯ ॥

---

೨೪. ಒಂದುಸಾರಿ ಕಾಡಿನ ಸೊಬಗನ್ನು ನೋಡುತ್ತಾ ಸುತ್ತುತ್ತಿದ್ದನು.

೨೫-೨೬. ಆಗ ಒಂದು ಸಿಂಹವು ಬಂದು ಆ ಹಸುವನ್ನು ಕೊಂದಿತು. ಅದು ದುಃಖಿಸುತ್ತ ಹಂಭಾ ಎನ್ನುತ್ತಾ ಸತ್ತಿತು. ಆಗ ರಾಜನು ಬಂದು ಸಿಂಹದಿಂದ ಕೊಲ್ಲಲ್ಪಟ್ಟ ಅದನ್ನು ನೋಡಿ ಬಹು ದುಃಖಿಸಿದನು.

೨೭. ಅವನು ದುಃಖಪಡುತ್ತಾ ಬಂದು, ಜಾಬಾಲಿಋಷಿಯನ್ನು ಕಂಡು ಆ ಗೋವಧೆಗೆ ಪ್ರಾಯಶ್ಚಿತ್ತವನ್ನು ಕೇಳಿದನು.

೨೮. ಋತಂಭರನು ಹೇಳಿದನು :—ಸ್ವಾಮಿ, ತಮ್ಮ ಅಪ್ಪಣೆಯಂತೆ ಹಸುವನ್ನು ರಕ್ಷಿಸುತ್ತಾ ಕಾಡಿನಲ್ಲಿದ್ದೆ. ಒಂದು ಸಿಂಹವು ಎಲ್ಲಿಂದಲೋ ಕಾಣದಂತೆ ಬಂದು ಹಸುವನ್ನು ಕೊಂದಿತು.

೨೯. ಆ ಪಾಪಕ್ಕೆ ನಿನ್ನ ಅಪ್ಪಣೆಯಿಂದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತೇನೆ. ನನ್ನ ವ್ರತ ಪೂರ್ತಿಯು ಹೇಗಾಗಬೇಕು? ನನಗೆ ಮಕ್ಕಳು ಹೇಗಾದೀತು?

ಇತ್ಯುಕ್ತವಂತಂ ತಂ ಭೂಪಂ ಜಗಾದ ಮುನಿಸತ್ತಮಃ ।
ಸಂತ್ಯುಪಾಯಾ ಮಹೀಪಾಲ ಪಾಪರಾಶ್ಯಪಸುತ್ತಯೇ ॥ ೩೦ ॥

ಬ್ರಹ್ಮಘ್ನಸ್ಯ ಕೃತಘ್ನಸ್ಯ ಸುರಾಪಸ್ಯ ಮಹಾಮತೇ ।
ಪ್ರಾಯಶ್ಚಿತ್ತಾನಿ ವರ್ತಂತೇ ಸರ್ವಪಾಪಹರಾಣಿ ಚ ॥ ೩೧ ॥

ಕೃಚ್ಛ್ರೈಶ್ಚಾಂದ್ರಾಯಣೈರ್ದಾನೈರ್ವ್ರತೈ ಸ್ಸನಿಯಮೈರ್ಮಹತ್ ।
ಪಾಪಂ ತು ಪ್ರಲಯಂ ಯಾತಿ ನಿಯಮಾದನುತಿಷ್ಠತಃ ॥ ೩೨ ॥

ದ್ವಯೋರ್ನೈ ನಿಷ್ಕೃತಿರ್ನಾಸ್ತಿ ಪಾಪಪುಂಜಕೃತೋಸ್ತಯೋಃ ।
ಮತ್ಯಾ ಗೋವಧಕರ್ತುಶ್ಚ ನಾರಾಯಣವಿನಿಂದಿತುಃ ॥ ೩೩ ॥

ಗವಾಂ ಯೋ ಮನಸಾ ದುಃಖಂ ವಾಂಛತ್ಯಧಮಸತ್ತಮಃ ।
ಸ ಯಾತಿ ನಿರಯಸ್ಥಾನಂ ಯಾವದಿಂದ್ರಾಶ್ಚತುರ್ದಶ ॥ ೩೪ ॥

ಯೋಽಪಿ ದೇವಂ ಹರಿಂ ನಿಂದೇತ್ಸಕೃದ್ದುರ್ಭಾಗ್ಯವಾನ್ನರಃ ।
ಸ ಚಾಪಿ ನರಕಂ ಗಚ್ಛೇತ್ ಪುತ್ರಪೌತ್ರಪರೀವೃತಃ ॥ ೩೫ ॥

---

೩೦. ರಾಜನು ಹೀಗೆ ಕೇಳಲು ಎಲೈ! ರಾಜನೇ, ಆ ಪಾಪಕ್ಕೆ ಬೇಕಾದಷ್ಟು ಉಪಾಯಗಳಿವೆ ಎಂದನು.

೩೧. ಬ್ರಹ್ಮಹತ್ಯೆ ಮಾಡಿದವನಿಗೆ, ಹೆಂಡಕುಡುಕನಿಗೆ, ಉಪಕಾರಸ್ಮರಣೆಯಿಲ್ಲದವನಿಗೆ ಇವರೇ ಮುಂತಾದವರಿಗೆ ಸರ್ವಪಾಪಹರವಾದ ಪ್ರಾಯಶ್ಚಿತ್ತಗಳಿವೆ.

೩೨. ಕೃಚ್ಛ್ರಗಳಿಂದಲೂ ಚಾಂದ್ರಾಯಣದಿಂದಲೂ ಇನ್ನೂ ದೊಡ್ಡ ವ್ರತಗಳಿಂದಲೂ ಈ ಪಾಪವು ಹೋಗುತ್ತದೆ. ಆದರೆ,

೩೩. ಬುದ್ಧಿಪೂರ್ವಕವಾಗಿ ಗೋವಧೆ ಮಾಡಿದವನಿಗೂ ನಾರಾಯಣನನ್ನು ನಿಂದಿಸುವವರಿಗೂ ಪ್ರಾಯಶ್ಚಿತ್ತಗಳಿಲ್ಲ.

೩೪. ಗೋವುಗಳಿಗೆ ಮನಃಪೂರ್ವಕವಾಗಿ ದುಃಖವನ್ನಪೇಕ್ಷಿಸುವವನಿಗೆ ಹದಿನಾಲ್ಕು ಜನ ಇಂದ್ರರಿರುವವರೆಗೆ ನರಕವು ತಪ್ಪಿದುದಲ್ಲ.

೩೫. ಹರಿಯನ್ನು ಯಾವನು ಒಂದುಸಾರಿಯಾದರೂ ನಿಂದಿಸುತ್ತಾನೋ ಅವನೂ ಕೂಡ ಪುತ್ರಪೌತ್ರರಿಂದ ಕೂಡಿ ನರಕಕ್ಕೆ ಹೋಗುತ್ತಾನೆ.

ತಸ್ಮಾದ್ಜ್ಞಾತ್ವಾ ಹರಿಂ ನಿಂದನ್ ಗೋಷು ದುಃಖಂ ಸಮಾಚರನ್ ।
ಕದಾಪಿ ನರಕಾನ್ಮುಕ್ತಿಂ ನ ಪ್ರಾಪ್ನೋತಿ ನರೇಶ್ವರ ॥ ೩೬ ॥

ಅಜ್ಞಾನಸಂಪ್ರಾಪ್ತಗೋಹತ್ಯಾಪ್ರಾಯಶ್ಚಿತ್ತಂ ತು ವಿದ್ಯತೇ ।
ರಾಮಭಕ್ತಂ ತು ಧೀಮಂತಂ ಯಾಹಿ ತ್ವಮೃತುಪರ್ಣಕಂ ॥ ೩೭ ॥

ಸ ವೈ ಸಮದೃಶಾ ಸರ್ವಾನ್ ಶತ್ರೂನ್ಮಿತ್ರಾನ್ ಸಮಂ ಚರನ್ ।
ತುಭ್ಯಂ ವದಿಷ್ಯತಿ ಕ್ಷಿಪ್ರಂ ಗೋವಧಸ್ಯಾಸ್ಯ ನಿಷ್ಕೃತಿಂ ॥ ೩೮ ॥

ತಸ್ಯ ದೇಶಾಂಸ್ತ್ವಮಾಕ್ರಾಮಂಸ್ತೇನ ನಿರ್ವಾಸಿತಃ ಪುರಃ ।
ವೈರಿಭಾವಂ ಪರಿತ್ಯಜ್ಯ ಗಚ್ಛ ತ್ವಮೃತುಪರ್ಣಕಂ ॥ ೩೯ ॥

ಸ ಯದ್ವದಿಷ್ಯತಿ ಕ್ಷಿಪ್ರಂ ತತ್ಕುರುಷ್ವ ಸಮಾಹಿತಃ ।
ಯಥಾ ತ್ವತ್ಕೃತಪಾಪಸ್ಯ ನಿಷ್ಕೃತಿರ್ಹಿ ಭವಿಷ್ಯತಿ ॥ ೪೦ ॥

ಸ ತು ತದ್ವಚನಂ ಶ್ರುತ್ವಾ ಜಗಾಮ ಋತುಪರ್ಣಕಂ ।
ರಾಮಭಕ್ತಂ ರಿಪೌ ಮಿತ್ರೇ ಸಮದೃಷ್ಟ್ಯಾ ಸಮಂಜಸಂ ॥ ೪೧ ॥

---

೩೬. ಆದ್ದರಿಂದ ಬುದ್ಧಿಪೂರ್ವಕವಾಗಿ ಹರಿಯನ್ನು ನಿಂದಿಸುವವನೂ ಗೋವುಗಳಿಗೆ ದುಃಖ ಕೊಡುವವನೂ ನರಕದಿಂದ ಉದ್ಧಾರವಾಗುವುದೇ ಇಲ್ಲ.

೩೭. ಅಜ್ಞಾನದಿಂದ ಮಾಡಿದ ಗೋಹತ್ಯೆಗೆ ಪ್ರಾಯಶ್ಚಿತ್ತವಿದೆ. ರಾಮಭಕ್ತನಾದ ಋತುಪರ್ಣನ ಬಳಿಗೆ ಹೋಗಿ ಕೇಳು.

೩೮. ಅವನು ಶತ್ರುಮಿತ್ರರನ್ನು ಒಂದೇ ಸಮದಿಂದ ನೋಡುತ್ತಾ ನಿನಗೆ ಈ ಗೋವಧೆಗೆ ಪರಿಹಾರವನ್ನು ಹೇಳುತ್ತಾನೆ.

೩೯. ಅವನ ದೇಶವನ್ನು ನೀನು ಆಕ್ರಮಿಸಲು ಹೋಗಿ ಅವನೇ ನಿನ್ನನ್ನು ಓಡಿಸಿಬಿಟ್ಟನು. ಆದ್ದರಿಂದ ಆ ವೈರಿಭಾವವನ್ನು ಬಿಟ್ಟು ಹೋಗು.

೪೦. ಅವನು ಹೇಳಿದಂತೆ ಜಾಗ್ರತೆಯಾಗಿ ಮಾಡು. ಅವನೇ ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳುತ್ತಾನೆ.

೪೧. ಆ ಮಾತನ್ನು ಕೇಳಿ ರಾಮಭಕ್ತನೂ, ಶತ್ರುಮಿತ್ರರಲ್ಲಿ ಸಮದೃಷ್ಟಿಯುಳ್ಳವನೂ ಆದ ಋತುಪರ್ಣನ ಬಳಿಗೆ ಹೋದನು.

**ಸ ತಸ್ಮೈಕಥಯಾಮಾಸ ಯದ್ವ್ಯಾತಂ ಗೋವಧಾದಿಕಂ ।**
**ತಸ್ಯ ಪಾಪಸ್ಯ ನಿಷ್ಕೃತ್ಯೈ ಹ್ಯಾಯಾತಂ ಸ್ವಾಂತಮುಕ್ತವಾನ್　　॥ ೪೨ ॥**

**ತದಾ ಪ್ರೋವಾಚ ತಂ ರಾಜಾ ಋತುಪರ್ಣಃ ಪ್ರತಾಪವಾನ್ ।**
**ಉವಾಚ ಚ ಹರ್ಷ ವಾಕ್ಯಂ ಬುದ್ಧಿಮಾನ್ ಧರ್ಮಕೋವಿದಃ　　॥ ೪೩ ॥**

**ಕೋಽಹಂ ಸ್ವಾಮಿನ್ಮುನೀನಾಂ ವೈ ಪುರತಃ ಶಾಸ್ತ್ರವೇದಿನಾಂ ।**
**ತಾನ್ ಹಿತ್ವಾ ಕಿಂ ತು ಮಾಂ ಪ್ರಾಪ್ತೋ ಮೂರ್ಖಂ ಪಂಡಿತಮಾನಿನಂ**
**॥ ೪೪ ॥**

**ಮಯಿ ತೇ ಹ್ಯಸ್ತಿ ಚೇಚ್ಛ್ರದ್ಧಾ ತದಾ ಕಿಂಚಿದ್ಬ್ರವೀಮ್ಯಹಂ ।**
**ಶೃಣುಷ್ವ ನರಶಾರ್ದೂಲ ಗದಿತಂ ಮಮ ಸಾದರಃ　　॥ ೪೫ ॥**

**ಭಜ ಶ್ರೀರಘುನಾಥಂ ತ್ವಂ ಕರ್ಮಣಾ ಮನಸಾ ಗಿರಾ ।**
**ನೈಷ್ಕಾಪಟ್ಯೇನ ಲೋಕೇಶಂ ತೋಷಯಸ್ವ ಮಹಾಮತೇ　　॥ ೪೬ ॥**

**ಸಂತುಷ್ಟೋ ದಾಸ್ಯತೇ ಸರ್ವಂ ತವ ಹೃತ್ಸ್ಥಂ ಮನೋರಥಂ ।**
**ಅಜ್ಞಾನಕೃತಗೋಹತ್ಯಾಪಾಪನಾಶಂ ಕರಿಷ್ಯತಿ　　॥ ೪೭ ॥**

---

೪೨. ಋತುಪರ್ಣನಿಗೆ ತನಗೆ ಸಂಭವಿಸಿದ ಗೋವಧೆಯ ವಿಚಾರವನ್ನು ತಿಳಿಸಿ ಅದಕ್ಕೋಸ್ಕರ ತಾನು ಪ್ರಾಯಶ್ಚಿತ್ತವನ್ನು ಕೇಳಲು ಬಂದಿರುವೆನೆಂದೂ ಹೇಳಿದನು.

೪೩. ಬುದ್ಧಿವಂತನಾದ ಋತುಪರ್ಣನು ಆಗ ಅವನಿಗಿಂತೆಂದನು.

೪೪. ಸ್ವಾಮಿ! ಮುನಿಗಳೆದುರಿಗೆ ನಾನೆಷ್ಟರವನು? ಅವರೆಲ್ಲರೂ ಶಾಸ್ತ್ರಗಳಲ್ಲಿ ಪಂಡಿತರು. ನಾನು ಪಂಡಿತನೆಂದು ತಿಳಿದುಕೊಂಡಿರುವ ಮೂರ್ಖನು.

೪೫. ನೀನು ಶ್ರದ್ಧೆಯಿಂದ ಕೇಳುವುದಾದರೆ ಹೇಳುತ್ತೇನೆ, ಕೇಳು.

೪೬. ಮನೋವಾಕ್ಕಾಯಗಳಿಂದ ನಿಷ್ಕಾಪಟ್ಯದಿಂದ ಶ್ರೀರಾಮನನ್ನು ಭಜಿಸು.

೪೭. ಅವನು ತುಷ್ಟನಾಗಿ ಇಷ್ಟಾರ್ಥವನ್ನು ಕೊಡುತ್ತಾನೆ. ಆ ಅಜ್ಞಾನದ ಗೋಹತ್ಯೆಯನ್ನು ನಾಶಮಾಡುತ್ತಾನೆ.

ರಾಮಸ್ಮರಣಪೂತಾತ್ಮಾ ಧೇನುಂ ಬ್ರಾಹ್ಮಣಸತ್ತಮೇ ।
ದತ್ವಾ ಯಥೋಕ್ತಂ ಕನಕಂ ಪಾಪನಿಷ್ಕೃತಿಮಾಪ್ಸ್ಯಸಿ ॥ ೪೮ ॥

॥ ಸುಮತಿರುವಾಚ ॥

ಏತಚ್ಛ್ರುತ್ವಾ ತು ತದ್ವಾಕ್ಯಮೃತಂಭರನೃಪಸ್ತಥಾ ।
ವಿಧಾಯ ರಾಮಸ್ಮರಣಂ ಪೂತಾತ್ಮಾ ವ್ರತಮಾಚರತ್ ॥ ೪೯ ॥

ಪೂರ್ವವತ್ಪಾಲಯನ್ಧೇನುಂ ಜಗಾಮ ವಿಪಿನಂ ಮಹತ್ ।
ರಾಮನಾಮ ಸ್ಮರನ್ನಿತ್ಯಂ ಸರ್ವಭೂತಹಿತೇ ರತಃ ॥ ೫೦ ॥

ತಸ್ಮೈ ತುಷ್ಟಾ ತು ಸುರಭಿಃ ಪ್ರೋವಾಚ ಪರಿತೋಷಿತಾ ।
ರಾಜನ್ ವರಯ ಮತ್ತೋ ವೈ ವರಂ ಹೃತ್ಸ್ಥಂ ಮನೋರಮಂ ॥ ೫೧ ॥

ತದಾ ಪ್ರೋವಾಚ ವೈ ರಾಜಾ ಪುತ್ರಂ ದೇಹಿ ಮನೋರಮಂ ।
ರಾಮಭಕ್ತಂ ಪಿತುರ್ಭಕ್ತಂ ಸ್ವಧರ್ಮಪ್ರತಿಪಾಲಕಂ ॥ ೫೨ ॥

---

೪೮. ರಾಮಸ್ಮರಣೆಯಿಂದ ಶುದ್ಧನಾಗಿ ಚಿನ್ನದ ಧೇನುವನ್ನು ಮಾಡಿಸಿ ಬ್ರಾಹ್ಮಣನಿಗೆ ದಾನಮಾಡಿದರೆ ಪಾಪವು ಹೋಗುತ್ತದೆ.

೪೯. ಸುಮತಿಯು ಹೇಳಿದನು:—ಋತಂಭರನು ಈ ಮಾತನ್ನು ಕೇಳಿ ರಾಮಸ್ಮರಣೆಯಿಂದ ಪರಿಶುದ್ಧನಾಗಿ ಈ ಧೇನುದಾನವನ್ನು ಮಾಡಿದನು.

೫೦. ನಿತ್ಯವೂ ರಾಮಸ್ಮರಣೆಮಾಡುತ್ತ ಸರ್ವಭೂತಗಳಲ್ಲಿಯೂ ಹಿತವನ್ನ ಪೇಕ್ಷಿಸುವವನಾಗಿ ಮತ್ತೆ ಹಸುವನ್ನು ಕಾಯುತ್ತಾ ಕಾಡಿಗೆ ಹೋದನು.

೫೧. ಆಗ ಒಂದು ದಿನ ಹಸುವು ಸಂತೋಷಪಟ್ಟು ಏನುಬೇಕೆಂದು ಕೇಳಿತು.

೫೨. ಆಗ ರಾಜನು ರಾಮಭಕ್ತನೂ ಪಿತೃಭಕ್ತನೂ ಧರ್ಮಿಷ್ಟನೂ ಆದ ಮಗನನ್ನು ಕೊಡೆಂದು ಕೇಳಿದನು.

ತುಷ್ಟಾ ದತ್ವಾ ವರಂ ಸಾಪಿ ತಸ್ಮೈ ರಾಜ್ಞೇ ಸುತಾರ್ಥಿನೇ ।
ಜಗಾಮಾದರ್ಶನಂ ದೇವೀ ಕಾಮಧೇನುಃ ಕೃಪಾವತೀ ॥ ೫೩ ॥

ಸ ಕಾಲೇ ಪ್ರಾಪ್ತವಾನ್ಪುತ್ರಂ ವೈಷ್ಣವಂ ರಾಮಸೇವಕಂ ।
ಸತ್ಯವತ್ಸಂಜ್ಞಯಾ ಯುಕ್ತಮಕರೋನ್ನಾಮ ತತ್ಪಿತಾ ॥ ೫೪ ॥

ಸತ್ಯವಂತಂ ಸುತಂ ಲಬ್ಧ್ವಾ ಪಿತೃಭಕ್ತಮೃತಂಭರಃ ।
ಪರಮಂ ಹರ್ಷಮಾಪೇದೇ ಶಕ್ರತುಲ್ಯಪರಾಕ್ರಮಂ ॥ ೫೫ ॥

ಸ ರಾಜಾ ಧಾರ್ಮಿಕಂ ಪುತ್ರಂ ದೃಷ್ಟ್ವಾ ಹರ್ಷೇಣ ನಿರ್ವೃತಃ ।
ರಾಜ್ಯಂ ತಸ್ಮಿನ್ಮಹನ್ನ್ಯಸ್ಯ ಜಗಾಮ ತಪಸೇ ವನಂ ॥ ೫೬ ॥

ತತ್ರಾರಾಧ್ಯ ಹೃಷೀಕೇಶಂ ಭಕ್ತಿಯುಕ್ತೇನ ಚೇತಸಾ ।
ನಿರ್ಧೂತಪಾಪಃ ಸತತಸುರಗಾದ್ಧರಿಪದಂ ನೃಪಃ ॥ ೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಸತ್ಯವದಾಖ್ಯಾನಂ ನಾಮ ಏಕತ್ರಿಂಶೋಽಧ್ಯಾಯಃ

---

೫೩. ಸುತನನ್ನು ಅಪೇಕ್ಷಿಸುವ ಅವನಿಗೆ ವರವನ್ನು ಕೊಟ್ಟು ಧೇನುವು ಅಂತರ್ಧಾನವಾಯಿತು.

೫೪. ಕಾಲಕ್ರಮದಲ್ಲಿ ಮಗನು ಹುಟ್ಟಿದನು. ಅವನಿಗೆ ಸತ್ಯವಂತನೆಂದು ಹೆಸರಿಟ್ಟನು. ಅವನು ರಾಮಸೇವಕನಾದನು.

೫೫. ಆ ಋತಂಭರನು ಪಿತೃಭಕ್ತನಾದ ಶಕ್ರನಿಗೆ ಸಮವಾದ ಪರಾಕ್ರಮವುಳ್ಳ ಮಗನನ್ನು ಹೊಂದಿ ಸಂತೋಷಪಟ್ಟನು.

೫೬. ಆ ರಾಜನು ಧಾರ್ಮಿಕನಾದ ಮಗನನ್ನು ನೋಡಿ ಬಹು ಸಂತೋಷಪಟ್ಟನು. ರಾಜ್ಯವನ್ನು ಅವನಿಗೆ ಕೊಟ್ಟು ತಪಸ್ಸಿಗೆ ಕಾಡಿಗೆ ಹೋದನು.

೫೭. ಅಲ್ಲಿ ಭಕ್ತಿಯಿಂದ ಸ್ವಾಮಿಯನ್ನಾರಾಧಿಸಿ ಪಾಪವನ್ನು ಕಳೆದುಕೊಂಡು ಹರಿಯ ಸ್ಥಾನವನ್ನು ಹೊಂದಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ಸತ್ಯವದಾಖ್ಯಾನವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದ್ವಾತ್ರಿಂಶೋಽಧ್ಯಾಯಃ

॥ ಸುಮತಿರುವಾಚ ॥

ಅಸಾವಪಿ ನೃಪಸ್ಸೌಮ್ಯ ಸತ್ಯವಾನ್ನಾಮ ವಿಶ್ರುತಃ ।
ನಿಜಧರ್ಮೇಣ ಲೋಕೇಶಂ ರಘುನಾಥಮತೋಷಯತ್ ॥ ೧ ॥

ಅಸ್ಮೈ ತುಷ್ಟೋ ರಮಾನಾಥೋ ದದೌ ಭಕ್ತಿಮಚಂಚಲಾಂ ।
ನಿಜಾಂಘ್ರಿಪದ್ಮೇ ಯಜತಾಂ ದುರ್ಲಭಾಂ ಪುಣ್ಯಕೋಟಿಭಿಃ ॥ ೨ ॥

ನಿತ್ಯಂ ಶ್ರೀರಘುನಾಥಸ್ಯ ಕಥಾನಕಮನಾತುರಃ ।
ಕುರುತೇ ಸರ್ವಲೋಕಾನಾಂ ಪಾವನಂ ಕೃಪಯಾ ಯುತಃ ॥ ೩ ॥

---

## ಮೂವತ್ತೆರಡನೆಯ ಅಧ್ಯಾಯವು

೧. ಸುಮತಿಯು ಹೇಳಿದನು:—ಈ ಸತ್ಯವಂತನೂ ಕೂಡ ಧರ್ಮದಿಂದ ರಾಮನನ್ನು ಸ್ಮರಿಸುತ್ತ ಸಂತೋಷಪಡಿಸಿದನು.

೨. ಶ್ರೀರಾಮನು ತನ್ನನ್ನೇ ಪೂಜೆಮಾಡುವವರಿಗೆ ದುರ್ಲಭವಾದ ಅಚಂಚಲವಾದ ಭಕ್ತಿಯನ್ನು ಆ ಸತ್ಯವಂತನಿಗೆ ಕೊಟ್ಟನು.

೩. ಯಾವಾಗಲೂ ರಾಮನ ಕಥೆಯಿಂದಲೇ ಬೇಸರಪಡದೆ ಲೋಕವನ್ನೇ ಪಾವನಮಾಡುತ್ತಿದ್ದನು.

ಯೋ ನ ಪೂಜಯತೇ ದೇವಂ ರಘುನಾಥಂ ರಮಾಪತಿಂ ।
ಸ ತೇನ ತಾಡ್ಯತೇ ದಂಡೈರ್ಯಮಸ್ಯಾಪಿ ಭಯಾವಹೈಃ ॥ ೪ ॥

ಅಷ್ಟಮಾದ್ವತ್ಸರಾದೂರ್ಧ್ವಮಶೀತಿರ್ವತ್ಸರೋ ಭವೇತ್ ।
ತಾವದೇಕಾದಶೀ ಸರ್ವೈರ್ನರೈಃ ಸುಷ್ಠು ಕಾರಿತಾಮುನಾ ॥ ೫ ॥

ತುಲಸೀ ವಲ್ಲಭಾ ಯಸ್ಯ ಕದಾಚಿದ್ಯಚ್ಛಿರೋಧರಾಂ ।
ನ ಮುಂಚತಿ ರಮಾನಾಥಪಾದಪದ್ಮಸ್ರಗುತ್ತಮಾ ॥ ೬ ॥

ಋಷೀಣಾಮಪಿ ಪೂಜ್ಯೋಽಯಮಿತರೇಷಾಂ ಕಥಂ ನ ಹಿ ।
ರಘುನಾಥಸ್ಯ ಕೃತಿಪ್ರೀತಿಧೂತಪಾಪೋ ಹತಾಶುಭಃ ॥ ೭ ॥

ಜ್ಞಾತ್ವಾಯಂ ರಾಮಚಂದ್ರಸ್ಯ ವಾಜಿನಂ ಪರಮಾದ್ಭುತಂ ।
ಆಗತ್ಯ ತುಭ್ಯಂ ಸಂದಾಸ್ಯತ್ಯೇತದ್ರಾಜ್ಯಮಕಂಟಕಂ ॥ ೮ ॥

ಯತ್ತ್ವಯಾಭಿಹಿತಂ ರಾಜನ್ ತತ್ತೇ ಕಥಿತಮುತ್ತಮಂ ।
ಪುನಃ ಕಿಂ ಪೃಚ್ಛಸೇ ಸ್ವಾಮಿನ್ನಾಜ್ಞಾಪಯ ಕರೋಮಿ ತತ್ ॥ ೯ ॥

---

೪. ಯಾವನು ಶ್ರೀರಾಮನನ್ನು ಪೂಜಿಸುವುದಿಲ್ಲವೋ ಅವನನ್ನು ಭಯಂಕರವಾದ ದಂಡಗಳಿಂದ ಶಿಕ್ಷಿಸುತ್ತಿದ್ದನು.

೫. ಎಂಟು ವರ್ಷದ ಮೇಲೆ ಎಂಭತ್ತು ವರ್ಷಗಳ ವರೆಗೂ ಇರುವವರು ನಿಯಮದಿಂದ ಏಕಾದಶೀ ವ್ರತವನ್ನು ಮಾಡುವಂತೆ ಕಟ್ಟುಮಾಡಿದನು.

೬. ತುಲಸಿಯು ಆ ಸ್ವಾಮಿಗೆ ಪ್ರಿಯವಾದುದರಿಂದ ಅದನ್ನು ರಾಮಚಂದ್ರನ ಪಾದಗಳಿಗೆ ಪೂಜಿಸಿ ಆ ಮಾಲೆಯನ್ನು ಯಾವಾಗಲೂ ಹಾಕಿಕೊಳ್ಳುತ್ತಿದ್ದನು.

೭. ರಘುನಾಥನ ಕಥೆಯಿಂದ ಪಾಪವನ್ನು ನಾಶಮಾಡಿಕೊಂಡು ಇವನು ಋಷಿಗಳಿಗೂ ಪೂಜ್ಯನಾಗಿರುವಲ್ಲಿ ಇತರರಿಗೆ ಹೇಳತಕ್ಕದ್ದೇನಿದೆ?

೮. ಇವನು ರಾಮಚಂದ್ರನ ಕುದುರೆ ಬಂದುದನ್ನು ತಿಳಿದು ಇಲ್ಲಿಗೆ ಬಂದು ನಿನಗೆ ಈ ಶತ್ರುಬಾಧೆಯಿಲ್ಲದ ರಾಜ್ಯವನ್ನೊಪ್ಪಿಸುತ್ತಾನೆ.

೯. ಎಲೈ! ರಾಜನೇ, ನೀನು ಕೇಳಿದುದನ್ನೆಲ್ಲಾ ಹೇಳಿದೆನು. ಇನ್ನು ಏನನ್ನು ಕೇಳಿದರೂ ಹೇಳುತ್ತೇನೆ. ಆಜ್ಞಾಪಿಸು.

॥ ಶೇಷ ಉವಾಚ ॥

ಗತೋಽಶ್ವಸ್ತತ್ಪುರಾಂತಸ್ತು ನಾನಾಶ್ಚರ್ಯಸಮನ್ವಿತಃ ।
ತಂ ದೃಷ್ಟ್ವಾ ಜನತಾಸ್ಸರ್ವಾ ರಾಜ್ಞೇ ಗತ್ವಾ ನ್ಯವೇದಯನ್ ॥ ೧೦ ॥

॥ ಜನತಾ ಊಚುಃ ॥

ಕೋಽಪ್ಯಶ್ವಃ ಸಿತವರ್ಣೇನ ಗಂಗಾಜಲಸಮೇನ ವೈ ।
ಭಾಲೇ ಸೌವರ್ಣಪತ್ರೇಣ ರಾಜಮಾನಸ್ಸಮಾಗತಃ ॥ ೧೧ ॥

ತುಚ್ಛ್ರುತ್ವಾ ವಚನಂ ರಮ್ಯಂ ರಾಜಾನಾಂ ಹೃದ್ಯಮೀರಿತಂ ।
ತಾಶ್ಚ ಪ್ರತ್ಯಾಹ ವೈ ಭೂಪೋ ಜ್ಞಾಯತಾಂ ಕಸ್ಯ ವೈ ಹಯಃ ॥ ೧೨ ॥

ತಾಶ್ಚೈತಂ ಕಥಯಾಮಾಸುಃ ಶತ್ರುಘ್ನೇನ ಪ್ರಪಾಲಿತಃ ।
ಆಯಾತ್ಯಶ್ವೋ ಮಹೀಭರ್ತೂ ರಾಮಸ್ಯ ಪುರಮಧ್ಯತಃ ॥ ೧೩ ॥

ರಾಮಸ್ಯ ನಾಮ ಸ ಶ್ರುತ್ವಾ ದ್ವ್ಯಕ್ಷರಂ ಸುಮನೋಹರಂ ।
ಜಹರ್ಷ ಚಿತ್ತೇ ಚ ಭೃಶಂ ಗದ್ಗದಸ್ವರಚಿಹ್ನಿತಃ ॥ ೧೪ ॥

---

೧೦. ಶೇಷನು ಹೇಳಿದನು :—ಅನೇಕ ಆಶ್ಚರ್ಯಗಳಿಂದ ಕೂಡಿದ ಈ ರಾಮನ ಕುದುರೆಯು ಅವನ ಪಟ್ಟಣದ ಸಮೀಪಕ್ಕೆ ಹೋಗಲು ಅದನ್ನು ನೋಡಿ ಜನಗಳು ರಾಜನಿಗೆ ತಿಳಿಸಿದರು.

೧೧. ಜನಗಳು ಹೇಳಿದರು :—ಗಂಗಾನದಿಯ ನೀರಿನಂತೆ ಬೆಳ್ಳಗಿರುವ ಒಂದು ಕುದುರೆಯು ಬಂದಿದೆ. ಅದರ ಹಣೆಗೆ ಚಿನ್ನದ ತಗಡಿನಲ್ಲಿ ಏನನ್ನೋ ಬರೆದು ಕಟ್ಟಿದೆ.

೧೨. ರಾಜರಿಗೆ ಸಂತೋಷಪ್ರದವಾದ ಆ ಮಾತನ್ನು ಕೇಳಿ ಆ ಜನರನ್ನು ಕುರಿತು ಅದು ಯಾರ ಕುದುರೆ ಎಂದು ತಿಳಿಯಿರಿ ; ಎಂದನು.

೧೩. ಆ ಕುದುರೆಯು ರಾಮನ ಪಟ್ಟಣವಾದ ಅಯೋಧ್ಯೆಯಿಂದ ಬಂದಿರುವುದಾಗಿಯೂ ಶತ್ರುಘ್ನನು ಕಾಪಾಡುತ್ತಿರುವಂತೆಯೂ ಹೇಳಿದರು.

೧೪. ಎರಡು ಅಕ್ಷರಗಳಿಂದ ಕೂಡಿರುವ ಆ ರಾಮನ ಹೆಸರನ್ನು ಕೇಳುತ್ತಲೂ ಗದ್ಗದಸ್ವರ ಉಳ್ಳವನಾಗಿ ಮನಸ್ಸಿನಲ್ಲಿ ಸಂತೋಷಿಸಿದನು.

ಮಯಾ ಯೋ ಧಾರ್ಯತೇ ನಿತ್ಯಂ ಯೋ ರಾಮಶ್ಚಿಂತ್ಯತೇ ಹೃದಿ ।
ತಸ್ಯಾಶ್ವಃ ಸಹಶತ್ರುಘ್ನಃ ಸಮಾಯಾತಃ ಪುರೇ ಮಮ ॥ ೧೫ ॥

ಹನೂಮಾಂಸ್ತತ್ರ ರಾಮಾಂಘ್ರಿಸೇವಾಕರ್ತಾ ಭವಿಷ್ಯತಿ ।
ಕದಾಚಿದಪಿ ಯೋ ರಾಮಂ ನ ವಿಸ್ಮರತಿ ಮಾನಸೇ ॥ ೧೬ ॥

ಗಚ್ಛಾಮಿ ಯತ್ರ ಶತ್ರುಘ್ನೋ ಯತ್ರ ಮಾರುತನಂದನಃ ।
ಅನ್ಯೇಽಪಿ ಯತ್ರ ಪುರುಷಾ ರಾಮಪಾದಾಬ್ಜಸೇವಕಾಃ ॥ ೧೭ ॥

ಅಮಾತ್ಯಮಾದಿದೇಶಾಥ ಸರ್ವರಾಜ್ಯಂ ಧನಂ ಮಹತ್ ।
ಗೃಹೀತ್ವಾ ತು ಮಯಾ ಸಾರ್ಧಮಾಗಚ್ಛ ತ್ವರಯಾ ಯುತಃ ॥ ೧೮ ॥

ಯಾಸ್ಯೇಽಹಂ ರಘುನಾಥಸ್ಯ ಹಯಂ ಪಾಲಯಿತುಂ ವರಂ ।
ಕರ್ತುಂ ವಾ ರಾಮಪಾದಾಬ್ಜಪರಿಚರ್ಯಾಂ ಸುದುರ್ಲಭಾಂ ॥ ೧೯ ॥

ಇತ್ಯುಕ್ತ್ವಾ ನಿರ್ಜಗಾಮಾಥ ಶತ್ರುಘ್ನಂ ಪ್ರತಿ ಸೈನಿಕೈಃ ।
ತಾವತ್ಪುರೀಮಥ ಪ್ರಾಪ್ತೋ ರಾಮಭ್ರಾತಾ ಸಸೈನಿಕಃ ॥ ೨೦ ॥

---

೧೫. ನಾನು ಯಾವನನ್ನು ಧರಿಸಿದ್ದೇನೆಯೋ ಯಾವನನ್ನು ಮನಸ್ಸಿನಲ್ಲಿಯೇ ಚಿಂತಿಸುತ್ತೇನೆಯೋ ಅವನ ಕುದುರೆಯು ಶತ್ರುಘ್ನನೊಡನೆ ನನ್ನ ಪಟ್ಟಣಕ್ಕೆ ಬಂದಿದೆ.

೧೬. ರಾಮನನ್ನು ಒಂದು ಕ್ಷಣವೂ ಮರೆಯದಿರುವ ಹನುಮಂತನು ಅವನ ಪಾದಸೇವಕನಾಗಿ ಅಲ್ಲಿದ್ದಾನೆ.

೧೭. ಶತ್ರುಘ್ನನೂ ಹನುಮಂತನೂ ಇನ್ನೂ ರಾಮಪಾದಾಬ್ಜಸೇವಕರೂ ಇರುವಲ್ಲಿಗೆ ಹೋಗುತ್ತೇನೆ.

೧೮. ರಾಜ್ಯವನ್ನೂ ಧನವನ್ನೂ ತೆಗೆದುಕೊಂಡು ನನ್ನೊಡನೆ ಜಾಗ್ರತೆಯಾಗಿ ಬಾ; ಎಂದು ಮಂತ್ರಿಗೆ ಅಪ್ಪಣೆಮಾಡಿದನು.

೧೯. ರಾಮನ ಯಜ್ಞಾಶ್ವವನ್ನು ಕಾಪಾಡುತ್ತ ರಾಮಪಾದಸೇವೆಗೆ ಹೋಗುತ್ತೇನೆ.

೨೦. ಹೀಗೆಂದು ಹೇಳಿ ಸೈನಿಕರೊಡನೆ ಶತ್ರುಘ್ನನ ಬಳಿಗೆ ಹೊರಡುವಷ್ಟರಲ್ಲಿಯೇ ಶತ್ರುಘ್ನನು ಸೈನಿಕರೊಡನೆ ಅಲ್ಲಿಗೇ ಬಂದನು.

ವೀರಾ ಗರ್ಜಂತಿ ಪ್ರಬಲಾ ರಥಾಸ್ಸನಿಸದಂತಿ ಚ ।
ಜಯಶಂಖಸ್ಯ ನಾದಾಶ್ಚ ವೀಣಾನಾದಾಶ್ಚ ಸರ್ವತಃ ॥ ೨೦ ॥

ಆಗತ್ಯ ಸತ್ಯವಾನ್ ರಾಜಾ ಮಂತ್ರಿಭಿಸ್ಸ ಸಮನ್ವಿತಃ ।
ಚರಣೇ ಪ್ರಣಿಪತ್ಯಾಸ್ಮೈ ರಾಜ್ಯಂ ಪ್ರಾದಾನ್ಮಹಾಧನಂ ॥ ೨೧ ॥

ಶತ್ರುಘ್ನಸ್ತಂ ತು ರಾಜಾನಂ ಜ್ಞಾತ್ವಾ ರಾಮಮನುವ್ರತಂ ।
ತದ್ರಾಜ್ಯಂ ತಸ್ಯ ಪುತ್ರಾಯ ರುಕ್ಮನಾಮ್ನೇ ದದೌ ಮಹತ್ ॥ ೨೨ ॥

ಹನೂಮಂತಂ ಪರಿರಭ್ಯ ಸುಬಾಹುಂ ರಾಮಸೇವಕಂ ।
ಅನ್ಯಾನ್ವೈ ರಾಮಭಕ್ತಾಂಶ್ಚ ಪರಿರಭ್ಯ ಮಹಾನೃಪಃ ॥ ೨೪ ॥

ಕೃತಾರ್ಥಮೇವಮಾತ್ಮಾನಂ ಮೇನೇ ಸತ್ಯಸಮನ್ವಿತಃ ।
ನನಂದ ಚೇತಸಿ ತದಾ ಶತ್ರುಘ್ನೇನ ಸಮನ್ವಿತಃ ॥ ೨೫ ॥

---

೨೦. ವೀರರು ಗರ್ಜಿಸುತ್ತಿದ್ದಾರೆ. ರಥಗಳು ಧ್ವನಿಮಾಡುತ್ತಿವೆ. ಜಯ ಶಂಖವು ಧ್ವನಿಮಾಡುತ್ತಿದೆ. ವೀಣಾನಾದವು ಎಲ್ಲಾ ಕಡೆಯಲ್ಲೂ ಹರಡಿದೆ.

೨೧. ಸತ್ಯವಂತನು ಬಂದು ಮಂತ್ರಿಗಳೊಡನೆ ಕಾಲಿಗೆ ನಮಸ್ಕಾರ ಮಾಡಿ ರಾಜ್ಯವನ್ನೂ ಬಹುಧನವನ್ನೂ ಕೊಟ್ಟನು.

೨೨. ಶತ್ರುಘ್ನನು ಆ ರಾಜನು ರಾಮನ ವ್ರತದಲ್ಲಿರುವುದನ್ನು ತಿಳಿದು ಆ ರಾಜ್ಯವನ್ನು ಅವನ ಮಗನಾದ ರುಕ್ಮನಿಗೆ ಕೊಟ್ಟನು.

೨೪. ಹನುಮಂತನನ್ನೂ ಸುಬಾಹುವನ್ನೂ ಇನ್ನೂ ಅನೇಕಮಂದಿ ರಾಮ ಭಕ್ತರನ್ನು ಆಲಂಗಿಸಿಕೊಂಡನು.

೨೫. ಆಗ ಸತ್ಯವಂತನಾದ ತನ್ನನ್ನು ಕೃತಾರ್ಥನನ್ನಾಗಿ ತಿಳಿದು ಶತ್ರುಘ್ನ ನೊಡನೆ ಕೂಡಿಕೊಂಡು ಸಂತೋಷಪಟ್ಟನು.

ಹಯಸ್ತ್ವಾವದ್ಗತೋ ದೂರಂ ವೀರೈಸ್ಸುಪರಿರಕ್ಷಿತಃ ।
ಶತ್ರುಘ್ನಸ್ತೇನ ಭೂಪೇನ ಯಯೌ ವೀರಸಮನ್ವಿತಃ ॥ ೨೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಸತ್ಯವತ್ಸಮಾಗಮೋ
ನಾಮ ದ್ವಾತ್ರಿಂಶೋಽಧ್ಯಾಯಃ



---

೨೬. ಅಷ್ಟು ವೇಳೆಗೆ ಕುದುರೆಯು ವೀರರಿಂದ ಕಾಪಾಡಲ್ಪಟ್ಟು ಬಹುದೂರ ಹೋಯಿತು. ಈ ರಾಜನೂ ಶತ್ರುಘ್ನನೊಡನೆ ಕುದುರೆಯ ಕಾವಲಿಗೆ ಹೊರಟನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಸತ್ಯವತ್ಸಮಾಗಮವೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರಯಸ್ತ್ರಿಂಶೋಽಧ್ಯಾಯಃ

ಃ ಶೇಷ ಉವಾಚ ॥

ಗಚ್ಛತ್ಸು ರಥಿವರ್ಯೇಷು ಶತ್ರುಘ್ನಾದಿಷು ಭೂರಿಷು ।
ಮಹಾರಾಜೇಷು ಸರ್ವೇಷು ರಥಕೋಟಿಯುತೇಷು ಚ ॥ ೧ ॥

ಅಕಸ್ಮಾದಭವನ್ಮಾರ್ಗೇ ತಮಃ ಪರಮದಾರುಣಂ ।
ಯಸ್ಮಿನ್ ಸ್ವೀಯೋ ನ ಪಾರಕ್ಯೋ ಲಕ್ಷ್ಯತೇ ಜ್ಞಾನಿಭಿರ್ನರೈಃ ॥ ೨ ॥

ರಜಸಾ ವ್ಯಾಪಿತಂ ವ್ಯೋಮ ವಿದ್ಯುತ್ಸ್ತನಿತಸಂಕುಲಂ ।
ಏತಾದೃಶೇ ತು ಸಂಮರ್ದೇ ಮಹಾಭಯಕರೇ ತತಃ ॥ ೩ ॥

ಮೇಘಾ ವರ್ಷಂತಿ ರುಧಿರಂ ಪೂಯಾಮೇಧ್ಯಾದಿಕಂ ಬಹು ।
ಅತ್ಯಾಕುಲಾ ಬಭೂವುಸ್ತೇ ವೀರಾಃ ಪರಮವೈರಿಣಃ ॥ ೪ ॥

---

## ಮೂವತ್ತಮೂರನೆಯ ಅಧ್ಯಾಯವು

೧-೨. ಶೇಷನು ಹೇಳಿದನು :—ಶತ್ರುಘ್ನನೇ ಮೊದಲಾದ ರಾಜರೂ ವೀರರೂ ರಥಗಳೂ ಹೋಗುತ್ತಿರಲಾಗಿ ಅಕಸ್ಮಾತ್ತಾಗಿ ಇವರು ನಮ್ಮವರು, ಇವರು ಪರರು ಎಂಬ ಜ್ಞಾನಕ್ಕೆ ಅವಕಾಶವಿಲ್ಲದಂತೆ ಕತ್ತಲೆಯುಂಟಾಯಿತು.

೩-೪. ಅಂತರಿಕ್ಷದಲ್ಲೆಲ್ಲಾ ಧೂಳು ವ್ಯಾಪಿಸಿಕೊಂಡಿತು. ಮಿಂಚು ಗುಡುಗುಗಳು ಹೆಚ್ಚಾಗಿದ್ದುವು. ಈ ಭಯಂಕರವಾದ ಅಂತರಿಕ್ಷದಲ್ಲಿ ಮೇಘಗಳು ರಕ್ತವನ್ನು ಸುರಿಸಿದವು. ಆ ರಕ್ತದ ಜೊತೆಯಲ್ಲಿ ಕೀವುಮಲಗಳೂ ಬೀಳುತ್ತಿದ್ದುವು. ವೀರರೆಲ್ಲರೂ ಬಹು ವ್ಯಥೆಯಿಂದ ಕೂಡಿದರು.

ಆಕುಲೀಕೃತಲೋಕೇ ತು ಕಿಮಿದಂ ಕಿಮಿತಿ ಸ್ಥಿತಂ ।
ತಮೋವ್ಯಾಪ್ತಾನಿ ಲೋಕಾನಾಂ ಚಕ್ಷೂಂಷಿ ಪ್ರಥಿತೌಜಸಾಂ ॥ ೫ ॥

ಜಹಾರಾಶ್ವಂ ರಾವಣಸ್ಯ ಸುಹೃತ್ಪಾತಾಳಸಂಸ್ಥಿತಃ ।
ವಿದ್ಯುನ್ಮಾಲೀತಿ ವಿಖ್ಯಾತೋ ರಾಕ್ಷಸಶ್ರೇಣಿಸಂವೃತಃ ॥ ೬ ॥

ಕಾಮಗೇ ಸುವಿಮಾನೇ ತು ಸರ್ವಾಯುಧನಿಷೇವಿಣಿ ।
ಆರೂಢೋಽಶ್ವಂ ತು ವೀರಾಣಾಂ ಭಯಂ ಕುರ್ವನ್ ಜಹಾರ ಹ ॥ ೭ ॥

ಮುಹೂರ್ತಾತ್ತತ್ತಮೋ ನಷ್ಟಮಾಕಾಶಂ ನಿರ್ಮಲಂ ಬಭೌ ।
ವೀರಾಶ್ಶತ್ರುಘ್ನ ಮುಖ್ಯಾಸ್ತು ಪ್ರೋಚುಃ ಕುತ್ರ ಹಯೋಽಸ್ತಿ ಸಃ ॥ ೮ ॥

ತೇ ಸರ್ವೇ ಹಯರಾಜಂ ತು ಲೋಕಯಂತಃ ಪರಸ್ಪರಂ ।
ದದೃಶುರ್ನ ಯದಾ ವಾಹಂ ಹಾಹಾಕಾರಸ್ತದಾಭವತ್ ॥ ೯ ॥

---

೫. ಜನರೆಲ್ಲರೂ ದುಃಖಪಡುತ್ತ ಇದೇನು ? ಇದೇನು ? ಎನ್ನುತ್ತಿದ್ದರು. ಜನಗಳ ಕಣ್ಣುಗಳೆಲ್ಲವೂ ಕತ್ತಲೆಯಿಂದ ಕಾಣದಾಗಿದ್ದುವು.

೬. ಪಾತಾಳದಲ್ಲಿದ್ದ ರಾವಣನ ಸ್ನೇಹಿತನಾದ ವಿದ್ಯುನ್ಮಾಲಿಯು ತನ್ನ ಪರಿವಾರದೊಂದಿಗೆ ಬಂದು ರಾಮನ ಕುದುರೆಯನ್ನು ಅಪಹರಿಸಿದನು.

೭. ಅವನು ಇಷ್ಟಬಂದ ಕಡೆ ಹೋಗುವಂತಿರುವ ಕಬ್ಬಿಣದ ವಿಮಾನದಲ್ಲಿ ಕುಳಿತು, ಈ ಕುದುರೆಯನ್ನು ಹಿಡಿದು ವೀರರಿಗೆ ಭಯವನ್ನುಂಟುಮಾಡಿ ಹೋದನು.

೮. ಕ್ಷಣಕಾಲದಲ್ಲಿಯೇ ಆ ಕತ್ತಲೆಯು ಹೋಯಿತು. ಆಕಾಶವು ನಿರ್ಮಲವಾಯಿತು. ಶತ್ರುಘ್ನನೇ ಮುಂತಾದವರು ಕುದುರೆ ಎಲ್ಲಿ ? ಕುದುರೆ ಎಲ್ಲಿ ? ಎಂದು ನೋಡಿದರು.

೯. ಅವರೆಲ್ಲರೂ ಆ ಕುದುರೆಯನ್ನು ಹುಡುಕುತ್ತಾ ಅದು ಕಾಣದಿರಲು ಹಾಹಾಕಾರವನ್ನು ಮಾಡಿದರು.

ಕುತ್ರಾಶ್ವೋ ಹಯಮೇಧಸ್ಯ ಕೇನ ನೀತಃ ಕುಬುದ್ಧಿನಾ ।
ಇತಿ ವಾಚಮುವೋಚುಸ್ತೇ ತಾವತ್ಸ ದನುಜೇಶ್ವರಃ ॥ ೧೦ ॥

ದದೃಶೇ ಸುಭಟೈಸ್ಸರ್ವೈ ರಥಸ್ಥೈಶ್ಶೌರ್ಯಶೋಭಿತೈಃ ।
ವಿಮಾನವರಮಾರೂಢೋ ರಾಕ್ಷಸಾಗ್ರೈಸ್ಸಮಾವೃತಃ ॥ ೧೧ ॥

ದುರ್ಮುಖಾ ವಿಕರಾಳಾಸ್ಯಾ ಲಂಬದಂಷ್ಟ್ರಾ ಭಯಾನಕಾಃ ।
ರಾಕ್ಷಸಾಸ್ತತ್ರ ದೃಶ್ಯಂತೇ ಸೈನ್ಯಗ್ರಾಸಾಯ ಚೋದ್ಯತಾಃ ॥ ೧೨ ॥

ತದಾ ತಂ ವೇದಯಾಮಾಸುಃ ಶತ್ರುಘ್ನಂ ನೃವರೋತ್ತಮಂ ।
ಹಯೋ ನೀತೋ ನ ಜಾನೀಮಃ ಖೇ ವಿಮಾನವಿಲಾಸಿನಾ ॥ ೧೩ ॥

ತಮಸಾ ವ್ಯಾಕುಲಾನ್ ಕೃತ್ವಾ ವೀರಾನಸ್ಮಾನ್ಸಮಾಯಯೌ ।
ಜಗ್ರಾಹ ನೃಪಶಾರ್ದೂಲ ಹಯಂ ಕುರು ಯಥೋಚಿತಂ ॥ ೧೪ ॥

---

೧೦. ಯಜ್ಞದ ಕುದುರೆ ಎಲ್ಲಿ? ಯಾವ ದುಷ್ಟನು ತೆಗೆದುಕೊಂಡು ಹೋದನು? ಹೀಗೆನ್ನುತ್ತಿರುವಲ್ಲಿ ಆ ರಾಕ್ಷಸನನ್ನು ಕಂಡರು.

೧೧. ರಾಕ್ಷಸವೀರರೊಡನೆ ವಿಮಾನದಲ್ಲಿ ಕುಳಿತಿರುವ ಆ ವಿದ್ಯುನ್ಮಾಲಿಯನ್ನು ಆ ರಥಿಕರಾದ ಸುಭಟರೆಲ್ಲರೂ ನೋಡಿದರು.

೧೨. ಕ್ರೂರವಾದ ಮುಖ, ನೇತಾಡುವ ಹಲ್ಲುಗಳುಳ್ಳ ರಾಕ್ಷಸರು ಸೈನ್ಯವನ್ನು ತಿನ್ನಲು ಸಿದ್ಧರಾಗಿರುವುದನ್ನು ನೋಡಿದರು.

೧೩. ಅವರು ಶತ್ರುಘ್ನನನ್ನು ಕುರಿತು—ಒಬ್ಬನು ಅಂತರಿಕ್ಷದಲ್ಲಿ ಹೋಗುತ್ತಿದ್ದಾನೆ. ಅವನು ಕುದುರೆಯನ್ನು ಕೊಂಡು ಹೋದನೋ ಇಲ್ಲವೋ ಗೊತ್ತಿಲ್ಲ; ಕೊಂಡುಹೋಗಿರಬಹುದು.

೧೪. ಅವನು ವೀರರಾದ ನಮ್ಮನ್ನು ಮಾಯೆಯಿಂದ ವಂಚಿಸಿ ಕತ್ತಲೆಮಾಡಿ ಕುದುರೆಯನ್ನು ಕೊಂಡುಹೋದನು. ನಿನ್ನ ಇಷ್ಟಬಂದಂತೆ ಯೋಗ್ಯವಾದುದನ್ನು ಮಾಡು. ಎಂದರು.

ಶತ್ರುಘ್ನಸ್ತದ್ವಚಶ್ಶ್ರುತ್ವಾ ಮಹಾರೋಷಸಮಾವೃತಃ ।
ಕೋಽಸ್ತ್ಯೇಷ ರಾಕ್ಷಸೋ ಯೋ ಮೇ ಹಯಂ ಜಗ್ರಾಹ ವೀರ್ಯವಾನ್ ॥ ೧೫ ॥

ವಿಮಾನಂ ತತ್ಪತತ್ವದ್ಯ ಮದ್ಬಾಣವ್ರಜನಿರ್ಧುತಂ ।
ಪತತ್ವಸ್ಯ ಶಿರಸ್ತಸ್ಯ ಕ್ಷುರಪ್ರೈರ್ಮಮ ವೈರಿಣಃ ॥ ೧೬ ॥

ಸಜ್ಜೀಯಂತಾಂ ರಥಾಸ್ಸರ್ವೇ ಮಹಾಶಸ್ತ್ರಾಸ್ತ್ರಪೂರಿತಾಃ ।
ಯಾಂತು ತಂ ಪ್ರತಿ ಸಂಹರ್ತುಂ ಯೋದ್ಧಾರೋ ವಾಜಿಹಾರಿಣಂ ॥ ೧೭ ॥

ಇತ್ಯುಕ್ತ್ವಾ ರೋಷತಾಮ್ರಾಕ್ಷ ಉವಾಚ ನಿಜಮಂತ್ರಿಣಂ ।
ನಯಾನಯವಿದಂ ಶೂರಂ ಯುದ್ಧಕಾರ್ಯವಿಶಾರಧಂ ॥ ೧೮ ॥

॥ ಶತ್ರುಘ್ನ ಉವಾಚ ॥

ಮಂತ್ರಿನ್ ಕಥಯ ಕೇ ಯೋಜ್ಯಾ ರಾಕ್ಷಸಸ್ಯ ವಧೋದ್ಯತಾಃ ।
ಮಹಾಶೂರಾ ಮಹಾಶಸ್ತ್ರಾಃ ಪರಮಾಸ್ತ್ರವಿದುತ್ತಮಾಃ ॥ ೧೯ ॥

---

೧೫. ಶತ್ರುಘ್ನನು ಈ ಮಾತನ್ನು ಕೇಳಿ ಕೋಪಗೊಂಡು ನನ್ನ ಕುದುರೆಯನ್ನು ತೆಗೆದುಕೊಂಡು ಹೋಗುವಷ್ಟು ಬಲಿಷ್ಠನಾದ ರಾಕ್ಷಸನೂ ಇರುವನೇ ?

೧೬. ನನ್ನ ಹರಿತವಾದ ಶರದಿಂದ ಅವನ ವಿಮಾನವು ಈಗಲೇ ಬೀಳಲಿ. ಅವನ ತಲೆಯೂ ಈಗಲೇ ಕತ್ತರಿಸಿ ಬೀಳಲಿ.

೧೭. ಶಸ್ತ್ರಾಸ್ತ್ರಗಳನ್ನು ತುಂಬಿ ರಥವನ್ನು ಸಿದ್ಧಮಾಡು. ಆ ಕುದುರೆ ಕಳ್ಳನನ್ನು ಕೊಲ್ಲಲು ಯೋಧರೆಲ್ಲರೂ ಹೊರಡಲಿ.

೧೮. ಯುದ್ಧದಲ್ಲಿ ವಿಶಾರದನಾದ, ನೀತಿಯನ್ನು ಬಲ್ಲ ಮಂತ್ರಿಯನ್ನು ಕರೆಸಿ ಕೇಳಿದನು.

೧೯. ಶತ್ರುಘ್ನನು ಹೇಳಿದನು:—ಯಾವ ಮಹಾಶೂರರನ್ನು ಈ ರಾಕ್ಷಸನ ವಧೆಗೆ ನಿಯಮಿಸಲಿ ?

ಕಥಯಾಶು ವಿಚಾರ್ಯೈವಂ ತತ್ಕರೋಮಿ ಭವದ್ವಚಃ ।
ವೀರಾನ್ ಕಥಯ ತಸ್ಯೈವಂ ಯೋಗ್ಯಾನ್ ಸರ್ವಾಸ್ತ್ರಕೋವಿದಾನ್ ॥ ೨೦ ॥

ಏತಚ್ಛ್ರುತ್ವಾಥ ಸಚಿವಃ ಪ್ರಾಹ ವಾಕ್ಯಂ ಯಥೋಚಿತಂ ।
ರಣೇ ವೀರವರಾನ್ ಯೋಗ್ಯಾನ್ ನಿರ್ದಿಶಂಸ್ತರಸಾನ್ವಿತಾನ್ ॥ ೨೧ ॥

॥ ಸುಮತಿರುವಾಚ ॥

ಜೇತುಂ ಗಚ್ಛತು ತದ್ರಕ್ಷಃ ಸಮರೇ ವಿಜಯೋದ್ಯತಃ ।
ಮಹಾನ್ ಶಸ್ತ್ರಾಸ್ತ್ರಸಂಯುಕ್ತಃ ಪುಷ್ಕಲಃ ಪರತಾಪನಃ ॥ ೨೨ ॥

ತಥಾ ಲಕ್ಷ್ಮೀನಿಧಿರ್ಯಾತು ಶಸ್ತ್ರಸಂಘಸಮನ್ವಿತಃ ।
ಕರೋತು ತಸ್ಯ ಯಾನಸ್ಯ ಭಂಗಂ ತೀಕ್ಷ್ಣೈಸ್ಸ್ವಸಾಯಕೈಃ ॥ ೨೩ ॥

ಹನೂಮಾನ್ ದೃಷ್ಟಕರ್ಮಾತ್ರ ರಾಕ್ಷಸಾಯೋಧನಕ್ಷಮಃ ।
ಕರೋತು ಮುಖಪುಚ್ಛಾಭ್ಯಾಂ ತಾಡನಂ ರಕ್ಷಸಾಂ ಪ್ರಭೋ ॥ ೨೪ ॥

ವಾನರಾ ಅಪಿ ಯೇ ವೀರಾ ರಣಕರ್ಮವಿಶಾರದಾಃ ।
ಗಚ್ಛಂತು ತೇಽಖಿಲಾ ಯೋದ್ಧುಂ ತವ ವಾಕ್ಯಪ್ರಣೋದಿತಾಃ ॥ ೨೫ ॥

---

೨೦. ಜಾಗ್ರತೆ ವಿಚಾರಿಸಿ ಹೇಳು. ನೀನು ಹೇಳಿದಂತೆ ಮಾಡುತ್ತೇನೆ. ಅದಕ್ಕೆ ಯೋಗ್ಯರಾದ ವೀರರನ್ನು ಹೇಳು.

೨೧. ಇದನ್ನು ಕೇಳಿ ಆ ಮಂತ್ರಿಯು ಯುದ್ಧದಲ್ಲಿ ಯೋಗ್ಯರಾದವರನ್ನು ತೋರಿಸುತ್ತಾ ಇಂತೆಂದನು.

೨೨-೨೩. ಸುಮತಿಯು ಹೇಳಿದನು:—ಅವನನ್ನು ಜಯಿಸಲು ಶಸ್ತ್ರಾಸ್ತ್ರಗಳೊಡನೆ ಪುಷ್ಕಲನೂ ಲಕ್ಷ್ಮೀನಿಧಿಯೂ ಹೋಗಲಿ; ಹೋಗಿ ಅವನ ಪ್ರಯಾಣಕ್ಕೆ ವಿಘ್ನವನ್ನುಂಟುಮಾಡಲಿ.

೨೪. ಹನುಮಂತನು ಇಂತಹವನನ್ನು ನೋಡಿರುವನು. ಅವನು ಮುಖಪುಚ್ಛಗಳಿಂದ ಅವರನ್ನು ಹೊಡೆಯಲಿ.

೨೫. ರಣಕರ್ಮದಲ್ಲಿ ಪಂಡಿತರಾದ ವಾನರರು ಎಲ್ಲರೂ ಯುದ್ಧಕ್ಕೆ ಹೋಗಲಿ.

**ಸುಮದಶ್ಚ ಸುಬಾಹುಶ್ಚ ಪ್ರತಾಪಾಗ್ರ್ಯಶ್ಚ ಸತ್ತಮಾಃ ।**
**ಗಚ್ಛಂತು ಸಾಯಕೈಸ್ತೀಕ್ಷ್ಣೈಸ್ತಾನ್ಯೋದ್ಧುಂ ರಾಕ್ಷಸಾಧಮಾನ್ ॥ ೨೬ ॥**

**ಭವಾನಪಿ ಮಹಾಶಸ್ತ್ರಪರೀವಾರೋ ರಥೇ ಸ್ಥಿತಃ ।**
**ಕರೋತು ವಿಜಯಂ ಯುದ್ಧೇ ರಾಕ್ಷಸಂ ಹಂತುಮುದ್ಯತಃ ॥ ೨೭ ॥**

**ಏತನ್ಮಮ ಮತಂ ರಾಜನ್ ಯೇ ಯೋಧಾಸ್ತತ್ಪ್ರಮರ್ದನಾಃ ।**
**ತೇ ಗಚ್ಛಂತು ರಣೇ ಶೂರಾಃ ಕಿಮನ್ಯೈರ್ಬಹುಭಿರ್ಭಟೈಃ ॥ ೨೮ ॥**

**ಇತ್ಯುಕ್ತವತಿ ವೀರಾಗ್ರ್ಯೇಽಮಾತ್ಯೇ ಸುಮತಿಸಂಜ್ಞಕೇ ।**
**ಶತ್ರುಘ್ನಃ ಕಥಯಾಮಾಸ ವೀರಾನ್ ಸಂಗ್ರಾಮಕೋವಿದಾನ್ ॥ ೨೯ ॥**

**ಯೇ ವೀರಾಃ ಪುಷ್ಕಲಾದ್ಯಾಸ್ತು ಸರ್ವಶಸ್ತ್ರಾಸ್ತ್ರಕೋವಿದಾಃ ।**
**ತೇ ವದಂತು ಪ್ರತಿಜ್ಞಾಂ ವೈ ಮತ್ಪುರೋ ರಾಕ್ಷಸಾರ್ದನೇ ॥ ೩೦ ॥**

**ಕೃತ್ವಾ ಪ್ರತಿಜ್ಞಾಂ ವಿಪುಲಾಂ ಸ್ವಪರಾಕ್ರಮಶೋಭಿನೀಂ ।**
**ಗಚ್ಛಂತು ರಣಮಧ್ಯೇ ಹಿ ಯೂಯಂ ಬಲಸಮನ್ವಿತಾಃ ॥ ೩೧ ॥**

---

೨೬. ಸುಮದ, ಸುಬಾಹು, ಪ್ರತಾಪಾಗ್ರ್ಯರುಗಳು ಯುದ್ಧಮಾಡಲು ಹೋಗಲಿ.

೨೭. ನೀನೂ ಕೂಡ ಪರಿವಾರದೊಂದಿಗೆ ರಥದಲ್ಲಿದ್ದುಕೊಂಡು ರಾಕ್ಷಸನನ್ನು ಹೊಡೆಯಬೇಕು.

೨೮. ಇದು ನನಗೆ ಸಮ್ಮತವು. ಶಕ್ತರಾದವರು ಹೋಗಲಿ. ಉಳಿದವರು ಬೇಡ; ಎಂದನು.

೨೯. ವೀರನಾದ ಸುಮತಿಯು ಹೀಗೆ ಹೇಳಲು, ವೀರರನ್ನು ಕುರಿತು ಶತ್ರುಘ್ನನು ಇಂತೆಂದನು.

೩೦. ಸರ್ವಶಸ್ತ್ರಗಳನ್ನು ಅರಿತ ಪುಷ್ಕಲನೇ ಮುಂತಾದವರು ನನ್ನ ಮುಂದೆ ರಾಕ್ಷಸನನ್ನು ಕೊಲ್ಲುವುದರಲ್ಲಿ ಪ್ರತಿಜ್ಞೆಯನ್ನು ಮಾಡಿರಿ.

೩೧. ನಿಮ್ಮ ಪರಾಕ್ರಮಕ್ಕೆ ತಕ್ಕಂತೆ ಪ್ರತಿಜ್ಞೆಯನ್ನು ಮಾಡಿ ಸೈನ್ಯದಿಂದ ಕೂಡಿಕೊಂಡು ಹೋಗಿರಿ.

ಇತಿ ವಾಕ್ಯಂ ಸಮಾಕರ್ಣ್ಯ ಶತ್ರುಘ್ನಸ್ಯ ಮಹಾಬಲಾಃ ।
ಸ್ವಾಂ ಸ್ವಾಂ ಪ್ರತಿಜ್ಞಾಂ ಮಹತೀಂ ಚಕ್ರುಸ್ತೇಜಸ್ಸಮನ್ವಿತಾಃ ॥ ೩೨ ॥

ತತ್ರಾದೌ ಪುಷ್ಕಲೋ ವೀರಃ ಶ್ರುತ್ವಾ ವಾಕ್ಯಂ ಮಹೀಪತೇಃ ।
ಪರಮೋತ್ಸಾಹಸಂಪನ್ನಃ ಪ್ರತಿಜ್ಞಾಮೂಚಿವಾನಿಮಾಂ ॥ ೩೩ ॥

॥ ಪುಷ್ಕಲ ಉವಾಚ ॥

ಶೃಣುಷ್ವ ನೃಪಶಾರ್ದೂಲ ಮತ್ಪ್ರತಿಜ್ಞಾಂ ಪರಾಕ್ರಮಾತ್ ।
ವಿಹಿತಾಂ ಸರ್ವಲೋಕಾನಾಂ ಶೃಣ್ವತಾಂ ಪರಮಾದ್ಭುತಾಂ ॥ ೩೪ ॥

ಚೇನ್ನ ಕುರ್ಯಾಂ ಕ್ಷುರಪ್ರಾಗ್ರ್ಯೈಸ್ತೀಕ್ಷ್ಣೈಃ ಕೋದಂಡನಿರ್ಗತೈಃ ।
ದೈತ್ಯಂ ಮೂರ್ಛಾಸಮಾಕ್ರಾಂತಂ ಕೀರ್ಣಕೇಶಾಕುಲಾನನಂ ॥ ೩೫ ॥

ಕನ್ಯಾಸ್ವಭೋಕ್ತುರ್ಯತ್ಪಾಪಂ ಯತ್ಪಾಪಂ ದೇವನಿಂದನೇ ।
ತತ್ಪಾಪಂ ಮಮ ವೈ ಭೂಯಾಚ್ಚೇತ್ಕುರ್ಯಾಂ ಸ್ವವಚೋಽನೃತಂ ॥ ೩೬ ॥

---

೩೨. ಶತ್ರುಘ್ನನ ಮಾತನ್ನು ಕೇಳಿ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಪ್ರತಿಜ್ಞೆಮಾಡಿದರು.

೩೩. ಅದರಲ್ಲಿ ಮೊದಲು ಪುಷ್ಕಲನು ರಾಜನ ಮಾತನ್ನು ಕೇಳಿ ಉತ್ಸಾಹದಿಂದ ಇಂತೆಂದನು.

೩೪. ಪುಷ್ಕಲನು ಹೇಳಿದನು:—ಎಲೈ! ರಾಜನೇ, ನನ್ನ ಪ್ರತಿಜ್ಞೆಯನ್ನು ಕೇಳು. ಸಮಸ್ತ ಜನಗಳ ಎದುರಿನಲ್ಲೂ ಈ ಅದ್ಭುತವಾದ ಪ್ರತಿಜ್ಞೆಯನ್ನು ಮಾಡುತ್ತೇನೆ.

೩೫-೩೬. ಆ ರಾಕ್ಷಸನನ್ನು ಬಾಣಗಳಿಂದ ಹೊಡೆದು ಮೂರ್ಛೆ ಬೀಳಿಸದಿದ್ದರೆ ತನ್ನ ಮಗಳಲ್ಲಿ ತಾನೇ ರಮಿಸಿದವನಿಗೆ ಬರುವ ಪಾಪವೂ, ದೇವನಿಂದಿತನಿಗೆ ಬರುವ ಪಾಪವೂ ನನಗೆ ಬರಲಿ.

ಯದಿ ಮದ್ಬಾಣನಿರ್ಭಿನ್ನಾಃ ಸೈನಿಕಾಸ್ಸುಮಹಾಬಲಾಃ ।
ನ ಪತಂತಿ ಮಹಾರಾಜ ಪ್ರತಿಜ್ಞಾಂ ತತ್ರ ಮೇ ಶೃಣು　　॥ ೩೭ ॥

ವಿಷ್ಣ್ವೀಶಯೋರ್ವಿಭೇದಂ ಯಃ ಶಿವಶಕ್ತ್ಯೋಃ ಕರೋತ್ಯಪಿ ।
ತತ್ಪಾಪಂ ಮಮ ವೈ ಭೂಯಾಚ್ಚೇನ್ನ ಕುರ್ಯಾಮೃತಂ ವಚಃ　　॥ ೩೮ ॥

ಸರ್ವಂ ಮದ್ವಾಕ್ಯಮಿತ್ಯುಕ್ತಂ ರಘುನಾಥಪದಾಂಬುಜೇ ।
ಭಕ್ತಿರ್ಮೇ ನಿಶ್ಚಲಾ ಯಾಸ್ತಿ ಸೈವ ಸತ್ಯಂ ಕರಿಷ್ಯತಿ　　॥ ೩೯ ॥

ಪುಷ್ಕಲಸ್ಯ ಪ್ರತಿಜ್ಞಾಂ ತಾಂ ಶ್ರುತ್ವಾ ಲಕ್ಷ್ಮೀನಿಧಿರ್ನೃಪಃ ।
ಪ್ರತಿಜ್ಞಾಂ ವ್ಯದಧಾತ್ಸತ್ಯಾಂ ಸ್ವಪರಾಕ್ರಮಶೋಭಿತಾಂ　　॥ ೪೦ ॥

॥ ಲಕ್ಷ್ಮೀನಿಧಿರುವಾಚ ॥

ವೇದಾನಾಂ ನಿಂದನಂ ಶ್ರುತ್ವಾ ಆಸ್ತೇ ಯೋ ಮೌನಿವನ್ನರಃ ।
ಮಾನಸೇ ರೋಚಯೇದ್ಯಸ್ತು ಸರ್ವಧರ್ಮಬಹಿಷ್ಕೃತಃ　　॥ ೪೧ ॥

---

೩೭. ನಾನು ಬಾಣಗಳನ್ನು ಹೊಡೆದು ಸೈನಿಕರನ್ನು ಕೆಳಗೆ ಕೆಡವದಿದ್ದರೆ ನನ್ನ ಪ್ರತಿಜ್ಞೆಯನ್ನು ಕೇಳು.

೩೮. ನನ್ನ ಮಾತನ್ನು ಸತ್ಯಮಾಡಿಕೊಳ್ಳದಿದ್ದರೆ ವಿಷ್ಣು ಈಶ್ವರರಿಗೆ ಭೇದ ಹುಡುಕುವವನಿಗೆ ಬರುವ ಪಾಪವೂ, ಶಿವನಿಗೂ ಶಕ್ತಿಗೂ ಭೇದ ಕಲ್ಪಿಸುವವನ ಪಾಪವೂ ನನಗೆ ಬರಲಿ.

೩೯. ಈ ನಾನು ಹೇಳಿದ ಪ್ರತಿಜ್ಞೆಯೆಲ್ಲ, ನನಗೆ ರಾಮನ ಪಾದಕಮಲದಲ್ಲಿ ಭಕ್ತಿಯು ನಿಶ್ಚಲವಾಗಿದ್ದರೆ ಸತ್ಯವಾಗಲಿ. ಅದೇ ಸತ್ಯವನ್ನಾಗಿ ಮಾಡುತ್ತದೆ.

೪೦. ಲಕ್ಷ್ಮೀನಿಧಿಯು ಪುಷ್ಕಲನ ಈ ಪ್ರತಿಜ್ಞೆಯನ್ನು ಕೇಳಿ ತನ್ನ ಪರಾಕ್ರಮಕ್ಕೆ ತಕ್ಕಂತೆ ತಾನೂ ಪ್ರತಿಜ್ಞೆಮಾಡಿದನು.

೪೧. ಲಕ್ಷ್ಮೀನಿಧಿಯು ಹೇಳಿದನು :—ಯಾವನು ವೇದಗಳನ್ನು ನಿಂದಿಸುವುದನ್ನು ಕೇಳಿ ಮೌನವಾಗಿರುತ್ತಾನೆಯೋ, ಮನಸ್ಸಿನಲ್ಲಿಯೂ ಅದು ಅವನಿಗೆ ರುಚಿಸುತ್ತದೆಯೋ, ಯಾವನು ಸರ್ವಧರ್ಮಗಳಿಂದ ಬಹಿಷ್ಕೃತನಾಗಿದ್ದಾನೆಯೋ ಅವನು ಮಹಾಪಾಪಿ.

ಬ್ರಾಹ್ಮಣೋ ಯೋ ದುರಾಚಾರೋ ರಸಲಾಕ್ಷಾದಿವಿಕ್ರಯೀ ।
ವಿಕ್ರೀಣಾತಿ ಚ ಗಾಂ ಮೂಢೋ ಧನಲೋಭೇನ ಮೋಹಿತಃ ॥ ೪೨ ॥

ಮ್ಲೇಚ್ಛಕೂಪೋದಕಂ ಪೀತ್ವಾ ಪ್ರಾಯಶ್ಚಿತ್ತಂ ತು ನಾಚರೇತ್ ।
ತತ್ಪಾಪಂ ಮಮ ವೈ ಭೂಯಾದ್ವಿಮುಖಶ್ಚೇದ್ಭವಾಮ್ಯಹಂ ॥ ೪೩ ॥

ತತ್ಪ್ರತಿಜ್ಞಾಮಥಾಶ್ರುತ್ಯ ಹನೂಮಾನ್ರಣಕೋವಿದಃ ।
ರಾಮಾಂಘ್ರಿಸ್ಮರಣಂ ಕೃತ್ವಾ ಪ್ರೋವಾಚ ವಚನಂ ಶುಭಂ ॥ ೪೪ ॥

ಮತ್ಸ್ವಾಮೀ ಹೃದಯೇ ನಿತ್ಯಂ ಧ್ಯೇಯೋ ವೈ ಯೋಗಿಭಿರ್ಭೃಶಂ ।
ಯಂ ದೇವಾಸ್ಸಾಸುರಾಸ್ಸರ್ವೇ ನಮಂತಿ ಮಣಿಮೌಳಿಭಿಃ ॥ ೪೫ ॥

ರಾಮಶ್ಶ್ರೀಮಾನಯೋಧ್ಯಾಯಾಃ ಪತಿರ್ಲೋಕೇಶಪೂಜಿತಃ ।
ತಂ ಸ್ಮೃತ್ವಾ ಯದ್ಬ್ರುವೇ ವಾಕ್ಯಂ ತದ್ವೈ ಸತ್ಯಂ ಭವಿಷ್ಯತಿ ॥ ೪೬ ॥

ರಾಜನ್ ಕೋಽಯಂ ಲಘುರ್ದೈತ್ಯೋ ದುರ್ಬಲಃ ಕಾಮಗೇ ಸ್ಥಿತಃ ।
ಕಥಯಾಶು ಮಯಾ ಕಾರ್ಯಮೇಕೇನ ವಿನಿಪಾತನಂ ॥ ೪೭ ॥

---

೪೨-೪೩. ಬ್ರಾಹ್ಮಣನು ದುರಾಚಾರಿಯಾಗಿ ರಸಗಳನ್ನು ಅರಗನ್ನು ಮಾರುತ್ತ ಹಸುವನ್ನು ಮಾರುತ್ತಾನೆಯೋ ಅವನು ಪಾಪಿ. ಮ್ಲೇಚ್ಛರು ನೀರನ್ನು ಉಪಯೋಗಿಸುತ್ತಿರುವ ಭಾವಿಯಲ್ಲಿ ನೀರನ್ನು ಕುಡಿದು ಯಾವನು ಬ್ರಾಹ್ಮಣನು ಪ್ರಾಯಶ್ಚಿತ್ತ ಮಾಡಿಕೊಳ್ಳುವುದಿಲ್ಲವೋ ಅವನು ಪಾಪಿ. ನಾನು ಯುದ್ಧದಿಂದ ವಿಮುಖನಾದರೆ ಆ ಪಾಪಗಳೆಲ್ಲಾ ನನಗೆ ಬರಲಿ.

೪೪. ಅವರ ಪ್ರತಿಜ್ಞೆಯನ್ನು ಕೇಳಿ ಬುದ್ಧಿಶಾಲಿಯಾದ ಹನುಮಂತನು ರಾಮನ ಪಾದಗಳನ್ನು ಸ್ಮರಿಸಿ ಇಂತೆಂದನು.

೪೫-೪೬. ಯೋಗಿಗಳಿಂದ ಧ್ಯಾನಿಸಲ್ಪಡುವ, ದೇವಾಸುರರು ನಮಸ್ಕರಿಸುವ ಪಾದಗಳುಳ್ಳ, ಲೋಕದಲ್ಲಿರುವವರೆಲ್ಲರಿಂದಲೂ ಪೂಜಿಸಲ್ಪಡುವ, ಅಯೋಧ್ಯೆಗೆ ಸ್ವಾಮಿಯಾದ, ಯಾವಾಗಲೂ ನನ್ನ ಹೃದಯದಲ್ಲೇ ಇರುವ ಆ ಶ್ರೀರಾಮನನ್ನು ಸ್ಮರಿಸಿ ಏನು ಹೇಳುತ್ತೇನೆಯೋ ಅದು ಸತ್ಯವಾಗುತ್ತದೆ.

೪೭. ಎಲೈ! ರಾಜನೇ, ಅಲ್ಪನಾದ ದೈತ್ಯನೆಷ್ಟರವನು? ದುರ್ಬಲನಾಗಿ ವಿಮಾನದಲ್ಲಿ ಸಂಚಾರಮಾಡುವ ಇವನಲ್ಲಿ ಏನು ಬಲವಿದೆ? ನಾನೊಬ್ಬನೇ ಕೊಲ್ಲಲೇ? ಏನು ಮಾಡಲಿ ಹೇಳು.

ಮೇರುಂ ದೇವೇಂದ್ರಸಹಿತಂ ಲಾಂಗಲಾಗ್ರೇಣ ತೋಲಯೇ ।
ಜಲಧಿಂ ಶೋಷಯೇ ಸರ್ವಂ ಸಾಂವರ್ತಂ ವಾ ಪಿಬಾಮ್ಯಹಂ ॥ ೪೮ ॥

ರಾಜ್ಞಃಶ್ರೀರಘುನಾಥಸ್ಯ ಜಾನಕ್ಯಾಃ ಕೃಪಯಾ ಮಮ।
ತನ್ನಾಸ್ತಿ ಭೂತಳೇ ರಾಜನ್ ಯದಸಾಧ್ಯಂ ಕದಾ ಭವೇತ್ ॥ ೪೯ ॥

ಏತದ್ವಾಕ್ಯಂ ಮಯಾ ಪ್ರೋಕ್ತಮನೃತಂ ಸ್ಯಾದ್ಯದಿ ಪ್ರಭೋ ।
ತದೈವ ರಘುನಾಥಸ್ಯ ಭಕ್ತಿದೂರೋ ಭವಾಮ್ಯಹಂ ॥ ೫೦ ॥

ಯಃಶೂದ್ರಃ ಕಪಿಲಾಂ ಗಾಂ ವೈ ಪಯೋಬುದ್ಧ್ಯಾನುಪಾಲಯೇತ್ ।
ತಸ್ಯ ಪಾಪಂ ಮಮೈವಾಸ್ತು ಚೇತ್ಕುರ್ಯಾಮನೃತಂ ವಚಃ ॥ ೫೧ ॥

ಬ್ರಾಹ್ಮಣೀಂ ಗಚ್ಛತೇ ಮೋಹಾಚ್ಛೂದ್ರಃ ಕಾಮವಿಮೋಹಿತಃ ।
ತಸ್ಯ ಪಾಪಂ ಮಮೈವಾಸ್ತು ಚೇತ್ಕುರ್ಯಾಮನೃತಂ ವಚಃ ॥ ೫೨ ॥

---

೪೮. ದೇವೇಂದ್ರನೊಡನಿರುವ ಮೇರುವನ್ನು ಬಾಲದ ತುದಿಯಲ್ಲಿ ತೂಗುತ್ತೇನೆ. ಸಮುದ್ರವನ್ನು ಶೋಷಿಸಬಲ್ಲೆ. ಕಲ್ಪಕಾಲದ ಸಮುದ್ರವನ್ನು ಬೇಕಾದರೂ ಕುಡಿಯುತ್ತೇನೆ.

೪೯. ರಾಜನಾದ ರಘುನಾಥನ ಮತ್ತು ಜಾನಕಿಯ ಕೃಪೆಯಿಂದ ಭೂಲೋಕದಲ್ಲಿ ಅಸಾಧ್ಯವೆಂಬುದೇ ನನಗಿಲ್ಲ.

೫೦. ನಾನು ಹೇಳಿದ ಮಾತು ಸುಳ್ಳಾದರೆ ಆಗಲೇ ನಾನು ಆ ರಘುನಾಥನಲ್ಲಿರುವ ಭಕ್ತಿಯಿಂದ ದೂರವಾಗುತ್ತೇನೆ.

೫೧. ಯಾವ ಶೂದ್ರನು ಹಾಲಿಗೋಸ್ಕರ ಕಪಿಲೆಗೋವನ್ನು ಕಾಪಾಡುತ್ತಾನೆಯೋ ಅವನ ಪಾಪವು ನಾನು ಸುಳ್ಳಾಡಿದರೆ ಬರಲಿ.

೫೨. ಶೂದ್ರನು ಕಾಮಮೋಹಿತನಾಗಿ ಬ್ರಾಹ್ಮಣಸ್ತ್ರೀಯಲ್ಲಿ ರಮಿಸಿದರೆ ಬರುವ ಪಾಪವು ನಾನು ಅನೃತವನ್ನು ಹೇಳಿದರೆ ಬರಲಿ.

ಯದ್ಘ್ರಾಣಾನ್ನರಕಂ ಗಚ್ಛೇತ್ ಸ್ಪರ್ಶನಾಚ್ಚಾಪಿ ರೌರವಂ ।
ತಾಂ ಪಿಬನ್ಮದಿರಾಂ ಯೋ ವಾ ಜಿಹ್ವಾಸ್ವಾದೇನ ಲೋಲುಪಃ ॥ ೫೩ ॥

ತಸ್ಯ ಯುಜ್ಜಾಯತೇ ಪಾಪಂ ತನ್ಮಮ್ಯೈವಾಸ್ತು ನಿಶ್ಚಿತಂ ।
ಚೇನ್ನ ಕುರ್ಯಾಂ ಪ್ರತಿಜ್ಞಾಂ ಸ್ವಾಂ ಸತ್ಯಾಂ ರಾಮಕೃಪಾಬಲಾತ್ ॥ ೫೪ ॥

ಏವಮುಕ್ತೇ ಮಹಾವೀರಾ ಯೋದ್ಧಾರಸ್ತರಸಾ ಯುತಾಃ ।
ಚಕ್ರುಃ ಪ್ರತಿಜ್ಞಾಂ ಮಹತೀಂ ಸ್ವಪರಾಕ್ರಮಶಾಲಿನೀಂ ॥ ೫೫ ॥

ಶತ್ರುಘ್ನೋಽಪಿ ವ್ಯಧಾತ್ತತ್ರ ಪ್ರತಿಜ್ಞಾಂ ಪಶ್ಯತಾಂ ನೃಣಾಂ ।
ಸಾಧು ಸಾಧು ಪ್ರಶಂಸಂಶ್ಚ ತಾನ್ವೀರಾನ್ಯುದ್ಧಕೋವಿದಾನ್ ॥ ೫೬ ॥

ಕಥಯಾಮಿ ಪುರೋ ವಸ್ಸ್ವಾಂ ಪ್ರತಿಜ್ಞಾಂ ಸತ್ತ್ವಶೋಭಿತಾಂ ।
ತಚ್ಛೃಣ್ವಂತು ಮಹಾಭಾಗಾ ಯುದ್ಧೋತ್ಸಾಹಸಮನ್ವಿತಾಃ ॥ ೫೭ ॥

ಚೇತ್ತಸ್ಯ ಶಿರ ಆಹೃತ್ಯ ಪಾತಯಾಮಿ ನ ಸಾಯಕೈಃ ।
ವಿಮಾನಾಚ್ಚ ಕಬಂಧಾಚ್ಚ ಭಿನ್ನಂ ಛಿನ್ನಂ ಚ ಭೂತಳೇ ॥ ೫೮ ॥

ಯತ್ಪಾಪಂ ಕೂಟಸಾಕ್ಷ್ಯೇಣ ಯತ್ಪಾಪಂ ಸ್ವರ್ಣಚೌರ್ಯತಃ ।
ಯತ್ಪಾಪಂ ಬ್ರಹ್ಮನಿಂದಾಯಾಂ ತನ್ಮಮಾಸ್ತ್ವದ್ಯ ನಿಶ್ಚಯಾತ್ ॥ ೫೯ ॥

---

೫೩-೫೪. ಯಾವುದನ್ನು ವಾಸನೆ ನೋಡುವುದರಿಂದ ನರಕವೋ, ಮುಟ್ಟುವುದರಿಂದ ರೌರವವೋ, ಅಂತಹ ಹೆಂಡವನ್ನು ನಾಲಗೆಯ ಚಪಲದಿಂದ ಕುಡಿದವನ ಪಾಪವು, ರಾಮನ ಕೃಪಾಬಲದಿಂದ ಸತ್ಯ ಮಾಡದಿದ್ದರೆ ನನಗೆ ಬರಲಿ.

೫೫. ಹನುಮಂತನು ಹೀಗೆನ್ನಲು ವೀರರೆಲ್ಲರೂ ಅವರವರ ಯೋಗ್ಯತೆಗೆ ತಕ್ಕಂತೆ ಪ್ರತಿಜ್ಞೆ ಮಾಡಿದರು.

೫೬. ಶತ್ರುಘ್ನನೂ ಕೂಡ ಆ ವೀರರನ್ನು ಸಾಧು ಸಾಧು ಎಂದು ಹೊಗಳುತ್ತಾ ತಾನೂ ಅವರೆದುರಿಗೆ ಪ್ರತಿಜ್ಞೆಮಾಡಿದನು.

೫೭. ಎಲೈ, ಯುದ್ಧದಲ್ಲಿ ಉತ್ಸಾಹವುಳ್ಳ ವೀರರೆ, ನಿಮ್ಮೆದುರಿಗೆ ನನ್ನ ಪರಾಕ್ರಮಕ್ಕೆ ತಕ್ಕ ಪ್ರತಿಜ್ಞೆಯನ್ನು ಮಾಡುತ್ತೇನೆ.

೫೮-೫೯. ಅವನ ತಲೆಯನ್ನು ಕಡಿದು ವಿಮಾನದಿಂದಲೂ ಮುಂಡದಿಂದಲೂ ಕೆಳಗೆ ಕೆಡವದಿದ್ದರೆ ಸುಳ್ಳುಸಾಕ್ಷ್ಯದಿಂದ ಬರುವ ಪಾಪವೂ, ಚಿನ್ನದ ಕಳ್ಳತನದಿಂದ ಬರುವ ಪಾಪವೂ, ಬ್ರಹ್ಮನಿಂದೆಯಿಂದ ಬರುವ ಪಾಪವೂ ನನಗೆ ಬರಲಿ.

**ಇತಿ ಶತ್ರುಘ್ನಸದ್ವಾಕ್ಯಂ ಶ್ರುತ್ವಾ ತೇ ವೀರಪೂಜಿತಾಃ ।**
**ಧನ್ಯೋಽಸಿ ರಾಘವಭ್ರಾತಃ ಕಸ್ತ್ವದನ್ಯೋಽಪರೋ ಭವೇತ್ ॥ ೬೦ ॥**

**ತ್ವಯಾ ವಿನಿಹತೋ ದೈತ್ಯೋ ದೇವದಾನವದುಃಖದಃ ।**
**ಲವಣೋ ನಾಮ ಲೋಕೇಶ ಮಧುಪುತ್ರೋ ಮಹಾಬಲಃ ॥ ೬೧ ॥**

**ಕೋಽಯಂ ವೈ ರಾಕ್ಷಸೋ ದುಷ್ಟಃ ಕ್ವ ಚಾಸ್ಯ ಬಲಮಲ್ಪಕಂ ।**
**ಕರಿಷ್ಯಸಿ ಕ್ಷಣಾದೇವ ತಸ್ಯಾಪಾಯಂ ಮಹಾಮತೇ ॥ ೬೨ ॥**

**ಇತ್ಯುಕ್ತ್ವಾ ತೇ ಮಹಾವೀರಾಃ ಸಜ್ಜೀಭೂತಾ ರಣಾಂಗಣೇ ।**
**ಪ್ರತಿಜ್ಞಾಂ ಸ್ವಾಮೃತಾಂ ಕರ್ತುಂ ಯುಯುಸ್ತೇ ರಾಕ್ಷಸಂ ಮುದಾ ॥ ೬೩ ॥**

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
**ಸಂವಾದೇ ರಾಮಾಶ್ವಮೇಧೇ ವೀರಾಣಾಂ ಪ್ರತಿಜ್ಞಾಕಥನಂ**
**ನಾಮ ತ್ರಯಸ್ತ್ರಿಂಶೋಽಧ್ಯಾಯಃ**

---

೬೦. ಶತ್ರುಘ್ನನ ಆ ಮಾತನ್ನು ಕೇಳಿ ವೀರರು ಎಲೈ ! ರಾಘವನ ಸೋದರನೇ, ನಿನಗಿಂತಲೂ ಬೇರೆಯವನು ಧನ್ಯನಿಲ್ಲ. ನೀನೇ ಧನ್ಯನು.

೬೧. ದೇವದಾನವರಿಗೆ ದುಃಖವನ್ನು ಕೊಡುತ್ತಿದ್ದ ಮಧುಪುತ್ರನಾದ ಲವಣಾಸುರನನ್ನು ನೀನೇ ಕೊಂದೆ;

೬೨. ಈ ದುಷ್ಟನಾದ ರಾಕ್ಷಸನು ಎಷ್ಟರವನು? ಇವನ ಅಲ್ಪವಾದ ಶಕ್ತಿ ತಾನೆ ಎಷ್ಟರದು? ಒಂದು ಕ್ಷಣದಲ್ಲಿ ಅವನಿಗೆ ಅಪಾಯವನ್ನು ಮಾಡುತ್ತೀಯೆ.

೬೩. ಹೀಗೆಂದು ಹೇಳಿ ಆ ವೀರರು ಸಿದ್ಧರಾಗಿ ತಮ್ಮ ಪ್ರತಿಜ್ಞೆಯನ್ನು ಸಾರ್ಥಕಗೊಳಿಸಲು ಸಂತೋಷದಿಂದ ಹೊರಟರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ವೀರರ ಪ್ರತಿಜ್ಞಾಕಥನವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಚತುಸ್ತ್ರಿಂಶೋಽಧ್ಯಾಯಃ

॥ ಶೇಷ ಉವಾಚ ॥

ರಥೈಸ್ಸದಶ್ವೈಶ್ಶೋಭಾಢ್ಯೈಃ ಸರ್ವಶಸ್ತ್ರಾಸ್ತ್ರಪೂರಿತೈಃ ।
ನಾನಾರತ್ನಸಮಾಯುಕ್ತೈರ್ಯಯುಸ್ತೇ ರಾಕ್ಷಸಾಧಮಂ ॥ ೧ ॥

ತಾನ್ ದೃಷ್ಟ್ವಾ ಕಾಮಗೇ ಯಾನೇ ಸ್ಥಿತಃ ಪ್ರೋವಾಚ ರಾಕ್ಷಸಃ ।
ಮೇಘಗಂಭೀರಯಾ ವಾಚಾ ಗರ್ಜಯನ್ನಿವ ಭೂರಿಶಃ ॥ ೨ ॥

ಮಾ ಯಾಂತು ಸುಭಟಾ ಯೋದ್ಧುಂ ಗಚ್ಛಂತು ನಿಜಮಂದಿರಂ ।
ಮಾ ತ್ಯಜಂತು ಸ್ವಕಾನ್ಪ್ರಾಣಾನ್ನ ಮೋಕ್ಷ್ಯೇ ವಾಜಿನಂ ವರಂ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯವು

೧. ಶೇಷನು ಹೇಳಿದನು:—ಒಳ್ಳೆಯ ಕುದುರೆಗಳನ್ನು ಕಟ್ಟಿರುವ ರಥಗಳಲ್ಲಿ ಶಸ್ತ್ರಾಸ್ತ್ರಗಳನ್ನು ಇಟ್ಟುಕೊಂಡು ಆ ರಾಕ್ಷಸನನ್ನು ಕೊಲ್ಲಲು ಹೊರಟರು.

೨. ಹಾಗೆ ಬಂದ ಅವರುಗಳನ್ನು ನೋಡಿ ಆ ರಾಕ್ಷಸನು ಗುಡುಗಿನಂತಿರುವ ಧ್ವನಿಯಿಂದ ಹೆದರಿಸುತ್ತ ಹೇಳಿದನು.

೩. ಎಲೈ! ಸುಭಟರಿರಾ, ಯುದ್ಧಕ್ಕೆ ಬರಬೇಡಿ. ಪ್ರಾಣ ಬಿಡಬೇಡಿ. ಕುದುರೆಯನ್ನು ಬಿಡುವುದಿಲ್ಲ.

ವಿದ್ಯುನ್ಮಾಲೀತಿ ವಿಖ್ಯಾತೋ ರಾವಣಸ್ಯ ಸುಹೃತ್ಸಖಾ ।
ಮತ್ಸಖ್ಯುಃ ಪ್ರೇತಭೂತಸ್ಯ ನಿಷ್ಕೃತಿಂ ಕರ್ತುಮೇಯಿವಾನ್ ॥ ४ ॥

ಕ್ವಾಸೌ ರಾಮೋ ಮಮಾಽಹತ್ಯ ಸಖಾಯಂ ರಾವಣಂ ಗತಃ ।
ತಸ್ಯ ಭ್ರಾತಾಪಿ ಕುತ್ರಾಸ್ತೇ ಸರ್ವಶೂರಶಿರೋಮಣಿಃ ॥ ೫ ॥

ತಂ ಹತ್ವಾ ನಿಷ್ಕೃತಿಂ ತಸ್ಯ ಪ್ರಾಪ್ಸ್ಯೇ ರಾಮಸ್ಯ ಚಾನುಜಂ ।
ಪಿಬನ್ರುಧಿರಮುದ್ಭೂತಂ ಕಂಠನಾಳಸ್ಯ ಬುದ್ಬುದೈಃ ॥ ೬ ॥

ಇತಿ ವಾಕ್ಯಂ ಸಮಾಕರ್ಣ್ಯ ಯೋಧಾನಾಂ ಪ್ರವರೋ ಮಹಾನ್ ।
ಪುಷ್ಕಲೋ ನಿಜಗಾದೈನಂ ವೀರ್ಯಶೌರ್ಯಸಮನ್ವಿತಂ ॥ ೭ ॥

॥ ಪುಷ್ಕಲ ಉವಾಚ ॥

ವಿಕತ್ಥನಂ ನ ಕುರ್ವಂತಿ ಸಂಗ್ರಾಮೇ ಸುಭಟಾ ನರಾಃ ।
ಪರಾಕ್ರಮಂ ದರ್ಶಯಂತಿ ನಿಜಶಸ್ತ್ರಾಸ್ತ್ರವರ್ಷಣೈಃ ॥ ೮ ॥

---

೪. ನನ್ನ ಹೆಸರು ವಿದ್ಯುನ್ಮಾಲಿಯು. ರಾವಣನಿಗೆ ಪ್ರೇಮದ ಸ್ನೇಹಿತನು. ಸತ್ತ ನನ್ನ ಸ್ನೇಹಿತನಿಗೆ ಋಣವನ್ನು ತೀರಿಸಲು ಬಂದಿದ್ದೇನೆ.

೫. ಆ ರಾಮನೆಲ್ಲಿ? ನನ್ನ ಸ್ನೇಹಿತನಾದ ರಾವಣನನ್ನು ಕೊಂದು ಎಲ್ಲಿಯೋ ಹೋಗಿರುವನಲ್ಲ? ಅವನ ಶೂರನಾದ ತಮ್ಮನೂ ಎಲ್ಲಿ ಹೋದನು?

೬. ರಾಮನ ತಮ್ಮನನ್ನು ಎದುರಿಸಿ ಕೊಂದು ಕುತ್ತಿಗೆಯಿಂದ ನೊರೆನೊರೆಯಾಗಿ ಹೊರಡುವ ರಕ್ತವನ್ನು ಕುಡಿಯುತ್ತಾ ಋಣಮುಕ್ತನಾಗುವೆನು.

೭. ಈ ಮಾತನ್ನು ಕೇಳಿ ವೀರನಾದ ಪುಷ್ಕಲನು ಶೌರ್ಯದಿಂದಿಂತೆಂದನು.

೮. ಪುಷ್ಕಲನು ಹೇಳಿದನು:—ಯುದ್ಧದಲ್ಲಿ ವೀರರಾದವರು ಜಂಬ ಬಡಿಯುವುದಿಲ್ಲ ಶಸ್ತ್ರಾಸ್ತ್ರಗಳಿಂದ ಪರಾಕ್ರಮವನ್ನು ತೋರಿಸುತ್ತಾರೆ.

ರಾವಣೋ ನಿಹತೋ ಯೇನ ಸಸುಹೃದ್ಬಲವಾಹನಃ ।
ತಸ್ಯ ವಾಜಿನಮಾಹೃತ್ಯ ಕುತ್ರ ಗಂತಾಸಿ ದುರ್ಮತೇ ॥ ೯ ॥

ಪತಿಷ್ಯಸಿ ತ್ವಂ ಶತ್ರುಘ್ನಬಾಣೈಃ ಕೋದಂಡನಿರ್ಗತೈಃ ।
ತ್ವಾಮತ್ಸ್ಯಂತಿ ಶಿವಾ ಭೂಮೌ ಪತಿತಂ ಪ್ರಾಣವರ್ಜಿತಂ ॥ ೧೦ ॥

ಮಾ ಗರ್ಜ ದುಷ್ಟ ರಾಮಸ್ಯ ಸೇವಕೇ ಮಯಿ ಸುಸ್ಥಿತೇ ।
ಗರ್ಜಂತಿ ಸುಭಟಾ ಯುದ್ಧೇ ಶತ್ರೂನ್ ಜಿತ್ವಾ ಮಹೋದಯಾನ್ ॥ ೧೧ ॥

॥ ಶೇಷ ಉವಾಚ ॥

ಏವಂ ಬ್ರುವಂತಂ ತಂ ವೀರಂ ಪುಷ್ಕಲಂ ರಣದುರ್ಮದಂ ।
ಜಘಾನ ಶಕ್ತ್ಯಾ ಸುಭೃಶಂ ಹೃದಿ ರಾಕ್ಷಸಸತ್ತಮಃ ॥ ೧೨ ॥

ಆಯಾಂತೀಂ ತಾಂ ಮಹಾಶಕ್ತಿಮಾಯಸೀಂ ಕಾಂಚನಾಶ್ರಿತಾಂ ।
ಚಿಚ್ಛೇದ ತ್ರಿಭಿರತ್ಯುಗ್ರೈಃ ಶಿತೈರ್ಬಾಣೈಸ್ಸ ಪುಷ್ಕಲಃ ॥ ೧೩ ॥

---

೯. ಯಾವನಿಂದ ಬಂಧುಸಹಿತವಾದ ರಾವಣನು ಕೊಲ್ಲಲ್ಪಟ್ಟನೋ ಅಂತಹ ರಾಮನ ಕುದುರೆಯನ್ನು ಕದ್ದು ಎಲ್ಲಿ ಹೋಗುತ್ತೀಯೆ?

೧೦. ಶತ್ರುಘ್ನನು ಬಿಟ್ಟ ಬಾಣಗಳಿಂದ ಕೆಳಗೆ ಸತ್ತು ಬೀಳುತ್ತೀಯೆ. ಭೂಮಿಯಲ್ಲಿ ಬಿದ್ದ ನಿನ್ನ ಹೆಣವನ್ನು ನರಿಗಳು ತಿನ್ನುತ್ತವೆ.

೧೧. ರಾಮನ ಸೇವಕನು ನಾನಿಲ್ಲಿರುವಾಗ ಗರ್ಜಿಸಬೇಡ. ಸುಭಟರು ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ಗರ್ಜಿಸುತ್ತಾರೆ.

೧೨. ಶೇಷನು ಹೇಳಿದನು:—ಹೀಗೆನ್ನುತ್ತಿರುವ ಸುಭಟನಾದ ಪುಷ್ಕಲನ ಎದೆಗೆ ಶಕ್ತ್ಯಾಯುಧದಿಂದ ಆ ರಾಕ್ಷಸನು ಹೊಡೆದನು.

೧೩. ಹೊಡೆಯಲು ಬರುತ್ತಿರುವ ಆ ಉಕ್ಕಿನ ಶಕ್ತಿಯನ್ನು ಬಾಣಗಳಿಂದ ಪುಷ್ಕಲನು ಕತ್ತರಿಸಿದನು.

ಸಾ ತ್ರಿಧಾ ಹ್ಯಪತದ್ಭೂಮೌ ವಿಶಿಖೈರ್ನಿಷ್ಪ್ರಭೀ ಕೃತಾ ।
ಪತಂತೀ ವಿರರಾಜಾಸೌ ವಿಷ್ಣೋಃ ಶಕ್ತಿತ್ರಯೀವ ಕಿಂ ॥ ೧೪ ॥

ತಾಂ ಛಿನ್ನಾಂ ಶಕ್ತಿಕಾಂ ದೃಷ್ಟ್ವಾ ರಾಕ್ಷಸಃ ಪರತಾಪನಃ ।
ಶೂಲಂ ಜಗ್ರಾಹ ತರಸಾ ತ್ರಿಶಿಖಂ ಲೋಹನಿರ್ಮಿತಂ ॥ ೧೫ ॥

ತೀಕ್ಷ್ಣಾಗ್ರಂ ಜ್ವಲನಪ್ರಖ್ಯಂ ರಾಕ್ಷಸೇಂದ್ರೋ ವ್ಯಮೋಚಯತ್ ।
ಆಯಾಂತಂ ತಿಲಶಶ್ಚಕ್ರೇ ಬಾಣೈಃ ಪುಷ್ಕಲಸಂಜ್ಞಿತಃ ॥ ೧೬ ॥

ಛಿತ್ವಾ ತ್ರಿಶೂಲಂ ತರಸಾ ರಾಘವಸ್ಯ ಹಿ ಸೇವಕಃ ।
ಪುಷ್ಕಲಶ್ಚಾಪ ಆಧತ್ತ ಬಾಣಾಂಸ್ತೀಕ್ಷ್ಣಾನ್ ಮನೋಜವಾನ್ ॥ ೧೭ ॥

ತೇ ಬಾಣಾ ಹೃದಿ ತಸ್ಯಾಶು ಲಗ್ನಾ ರಾಗಂ ಬತಾಸೃಜನ್ ।
ವೈಷ್ಣವಸ್ಯ ಯಥಾ ಸ್ವಾಂತೇ ಗುಣಾ ವಿಷ್ಣೋರ್ಮನೋಹರಾಃ ॥ ೧೮ ॥

---

೧೪. ಆ ಶಕ್ತಿಯು ಬಾಣದಿಂದ ಮೂರು ಚೂರಾಗಿ ಕತ್ತರಿಸಲ್ಪಟ್ಟು ಬಿದ್ದಿತು. ಕೆಳಗೆ ಬೀಳುತ್ತಿರುವ ಆ ಮೂರು ಚೂರೂ ವಿಷ್ಣುವಿನ ಮೂರು ಶಕ್ತಿಗಳಂತೆ ಪ್ರಕಾಶಿಸಿದವು.

೧೫. ಆ ಶಕ್ತಿಯು ಕತ್ತರಿಸಿಹೋದುದನ್ನು ತಿಳಿದು ರಾಕ್ಷಸನು ತ್ರಿಶೂಲವನ್ನು ಹಿಡಿದನು.

೧೬. ಮೊನೆಯಾಗಿರುವ ಆ ತ್ರಿಶೂಲವನ್ನು ರಾಕ್ಷಸನು ಪ್ರಯೋಗಿಸಿದನು. ಬರುತ್ತಿರುವಾಗಲೇ ಅದನ್ನು ಪುಷ್ಕಲನು ಚೂರುಚೂರು ಮಾಡಿದನು.

೧೭. ಪುಷ್ಕಲನು ಆ ತ್ರಿಶೂಲವನ್ನು ಕತ್ತರಿಸಿ ತಾನು ಚಾಪದಲ್ಲಿ ಬಾಣವನ್ನು ಹೂಡಿದನು.

೧೮. ಆ ಬಾಣಗಳು ಆ ರಾಕ್ಷಸನ ಎದೆಯಲ್ಲಿ ಚುಚ್ಚಿಕೊಂಡು ರಕ್ತವನ್ನು ಸುರಿಸಿದವು. ಅದನ್ನು ನೋಡಿದರೆ ವಿಷ್ಣುವಿನ ಗುಣಗಳು ಮನುಷ್ಯನಲ್ಲಿ ಹೊಕ್ಕರೆ ರಾಗವೂ ಹೊರಹೊರಡುವಂತೆ ತೋರುತ್ತಿದ್ದಿತು.

ತದ್ಬಾಣವೇಧದುಃಖಾರ್ತೋ ವಿದ್ಯುನ್ಮಾಲೀ ಸುದುರ್ಧನಃ ।
ಜಗ್ರಾಹ ಮುದ್ಗರಂ ಘೋರಂ ಪುಷ್ಕಲಂ ಹಂತುಮುದ್ಯತಃ ॥ ೧೯ ॥

ಮುದ್ಗರಃ ಪ್ರಹಿತಸ್ತೇನ ವಿದ್ಯುನ್ಮಾಲ್ಯಭಿಧೇನ ಹಿ ।
ಹೃದಿ ಲಗ್ನೋಽಸೃಜಚ್ಛೀಘ್ರಂ ಕಶ್ಮಲಂ ತದಕಾರಯತ್ ॥ ೨೦ ॥

ಮುದ್ಗರಪ್ರಹತೋ ವೀರಃ ಕಂಪಮಾನಃ ಸ ವೇಪಥುಃ ।
ಪಪಾತ ಸ್ಯಂದನೋಪಸ್ಥೇ ಪುಷ್ಕಲಶ್ಶತ್ರುತಾಪನಃ ॥ ೨೧ ॥

ಉಗ್ರದಂಷ್ಟ್ರೋಽಥ ತದ್ಭ್ರಾತಾ ಲಕ್ಷ್ಮೀನಿಧಿಮಯೋಧಯತ್ ।
ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈರ್ವೀರಪ್ರಾಣಾಪಹೃತಿಂಕರೈಃ ॥ ೨೨ ॥

ಪುಷ್ಕಲಸ್ತತ್ಕ್ಷಣಾತ್ ಪ್ರಾಪ್ಯ ಸಂಜ್ಞಾಂ ರಾಕ್ಷಸಮಬ್ರವೀತ್ ।
ಧನ್ಯೋಽಸಿ ರಾಕ್ಷಸಶ್ರೇಷ್ಠ ಮಹೀಯಾಂಸ್ತೇ ಪರಾಕ್ರಮಃ ॥ ೨೩ ॥

ಪಶ್ಯೇದಾನೀಂ ಮಮಾಪ್ಯುಚ್ಚೈಃ ಪ್ರತಿಜ್ಞಾಂ ಶೂರಮಾನಿತಾಂ ।
ವಿಮಾನಾತ್ಪಾತಯಾಮ್ಯದ್ಯ ಭೂಮೌ ತ್ವಾಂ ಶಿತಸಾಯಕೈಃ ॥ ೨೪ ॥

---

೧೯. ಆ ಬಾಣದ ನೋವಿನಿಂದ ದುಃಖಪಟ್ಟ ರಾಕ್ಷಸನು ಪುಷ್ಕಲನನ್ನು ಕೊಲ್ಲಲು ಮುದ್ಗರವನ್ನು ಹಿಡಿದನು.

೨೦. ವಿದ್ಯುನ್ಮಾಲಿಯು ಆ ಮುದ್ಗರವನ್ನು ಬಿಡಲು ಅದು ಪುಷ್ಕಲನ ಎದೆಗೆ ಬಡಿದು ಮೂರ್ಛೆಯನ್ನುಂಟುಮಾಡಿತು.

೨೧. ಮುದ್ಗರದಿಂದ ಹೊಡೆಯಲು ನಡುಗುತ್ತ ಪುಷ್ಕಲನು ರಥದ ಮಧ್ಯದಲ್ಲಿ ಬಿದ್ದನು.

೨೨. ಉಗ್ರದಂಷ್ಟ್ರನೆಂಬ ವಿದ್ಯುನ್ಮಾಲಿಯ ಸೋದರನು ಲಕ್ಷ್ಮೀನಿಧಿಯೊಡನೆ ಹೋರಾಡುತ್ತಾ ಉಗ್ರವಾದ ಬಾಣಗಳನ್ನು ಬಿಡುತ್ತಿದ್ದನು.

೨೩. ಪುಷ್ಕಲನು ಒಡನೆಯೇ ಜ್ಞಾನವನ್ನು ಹೊಂದಿ ಎಲೈ! ರಾಕ್ಷಸನೇ, ನೀನು ಧನ್ಯನು. ನಿನ್ನ ಪರಾಕ್ರಮವು ಉತ್ಕೃಷ್ಟವಾದುದು.

೨೪. ನನ್ನ ಪ್ರತಿಜ್ಞೆಯನ್ನು ನೋಡು. ನಿನ್ನನ್ನು ಈಗ ವಿಮಾನದಿಂದ ಕೆಳಗೆ ಕೆಡವುತ್ತೇನೆ.

ಇತ್ಯುಕ್ತ್ವಾ ನಿಶಿತಂ ಬಾಣಂ ಸಮುಗೃಹ್ಣಾದ್ದುರಾಸದಂ ।
ಜ್ವಲಂತಮಗ್ನಿತೇಜಸ್ಕಂ ಮಹೌದಾರ್ಯಸಮನ್ವಿತಂ ॥ ೨೫ ॥

ಸ ಯಾವತ್ತಂ ಪ್ರತೀಕರ್ತುಂ ವಿಧತ್ತೇ ಸ್ವಪರಾಕ್ರಮಂ ।
ತಾವದ್ಧೃದಿ ತತೋ ಲಗ್ನಸ್ತೀಕ್ಷ್ಣವಕ್ತ್ರಃ ಸ ಸಾಯಕಃ ॥ ೨೬ ॥

ತೇನ ಬಾಣೇನ ವಿಭ್ರಾಂತೋ ಭ್ರಮಚ್ಚಿತ್ತಸ್ಸ ರಾಕ್ಷಸಃ ।
ಪಪಾತ ಕಾಮಗೋಪಸ್ಥಾದ್ಭೂಮೌ ವಿಗತಚೇತನಃ ॥ ೨೭ ॥

ಉಗ್ರದಂಷ್ಟ್ರೇಣ ವೈವ ದೃಷ್ಟಃ ಪತಮಾನೋ ನಿಜಾಗ್ರಜಃ ।
ಗೃಹೀತ್ವಾ ತಂ ವಿಮಾನಾಂತರ್ನಿನಾಯ ರಿಪುಶಂಕಿತಃ ॥ ೨೮ ॥

ಪ್ರಾಹ ಚಾರಿಂ ಮಹಾರೋಷಾತ್ಪುಷ್ಕಲಂ ಬಲಿನಾಂ ವರಂ ।
ಮದ್ಭ್ರಾತರಂ ಪಾತಯಿತ್ವಾ ಕುತ್ರ ಯಾಸ್ಯಸಿ ದುರ್ಮತೇ ॥ ೨೯ ॥

ಮಾಂ ವೈ ಯುಧಿ ವಿನಿರ್ಜಿತ್ಯ ಗಂತಾಸಿ ಜಯಮುತ್ತಮಂ ।
ಸ್ಥಿತೇ ಮಯಿ ತವ ಸ್ವಾಂತೇ ಜಯಾಶಾ ವಿನಿವರ್ತತಾಂ ॥ ೩೦ ॥

---

೨೫. ಹೀಗೆಂದು ಹೇಳಿ ಪುಷ್ಕಲನು ಅಗ್ನಿಯಂತೆ ಜ್ವಲಿಸುತ್ತಿರುವ ತೀಕ್ಷ್ಣವಾದ ಬಾಣವನ್ನು ಹಿಡಿದನು.

೨೬. ಆ ರಾಕ್ಷಸನು ಆ ಬಾಣಕ್ಕೆ ಪ್ರತೀಕಾರಮಾಡುವಷ್ಟರಲ್ಲೇ ಅವನ ಎದೆಯಲ್ಲಿ ಅದು ನೆಟ್ಟುಕೊಂಡಿತು.

೨೭. ಆ ಬಾಣದಿಂದ ಮನಸ್ಸು ಅಲ್ಲೋಲಕಲ್ಲೋಲನಾಗಿ, ಆ ಕಾಮಗನಾದ ರಾಕ್ಷಸನು ಮೂರ್ಛೆ ಬಂದು ಭೂಮಿಯಲ್ಲಿ ಬಿದ್ದನು.

೨೮. ಅಣ್ಣನು ಬಿದ್ದುದನ್ನು ಉಗ್ರದಂಷ್ಟ್ರನು ನೋಡಿ ಒಡನೆಯೇ ಅವನನ್ನು ಹಿಡಿದು ವಿಮಾನದಲ್ಲಿ ಹಾಕಿದನು.

೨೯. ಬಲಿಷ್ಠನಾದ ಪುಷ್ಕಲನನ್ನು ಕುರಿತು ನಮ್ಮ ಅಣ್ಣನನ್ನು ಕೆಡವಿ ಎಲ್ಲಿ ಹೋಗುತ್ತೀಯೆ? ಎಂದು ಕೂಗಿದನು.

೩೦. ನನ್ನನ್ನು ಜಯಿಸಿ ಜಯಲಕ್ಷ್ಮಿಯನ್ನು ಹೊಂದು. ನಾನಿರುವಾಗ ಜಯಾಶೆಯನ್ನು ಬಿಡು.

ಏವಂ ಬ್ರುವಂತಂ ತರಸಾ ಜಘಾನ ದಶಭಿಶ್ಶರೈಃ ।
ಹೃದಯೇ ತಸ್ಯ ದುಷ್ಟಸ್ಯ ರೋಷಪೂರಿತಲೋಚನಃ ॥ ೩೧ ॥

ಸ ತಾಡಿತೋ ದಶಶರೈಃ ಪುಷ್ಕಲೇನ ಮಹಾತ್ಮನಾ ।
ಚುಕ್ರೋಧ ಹೃದಿ ದುರ್ಬುದ್ಧಿಸ್ತಂ ಹಂತುಂ ತು ಪ್ರಚಕ್ರಮೇ ॥ ೩೨ ॥

ದಂತಾನ್ನಿಷ್ಪೀಡ್ಯ ಸಕ್ರೋಧಂ ಮುಷ್ಟಿಮುದ್ಯಮ್ಯ ಚೋರಸಿ ।
ಪ್ರಹನದ್ವಜ್ರನಿರ್ಘಾತಪಾತಶಂಕಾಂ ಸೃಜನ್ ಹೃದಿ ॥ ೩೩ ॥

ಮುಷ್ಟಿನಾಭಿಹತೋ ವೀರಃ ಪುಷ್ಕಲಃ ಪರಮಾಸ್ತ್ರವಿತ್ ।
ನಾಕಂಪತ ವಿನಿಷ್ಪೇಷಂ ವಾಂಛಂಸ್ತಸ್ಯ ದುರಾತ್ಮನಃ ॥ ೩೪ ॥

ವತ್ಸದಂತಾನ್ಮಹಾತೀಕ್ಷ್ಣಾನ್ಮುಮೋಚ ಹೃದಯೇ ತತಃ ।
ತೈರ್ಬಾಣೈರ್ವ್ಯಥಿತೋ ದೈತ್ಯಸ್ತ್ರಿಶೂಲಂ ತು ಸಮಾದದೇ ॥ ೩೫ ॥

ಜಾಜ್ವಲ್ಯಮಾನಂ ತ್ರಿಶಿಖಂ ಜ್ವಾಲಮಾಲಾತಿಭೀಷಣಂ ।
ಲಗ್ನಂ ಹೃದಿ ಮಹಾವೀರಪುಷ್ಕಲಸ್ಯ ಸುದಾರುಣಂ ॥ ೩೬ ॥

---

೩೧. ರೋಷದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಪುಷ್ಕಲನು ಆ ಉಗ್ರದಂಷ್ಟ್ರನ ಎದೆಗೆ ಹೊಡೆದನು.

೩೨. ಪುಷ್ಕಲನು ಹತ್ತು ಬಾಣಗಳಿಂದ ಉಗ್ರದಂಷ್ಟ್ರನನ್ನು ಹೊಡೆಯಲು ಆ ರಾಕ್ಷಸನು ಕೋಪಗೊಂಡು ಇವನನ್ನು ಕೊಲ್ಲಲು ಮನಸ್ಸುಮಾಡಿದನು.

೩೩. ಹಲ್ಲನ್ನು ಕಡಿಯುತ್ತಾ ಮುಷ್ಟಿಯನ್ನೆತ್ತಿ ಆ ಪುಷ್ಕಲನ ಎದೆಯಲ್ಲಿ ಬಲವಾಗಿ ಹೊಡೆದನು.

೩೪. ಅವನ ಮುಷ್ಟಿಹೊಡೆತವನ್ನು ಲೆಕ್ಕಿಸದೆ ಆ ಪುಷ್ಕಲನು ಉಗ್ರದಂಷ್ಟ್ರನನ್ನು ನಾಶಮಾಡಲು ಪ್ರಯತ್ನಿಸಿದನು.

೩೫. ಆಮೇಲೆ ಪುಷ್ಕಲನು ಮಹಾಕ್ರೂರವಾದ ವತ್ಸದಂತಗಳನ್ನು ಬಿಡಲು ಅದರಿಂದ ವ್ಯಥೆಗೊಂಡ ರಾಕ್ಷಸನು ತ್ರಿಶೂಲವನ್ನು ಹಿಡಿದನು.

೩೬. ಬಹು ಕ್ರೂರವಾದ ಆ ತ್ರಿಶೂಲವು ಪುಷ್ಕಲನ ಎದೆಯಲ್ಲಿ ಚುಚ್ಚಿಕೊಂಡಿತು.

ಮೂರ್ಛಿತಸ್ತೇನ ಶೂಲೇನ ನಿಹತೋ ಧನ್ವಿಸತ್ತಮಃ ।
ಕಶ್ಮಲಂ ಪರಮಂ ಪ್ರಾಪ್ತಃ ಪಪಾತ ಸ್ಯಂದನೋಪರಿ ॥ ೩೭ ॥

ಮೂರ್ಛಾಪ್ರಾಪ್ತಂ ಸಮಾಜ್ಞಾಯ ಹನೂಮಾನ್ ಪವನಾತ್ಮಜಃ ।
ಕೋಪವ್ಯಾಕುಲಿತಸ್ವಾಂತೋ ಬಭಾಷೇ ತಂ ತು ರಾಕ್ಷಸಂ ॥ ೩೮ ॥

ಕುತ್ರ ಗಚ್ಛಸಿ ದುರ್ಬುದ್ಧೇ ಮಯಿ ಯೋದ್ಧರಿ ಸುಸ್ಥಿತೇ ।
ತ್ವಾಂ ಹನ್ಮಿ ಚರಣಾಘಾತೈರ್ವಾಜಿಹರ್ತಾರಮಾಗಸಂ ॥ ೩೯ ॥

ಏವಮುಕ್ತ್ವಾ ಮಹಾದೈತ್ಯಾನ್ ಜಘಾನ ಪರಸೈನಿಕಾನ್ ।
ವಿಮಾನಸ್ಥಾನ್ನಖಾಗ್ರೇಣ ದಾರಯನ್ನಭಸಿ ಸ್ಥಿತಃ ॥ ೪೦ ॥

ಲಾಂಗೂಲೇನಾಹತಾಃ ಕೇಚಿತ್ಕೇಚಿತ್ಪಾದತಲಾಹತಾಃ ।
ಬಾಹುಭ್ಯಾಂ ದಾರಿತಾಃ ಕೇಚಿತ್ಪವನಸ್ಯ ತನೂಭುವಾ ॥ ೪೧ ॥

ನಶ್ಯಂತಿ ಕೇಚಿನ್ನಹತಾಃ ಕೇಚಿನ್ಮೂರ್ಛಂತಿ ಸಂಹತಾಃ ।
ಪಲಾಯಂತೇ ಪದಾಘಾತಭಯಪೀಡಾಹತಾಸ್ತತಃ ॥ ೪೨ ॥

---

೩೭. ಆ ಶೂಲದಿಂದ ಹೊಡೆಯಲು ಮೂರ್ಛಿತನಾದ ಪುಷ್ಕಲನು ರಥದ ಮಧ್ಯದಲ್ಲಿ ಬಿದ್ದನು.

೩೮. ಪುಷ್ಕಲನ ಮೂರ್ಛೆಯನ್ನು ತಿಳಿದ ಹನುಮಂತನು ಮನಸ್ಸಿನಲ್ಲಿ ದುಃಖಪಟ್ಟು ಕೋಪದಿಂದ ಆ ರಾಕ್ಷಸನನ್ನು ಕುರಿತು ಇಂತೆಂದನು.

೩೯. ಎಲೈ! ದುರ್ಬುದ್ಧಿಯೇ, ನಾನು ಯುದ್ಧಕ್ಕೆ ಸಿದ್ಧನಾಗಿರಲು ಎಲ್ಲಿ ಹೋಗುತ್ತೀಯೆ? ಕುದುರೆಯ ಕಳ್ಳನಾದ ನಿನ್ನನ್ನು ಒದೆತದಿಂದಲೇ ಕೊಲ್ಲುತ್ತೇನೆ.

೪೦. ಹೀಗೆಂದು ಹೇಳುತ್ತ ವಿಮಾನದಲ್ಲಿದ್ದ ರಾಕ್ಷಸರನ್ನು ಉಗುರಿನಿಂದ ಹೊಡೆದನು.

೪೧. ಹನುಮಂತನು ಕೆಲವರನ್ನು ಬಾಲದಿಂದಲೂ, ಕೆಲವರನ್ನು ಕಾಲಿನಿಂದಲೂ, ಕೆಲವರನ್ನು ತೋಳಿನಿಂದಲೂ ಕೊಂದನು.

೪೨. ಕೆಲವರು ಸತ್ತರು. ಕೆಲವರು ಮೂರ್ಛೆಹೋದರು. ಕೆಲವರು ಓಡಿದರು.

ಅನೇಕೇ ನಿಹತಾಸ್ತತ್ರ ರಾಕ್ಷಸಾಶ್ಚಾತಿದಾರುಣಾಃ ।
ಛಿನ್ನಾ ಭಿನ್ನಾ ದ್ವಿಧಾ ಜಾತಾಃ ಪವನಸ್ಯ ಸುತೇನ ವೈ ॥ ೪೩ ॥

ಕಾಮಗಂ ತು ವಿಮಾನಂ ತದ್ಭಿನ್ನಪ್ರಾಕಾರತೋರಣಂ ।
ಹಾಹಾಕುರ್ವದ್ಭಿರಸುರೈಃ ಸಮಂತಾತ್ಪರಿವಾರಿತಂ ॥ ೪೪ ॥

ಹನೂಮತಿ ಮಹಾಶೂರೇ ಕ್ಷಣಂ ಭೂಮೌ ಕ್ಷಣಂ ದಿವಿ ।
ಇತಸ್ತತಃ ಪ್ರದೃಶ್ಯೇತ ಕಾಮಯಾನಂ ದುರಾಸದಂ ॥ ೪೫ ॥

ಯತ್ರ ಯತ್ರ ವಿಮಾನಂ ತತ್ತತ್ರ ತತ್ರ ಸಮೀರಜಃ ।
ಪ್ರಹರನ್ನೇವ ದೃಶ್ಯೇತ ಕಾಮರೂಪಧರಃ ಕಪಿಃ ॥ ೪೬ ॥

ಏವಂ ತದಾಕುಲೀಭೂತೇ ವಿಮಾನಸ್ಥೇ ಮಹಾಜನೇ ।
ಉಗ್ರದಂಷ್ಟ್ರಸ್ತು ದೈತ್ಯೇಂದ್ರೋ ಹನೂಮಂತಮುಪೇಯಿವಾನ್ ॥ ೪೭ ॥

---

೪೩. ಅನೇಕ ರಾಕ್ಷಸರು ಸತ್ತರು. ಕೆಲವರು ಕತ್ತರಿಸಲ್ಪಟ್ಟರು. ಕೆಲವರು ಗಾಯಹೊಂದಿದರು.

೪೪. ಆ ಕಾಮಗವಿಮಾನದ ಸುತ್ತಲೂ ಇರುವ ಕಟ್ಟು ನಾಶವಾಗಿ ಹೆಬ್ಬಾಗಿಲು ಮುರಿಯಲು, ರಾಕ್ಷಸರೆಲ್ಲರೂ ಹಾಹಾಕಾರಮಾಡುತ್ತ ಸುತ್ತುವರಿದರು.

೪೫. ಮಹಾಶೂರನಾದ ಹನುಮಂತನು ಯುದ್ಧಮಾಡುತ್ತಿರಲು ಆ ವಿಮಾನವು ಕ್ಷಣ ಭೂಮಿಯಲ್ಲೂ ಕ್ಷಣಕಾಲ ಅಂತರಿಕ್ಷದಲ್ಲೂ ಕಾಣಿಸುವುದು. ಅಲ್ಲಲ್ಲಿ ಓಡಾಡುತ್ತಿರುವುದು.

೪೬. ಆ ವಿಮಾನವು ಕಾಣುವ ಜಾಗದಲ್ಲೆಲ್ಲಾ ಹನುಮಂತನು ಹೊಡೆಯುತ್ತಲೇ ಇದ್ದನು.

೪೭. ವಿಮಾನದಲ್ಲಿರುವ ರಾಕ್ಷಸರು ಈರೀತಿ ತೊಂದರೆಗೊಳಗಾಗಲು ಉಗ್ರದಂಷ್ಟ್ರನು ಹನುಮಂತನನ್ನು ಎದುರಿಸಿದನು.

ಕಪೇ ತ್ವಯಾ ಮಹತ್ಕೃತ್ಯಂ ಕೃತಂ ಯದ್ಭಟಪಾತನಂ ।
ಕ್ಷಣಂ ತಿಷ್ಠಸಿ ಚೇತ್ಕುರ್ವೇ ತವ ಪ್ರಾಣವಿಯೋಜನಂ ॥ ೪೮ ॥

ಏವಮುಕ್ತ್ವಾ ಹನೂಮಂತಂ ಪ್ರಜಹಾರ ಸ ದುರ್ಮತಿಃ ।
ತ್ರಿಶೂಲೇನ ಸುತೀಕ್ಷ್ಣೇನ ಜ್ವಲತ್ಪಾವಕಕಾಂತಿನಾ ॥ ೪೯ ॥

ತದಾಗತಂ ತ್ರಿಶೂಲಂ ಚ ಮುಖೇ ಜಗ್ರಾಹ ವೀರ್ಯವಾನ್ ।
ಚೂರ್ಣಯಾಮಾಸ ಸಕಲಂ ಸರ್ವಲೋಹವಿನಿರ್ಮಿತಂ ॥ ೫೦ ॥

ಚೂರ್ಣಯಿತ್ವಾ ತ್ರಿಶೂಲಂ ತದಾಯಸಂ ದೈತ್ಯನೋಚಿತಂ ।
ಜಘಾನ ತಂ ಚಪೇಟಾಭಿರ್ಬಹ್ವಿಭಿರ್ಹನುಮಾನ್ಬಲೀ ॥ ೫೧ ॥

ಸ ಆಹತಃ ಕಪೀಂದ್ರೇಣ ಚಪೇಟಾಭಿರಿತಸ್ತತಃ ।
ವ್ಯಥಿತೋ ವ್ಯಸೃಜನ್ಮಾಯಾಂ ಸರ್ವಲೋಕಭಯಂಕರೀಂ ॥ ೫೨ ॥

ತದಾ ತಮೋಽಭವತ್ತೀವ್ರಂ ಯತ್ರ ಕೋ ವಾ ನ ಲಕ್ಷ್ಯತೇ ।
ಯತ್ರ ಸ್ವೀಯೋ ನ ಪಾರಕ್ಯೋ ವಿದಾಮಾಸ ಜನಾನ್ಬಹೂನ್ ॥ ೫೩ ॥

---

೪೮. ಎಲೈ! ಕಪಿಯೇ, ಬಹು ಭಟರನ್ನು ಕೊಂದಿದ್ದೀಯೆ. ಕ್ಷಣಕಾಲ ನನ್ನೊಡನೆ ನಿಂತರೆ ನಿನ್ನ ಪ್ರಾಣವನ್ನು ತೆಗೆಯುವೆನು.

೪೯. ಹೀಗೆಂದು ಹೇಳಿ ಹನುಮಂತನನ್ನು ತೀಕ್ಷ್ಣವಾದ ತ್ರಿಶೂಲದಿಂದ ಹೊಡೆದನು.

೫೦. ಬಂದ ತ್ರಿಶೂಲವನ್ನು ಹಲ್ಲಿನಿಂದ ಹಿಡಿದು ಹನುಮಂತನು ಚೂರು ಚೂರು ಮಾಡಿದನು.

೫೧. ಆ ತ್ರಿಶೂಲವನ್ನು ನುಚ್ಚುನುರುಗುಮಾಡಿ ಹನುಮಂತನು ಆ ರಾಕ್ಷಸನಿಗೆ ಬಹುವಾಗಿ ಕಪಾಳಕ್ಕೆ ಹೊಡೆದನು.

೫೨. ಅವನು ಎರಡು ಕಪಾಳಕ್ಕೂ ಏಟುತಿಂದು ದುಃಖಪಡುತ್ತಾ ಭಯಂಕರವಾದ ಮಾಯೆಯನ್ನು ಸೃಷ್ಟಿಸಿದನು.

೫೩. ಅಲ್ಲಿ ನನ್ನವರು ತನ್ನವರು ಎಂಬ ಭೇದವೇ ಗೊತ್ತಾಗದಂತೆ ಕತ್ತಲೆಯಾಯಿತು.

ಶಿಲಾಃ ಪರ್ವತಶೃಂಗಾಭಾಃ ಪತಂತಿ ಸುಭಟೋಪರಿ ।
ತಾಭಿರ್ಹತಾಸ್ತು ತೇ ಸರ್ವೇ ವ್ಯಾಕುಲಾ ಅಥ ಜಜ್ಞಿರೇ ॥ ೫೪ ॥

ವಿದ್ಯುತೋ ವಿಲಸಂತ್ಯತ್ರ ಗರ್ಜಂತಿ ಜಲದಾ ಘನಂ ।
ವರ್ಷಂತಿ ಪೂಯರುಧಿರಂ ಮುಂಚಂತಿ ಸಮಲಂ ಜಲಂ ॥ ೫೫ ॥

ಆಕಾಶಾತ್ಪತಮಾನಾನಿ ಕಬಂಧಾನಿ ಬಹೂನಿ ಚ ।
ದೃಶ್ಯಂತೇ ಛಿನ್ನಶೀರ್ಷಾಣಿ ಸಕುಂಡಲಯುಗಾನಿ ಚ ॥ ೫೬ ॥

ನಗ್ನಾ ವಿರೂಪಾಸ್ಸುಭೃಶಂ ಕೀರ್ಣಕೇಶಾಸ್ಸುದುರ್ಮುಖಾಃ ।
ದೃಶ್ಯಂತೇ ಸರ್ವತೋ ದೈತ್ಯಾ ದಾರುಣಾ ಭಯಕಾರಿಣಃ ॥ ೫೭ ॥

ತದಾ ವ್ಯಾಕುಲಿತೋ ಲೋಕಃ ಪರಸ್ಪರಭಯಾಕುಲಃ ।
ಪಲಾಯನಪರೋ ಜಾತೋ ಮಹೋತ್ಪಾತಮಮನ್ಯತ ॥ ೫೮ ॥

ತದಾ ಶತ್ರುಘ್ನ ಆಯಾತೋ ರಥೇ ಸ್ಥಿತ್ವಾ ಮಹಾಯಶಾಃ ।
ಶ್ರೀರಾಮಸ್ಮರಣಂ ಕೃತ್ವಾ ಚಾಪೇ ಸಂಧಾಯ ಸಾಯಕಾನ್ ॥ ೫೯ ॥

---

೫೪. ಆ ಭಟರ ಮೇಲೆ ಬೆಟ್ಟದಂತಿರುವ ಕಲ್ಲುಗಳು ಬೀಳಲು ಅವರೆಲ್ಲರೂ ದುಃಖಪಟ್ಟರು.

೫೫. ಅಲ್ಲಿ ಮಿಂಚುತ್ತಿತ್ತು. ಗುಡುಗುತ್ತಿತ್ತು. ಕೀವಿನಿಂದ ಕೂಡಿದ ರಕ್ತದ ಮಳೆಯು ಬರುತ್ತಿತ್ತು. ಮಲದಿಂದ ಕೂಡಿದ ನೀರು ಸುರಿಯುತ್ತಿತ್ತು.

೫೬. ಆಕಾಶದಿಂದ ಅನೇಕ ಮುಂಡಗಳು ಬೀಳುತ್ತಿದ್ದುವು. ತಲೆಯಿಲ್ಲದವು ಭಯಂಕರವಾಗಿದ್ದುವು. ತಲೆಬುರುಡೆಗಳು ಬೀಳುತ್ತಿದ್ದುವು.

೫೭. ಬೆತ್ತಲೆಯಾಗಿಯೂ ಭಯಂಕರವಾಗಿಯೂ ಕೂದಲನ್ನು ಕೆದರಿಕೊಂಡು ಇರುವ ದೈತ್ಯರು ಎಲ್ಲೆಡೆಯಲ್ಲೂ ಭಯಂಕರವಾಗಿ ಕಾಣುತ್ತಿದ್ದರು.

೫೮. ಆಗ ಜನರು ದುಃಖಗೊಂಡು ಭಯಪೀಡಿತರಾದರು. ಓಡಲು ಮನಸ್ಸುಮಾಡಿದರು.

೫೯. ಆಗ ಶತ್ರುಘ್ನನು ಬಂದು ರಾಮಸ್ಮರಣೆಮಾಡಿ ಬಾಣವನ್ನು ಬಿಟ್ಟನು.

**ತಾಂ ಮಾಯಾಂ ಸ ವಿಧೂಯಾಥ ಮೋಹನಾಸ್ತ್ರೇಣ ವೀರ್ಯವಾನ್ ।**
**ಶರಧಾರಾಃ ಕಿರನ್ ವ್ಯೋಮ್ನಿ ವವರ್ಷ ಸಮರೇಽಸುರಂ ॥ ೬೦ ॥**

**ತದಾ ದಿಶಃ ಪ್ರಸೇದುಸ್ತಾ ರವಿಸ್ತ್ವಪರಿವೇಷವಾನ್ ।**
**ಮೇಘಾ ಯಥಾಗತಂ ಯಾತಾ ವಿದ್ಯುತಶ್ಶಾಂತಿಮಾಗತಾಃ ॥ ೬೧ ॥**

**ತದಾ ವಿಮಾನಂ ಪುರತೋ ದೃಶ್ಯತೇ ರಾಕ್ಷಸೈರ್ಯುತಂ ।**
**ಛಿಂದಿ ಭಿಂದೀತಿ ಭಾಷಾಭಿರ್ವ್ಯಾಕುಲಂ ಸುತರಾಂ ಮಹತ್ ॥ ೬೨ ॥**

**ಬಾಣಾಶ್ಚ ಶತಸಾಹಸ್ರಾಃ ಸ್ವರ್ಣಪುಂಖೈಸ್ಸುಶೋಭಿತಾಃ ।**
**ಪೇತುರ್ವಿಮಾನೇ ನಭಸಿ ಸ್ಥಿತೇ ಕಾಮಗಮೇ ಮುಹುಃ ॥ ೬೩ ॥**

**ತದಾ ಭಗ್ನಂ ವಿಮಾನಂ ಹಿ ದೃಶ್ಯತೇಽಪತದುಚ್ಚಕೈಃ ।**
**ಸ್ವಪುರೀಖಂಡಮೇಕತ್ರ ಭಗ್ನಾಂಗಮಿವ ಭೂತಲೇ ॥ ೬೪ ॥**

**ತದಾ ಪ್ರಕುಪಿತೋ ದೈತ್ಯೋ ಬಾಣಾನ್ಧನುಷಿ ಸಂದಧೇ ।**
**ತೈರ್ಬಾಣೈರ್ವಿಕಿರನ್ಭ್ರಾತಾರಮಭಿಗರ್ಜಿತಃ ॥ ೬೫ ॥**

---

೬೦. ಆ ಮಾಯೆಯನ್ನು ಮೋಹನಾಸ್ತ್ರದಿಂದ ನಾಶಮಾಡಿ ಬಾಣಬಿಡುತ್ತಾ ಆ ರಾಕ್ಷಸನನ್ನು ಆವರಿಸಿದನು.

೬೧. ಆಗ ದಿಕ್ಕುಗಳು ಪ್ರಸನ್ನವಾದುವು. ಸೂರ್ಯನ ಪರಿವೇಷವು ತಪ್ಪಿತು. ಮೇಘಗಳು ಹೋದುವು. ಮಿಂಚು ಶಾಂತವಾಯಿತು.

೬೨. ಆಗ ರಾಕ್ಷಸನ ವಿಮಾನವು ಎದುರಿಗೆ ಗೋಚರಿಸಿತು. ಹೊಡಿ, ಕಡಿ ಎಂಬ ಮಾತುಗಳು ಹೊರಹೊಮ್ಮಿದುವು.

೬೩. ಅನೇಕ ಬಾಣಗಳು ಆ ಕಾಮಗವಿಮಾನದಲ್ಲಿ ಬಿದ್ದುವು.

೬೪. ಆಗ ಆ ರಾಕ್ಷಸನ ಪಟ್ಟಣದ ಒಂದುಭಾಗವೇ ಬಿದ್ದಿತೋ ಎಂಬಂತೆ ಆ ವಿಮಾನವು ಅಲ್ಲಿ ಬಿದ್ದುಹೋಯಿತು.

೬೫. ಆಗ ಆ ರಾಕ್ಷಸನು ಕೋಪಗೊಂಡು ಬಾಣಗಳಿಂದ ಹೊಡೆಯುತ್ತಾ ಶತ್ರುಘ್ನನನ್ನು ಎದುರಿಸಿದನು.

ತೇ ಬಾಣಾಶ್ಚ ತತಸ್ತಸ್ಯ ಲಗ್ನಾ ವಪುಷಿ ಭೂರಿಶಃ ।
ಶೋಭಾಮಾಪುಃ ಶೋಣಿತೌಘಾನ್ಸ್ರವಂತಸ್ತೀಕ್ಷ್ಣವಕ್ತ್ರಿಣಃ ॥ ೬೬ ॥

ಶತ್ರುಘ್ನಃ ಪರಯಾ ಶಕ್ತ್ಯಾ ಸಂಯುಕ್ತೋ ವಾಯುದೈವತಂ ।
ಅಸ್ತ್ರಂ ಧನುಷಿ ಚಾಧತ್ತ ರಾಕ್ಷಸಾನಾಂ ಪ್ರಕಂಪನಂ ॥ ೬೭ ॥

ತೇನಾಸ್ತ್ರೇಣ ವಿಮಾನಾತ್ತ್ವಾತ್ಪತಂತೋ ಮುಕ್ತಮೂರ್ಧಜಾಃ ।
ದೃಶ್ಯಂತೇ ಭೂತವೇತಾಳಸಂಘಾ ಇವ ನಭಶ್ಚರಾಃ ॥ ೬೮ ॥

ತದಸ್ತ್ರಂ ರಘುನಾಥಸ್ಯ ಭ್ರಾತೃಮುಕ್ತಂ ವಿಲೋಕ್ಯ ಸಃ ।
ಅಸ್ತ್ರಂ ವೈ ಪಾಶುಪತ್ಯಂ ಸ್ವಚಾಪೇಽಧಾದ್ದನುಜಾತ್ಮಜಃ ॥ ೬೯ ॥

ತತಃ ಪ್ರವೃತ್ತಾ ವೇತಾಳಾ ಭೂತಪ್ರೇತನಿಶಾಚರಾಃ ।
ಕಪಾಲಕರ್ತರೀಯುಕ್ತಾಃ ಪಿಬಂತಃ ಶೋಣಿತಂ ಬಹು ॥ ೭೦ ॥

ತೇ ವೈ ಶತ್ರುಘ್ನವೀರಾಣಾಂ ರುಧಿರಾಣಿ ಪಪುರ್ಮುದಾ ।
ಜೀವತಾಮಪಿ ದುರ್ವಾರಾಃ ಕರ್ತರೀಪಾಣಿಶೋಭಿತಾಃ ॥ ೭೧ ॥

---

೬೬. ಆ ಬಾಣಗಳು ಅವನ ದೇಹದಲ್ಲಿ ಅನೇಕವಾಗಿ ಚುಚ್ಚಿಕೊಂಡು ರಕ್ತವನ್ನು ಸುರಿಸುತ್ತ ಪ್ರಕಾಶಿಸಿದವು.

೬೭. ಶತ್ರುಘ್ನನು ಶಕ್ತಿಯನ್ನು ಹೂಡಿ ಅದಕ್ಕೆ ವಾಯುಮಂತ್ರವನ್ನು ಅಭಿಮಂತ್ರಿಸಿದನು.

೬೮. ಆ ವಾಯವ್ಯಾಸ್ತ್ರದಿಂದ ತಲೆಕೆದರಿಕೊಂಡು ಬೀಳುತ್ತಿದ್ದ ರಾಕ್ಷಸರು ಅಂತರಿಕ್ಷದಲ್ಲಿ ಸಂಚರಿಸುವ ಭೂತಭೇತಾಳಗಳಂತೆ ಕಾಣುತ್ತಿದ್ದರು.

೬೯. ಆ ವಾಯವ್ಯಾಸ್ತ್ರವನ್ನು ಬಿಟ್ಟದುದನ್ನು ನೋಡಿ ಆ ರಾಕ್ಷಸನು ಪಾಶುಪತಾಸ್ತ್ರವನ್ನು ಬಿಟ್ಟನು.

೭೦. ಆ ಅಸ್ತ್ರದಿಂದ ಕಿವಿಯಲ್ಲಿ ಕತ್ತರಿಯನ್ನು ಇಟ್ಟುಕೊಂಡಿರುವ ಭೂತ ಪ್ರೇತ ಭೇತಾಳಗಳು ರಕ್ತವನ್ನು ಕುಡಿಯತಕ್ಕವು ಹುಟ್ಟಿದುವು.

೭೧. ಅವು ಶತ್ರುಘ್ನನ ವೀರರ ರಕ್ತವನ್ನು ಜೀವದಿಂದಿರುವವರನ್ನು ಕತ್ತರಿಯಿಂದ ಕತ್ತರಿಸುತ್ತ ಕುಡಿಯುತ್ತಿದ್ದುವು.

ತದಸ್ತ್ರಂ ವ್ಯಾಪ್ತುವದ್ದೃಷ್ಟ್ವಾ ಸರ್ವವೀರಪ್ರಭಂಜನಂ ।
ಮುಮೋಚ ತನ್ನಿವಾರಾಯ ನಾರಾಯಣಮಥಾಸ್ತ್ರಕಂ ॥ ೭೨ ॥

ನಾರಾಯಣಾಸ್ತ್ರಂ ತಾನ್ಸರ್ವಾನ್ ವಾರಯಾಮಾಸ ತತ್ಕ್ಷಣಾತ್ ।
ತೇ ಸರ್ವೇ ವಿಲಯಂ ಪ್ರಾಪುರ್ನಿಶಾಚರಪ್ರಚೋದಿತಾಃ ॥ ೭೩ ॥

ತದಾ ಕ್ರುದ್ಧೋ ನಿಶಾಚಾರೀ ವಿದ್ಯುನ್ಮಾಲೀ ಸಮಾದದೇ ।
ತ್ರಿಶೂಲಂ ನಿಶಿತಂ ಘೋರಂ ಶತ್ರುಘ್ನಂ ಹಂತುಮುಲ್ಬಣಂ ॥ ೭೪ ॥

ಶೂಲಹಸ್ತಂ ಸಮಾಯಾಂತಂ ವಿದ್ಯುನ್ಮಾಲಿನಮಾಹವೇ ।
ಸಾಯಕೈಃ ಪ್ರಾಹರತ್ತಸ್ಯ ಭುಜೇ ತ್ವರ್ಧಶಶಿಪ್ರಭೈಃ ॥ ೭೫ ॥

ತೈರ್ಬಾಣೈಶ್ಛಿನ್ನಹಸ್ತಸ್ಸ ಶಿರಸಾ ಹಂತುಮುದ್ಯತಃ ।
ಹತೋಽಸಿ ಯಾಹಿ ಶತ್ರುಘ್ನ ಕಸ್ತ್ವಂ ತ್ರಾತಾ ಭವಿಷ್ಯತಿ ॥ ೭೬ ॥

ಇತಿ ಬ್ರುವಾಣಂ ತರಸಾ ಚಿಚ್ಛೇದ ಶಿತಸಾಯಕೈಃ ।
ಮಸ್ತಕಂ ತಸ್ಯ ಬಲಿನಃ ಶೂಸ್ಯ ಸಹಕುಂಡಲಂ ॥ ೭೭ ॥

---

೭೨. ಆ ಅಸ್ತ್ರವು ವ್ಯಾಪಿಸಿದುದನ್ನು ನೋಡಿ ಶತ್ರುಘ್ನನು ನಾರಾಯಣಾಸ್ತ್ರವನ್ನು ಬಿಟ್ಟನು.

೭೩. ನಾರಾಯಣಾಸ್ತ್ರವು ಅವರೆಲ್ಲರನ್ನೂ ವಾರಿಸಲು ಆ ಪಿಶಾಚಗಳೆಲ್ಲವೂ ನಾಶವಾದುವು.

೭೪. ಆಗ ವಿದ್ಯುನ್ಮಾಲಿಯು ಕೋಪಗೊಂಡು ಶತ್ರುಘ್ನನನ್ನು ಕೊಲ್ಲಲು ತ್ರಿಶೂಲವನ್ನು ಹಿಡಿದನು.

೭೫. ವಿದ್ಯುನ್ಮಾಲಿಯು ಕೊಲ್ಲಲು ಶೂಲವನ್ನು ತರುತ್ತಿರುವುದನ್ನು ನೋಡಿ ಶತ್ರುಘ್ನನು ಬಾಣಗಳಿಂದ ಅವನ ತೋಳುಗಳನ್ನು ಹೊಡೆದನು.

೭೬. ಆ ಬಾಣಗಳು ತೋಳುಗಳನ್ನು ಕತ್ತರಿಸಲು ಅವನು ತಲೆಯಿಂದಲೇ ಶತ್ರುಘ್ನನನ್ನು ಕೊಲ್ಲಲು ಹೊರಟು, ಶತ್ರುಘ್ನನೇ ನಿನ್ನನ್ನು ಕಾಪಾಡುವವರು ಯಾರು? ಎಂದನು.

೭೭. ಈರೀತಿ ಹೇಳುತ್ತಲಿದ್ದ ಆ ರಾಕ್ಷಸನ ತಲೆಯನ್ನು ಶತ್ರುಘ್ನನು ಕತ್ತರಿಸಿದನು.

ತಂ ಛಿನ್ನಶಿರಸಂ ದೃಷ್ಟ್ವಾ ಉಗ್ರದಂಷ್ಟ್ರಃ ಪ್ರತಾಪವಾನ್ ।
ಮುಷ್ಟಿನಾ ಹಂತುಮಾರೇಭೇ ಶತ್ರುಘ್ನಂ ಶೂರಸೇವಿತಂ ॥ ೭೮ ॥

ಶತ್ರುಘ್ನಸ್ತಂ ಕ್ಷುರಪ್ರೇಣ ಸಾಯಕೇನಾಽಚ್ಛಿನಚ್ಛಿರಃ ।
ಪ್ರಧಾವತೋ ರಣೇ ವೀರಾನ್ ಸರ್ವಶಸ್ತ್ರಾಸ್ತ್ರಕೋವಿದಾನ್ ॥ ೭೯ ॥

ಹತಶೇಷಾ ಯಯುಸ್ಸರ್ವೇ ರಾಕ್ಷಸಾ ನಾಥವರ್ಜಿತಾಃ ।
ಶತ್ರುಘ್ನಂ ಪ್ರಣಿಪತ್ಯಾಥ ದದುರ್ವಾಜಿನ ಮಾಹೃತಂ ॥ ೮೦ ॥

ತತೋ ವೀಣಾನಿನಾದಾಶ್ಚ ಶಂಖನಾದಾಸ್ಸಮಂತತಃ ।
ಶ್ರೂಯಂತೇ ಶೂರವೀರಾಣಾಂ ಜಯನಾದಾ ಮನೋಹರಾಃ ॥ ೮೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ವಿದ್ಯುನ್ಮಾಲಿರಾಕ್ಷಸಪರಾಜಯ ಕಥನಂ ನಾಮ ಚತುಸ್ತ್ರಿಂಶೋಽಧ್ಯಾಯಃ

---

೭೮. ಅವನ ತಲೆಯನ್ನು ಕತ್ತರಿಸಿದುದನ್ನು ನೋಡಿ ಉಗ್ರದಂಷ್ಟ್ರನು ಮುಷ್ಟಿಯಿಂದ ಶತ್ರುಘ್ನನನ್ನು ಹೊಡೆಯಲು ಬಂದನು.

೭೯. ಶತ್ರುಘ್ನನು ಆ ಉಗ್ರದಂಷ್ಟ್ರನ ತಲೆಯನ್ನು ಕತ್ತರಿಸಿ ಶತ್ರುಗಳ ಶೂರರನ್ನು ಹೊಡೆಯಲು ಮೊದಲಿಟ್ಟನು.

೮೦. ಕಳೆದುಳಿದ ರಾಕ್ಷಸರು ಯಜಮಾನನಿಲ್ಲದೆ ಶತ್ರುಘ್ನನಿಗೆ ನಮಸ್ಕರಿಸಿ ಕಟ್ಟಿದ್ದ ಕುದುರೆಯನ್ನು ತಂದೊಪ್ಪಿಸಿದರು.

೮೧. ಅನಂತರ ವೀಣೆಯ ನಾದವೂ ಶೂರರ ಶಂಖಧ್ವನಿಯೂ ವೀರರ ಜಯ ಧ್ವನಿಯೂ ಮನೋಹರವಾಗಿ ಕೇಳಿಸುತ್ತಿದ್ದುವು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ವಿದ್ಯುನ್ಮಾಲೀರಾಕ್ಷಸ ಪರಾಜಯಕಥನವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಂಚತ್ರಿಂಶೋಽಧ್ಯಾಯಃ

॥ ಶೇಷ ಉವಾಚ ॥

ಪ್ರಾಪ್ಯ ತಂ ವಾಜಿನಂ ರಾಜಾ ಶತ್ರುಘ್ನೋ ರಾಕ್ಷಸೈರ್ಹೃತಂ ।
ಅತ್ಯಂತಂ ಹರ್ಷಮಾಪೇದೇ ಪುಷ್ಕಲೇನ ಸಮನ್ವಿತಃ ॥ ೧ ॥

ರುಧಿರೈಸ್ಸಿಕ್ತಗಾತ್ರಾಸ್ತೇ ಯೋಧಾ ಲಕ್ಷ್ಮೀನಿಧಿಸ್ತಥಾ ।
ರಣೋತ್ಸಾಹೇನ ಸಂಯುಕ್ತಾಃ ಪ್ರಶಶಂಸುರ್ಮಹಾನೃಪಂ ॥ ೨ ॥

ಹತೇ ತಸ್ಮಿನ್ಮಹಾದೈತ್ಯೇ ವಿದ್ಯುನ್ಮಾಲಿನಿ ದುರ್ಜಯೇ ।
ಸುರಾಸ್ಸರ್ವೇ ಭಯಂ ತ್ಯಕ್ತ್ವಾ ಸುಖಮಾಪುರ್ಮನೇ ಮಹತ್ ॥ ೩ ॥

---

## ಮೂವತ್ತೈದನೆಯ ಅಧ್ಯಾಯವು

೧. ಶೇಷನು ಹೇಳಿದನು:—ರಾಕ್ಷಸನು ಕದ್ದಿದ್ದ ಯಾಗಕುದುರೆಯನ್ನು ಹೊಂದಿದುದರಿಂದ ಶತ್ರುಘ್ನನೂ ಪುಷ್ಕಲನೂ ಸಂತೋಷಪಟ್ಟರು.

೨. ರಕ್ತದಿಂದ ಕೂಡಿರುವ ಯೋಧರೂ ಲಕ್ಷ್ಮೀನಿಧಿಯೂ ರಣೋತ್ಸಾಹ ದಿಂದ ಶತ್ರುಘ್ನನನ್ನು ಹೊಗಳಿದರು.

೩. ಆ ವಿದ್ಯುನ್ಮಾಲಿಯೆಂಬ ರಾಕ್ಷಸನು ಸಾಯಲು ದೇವತೆಗಳೆಲ್ಲರೂ ಭಯ ವನ್ನು ಬಿಟ್ಟು ಸುಖ ಹೊಂದಿದರು.

ನದ್ಯಸ್ತು ವಿಮಲಾ ಜಾತಾ ರವಿಸ್ತು ವಿಮಲೋऽಭವತ್ ।
ವಾತಾ ವವುಸ್ಸುಗಂಧೋದಸಿಕ್ತಾ ವಿಮಲಶುಷ್ಮಿಣಃ ॥ ೪ ॥

ಸನ್ನದ್ಧಾಸ್ತೇ ಮಹಾವೀರಾ ರಥಸ್ಥಾ ವಿಮಲಾಂಗಕಾಃ ।
ರಾಜಾನಮೂಚುಸ್ತೇ ಸರ್ವೇ ಜಯಲಕ್ಷ್ಮ್ಯಾ ಸಮನ್ವಿತಾಃ ॥ ೫ ॥

॥ ವೀರಾ ಊಚುಃ ॥

ದಿಷ್ಟ್ಯಾ ಹತಸ್ತ್ವಯಾ ದೈತ್ಯೋ ವಿದ್ಯುನ್ಮಾಲೀ ಮಹಾಬಲಃ ।
ಯದ್ಭಯಾತ್ತ್ರಾ ಸಮಾಪನ್ನಾಃ ಸುರಾಸ್ಸ್ವರ್ಗಾನ್ನಿರಾಕೃತಾಃ ॥ ೬ ॥

ದಿಷ್ಟ್ಯಾ ಪ್ರಾಪ್ತೋ ಮಹಾವಾಜೀ ರಘುನಾಥಸ್ಯ ಶೋಭನಃ ।
ದಿಷ್ಟ್ಯಾ ಗಂತಾಸಿ ಸರ್ವತ್ರ ಜಯಂತು ಕ್ಷಿತಿಮಂಡಲೇ ॥ ೭ ॥

ಸ್ವಾಮಿನ್ ಮುಂಚ ತ್ವಿಮಂ ವಾಹಂ ಮನೋವೇಗಂ ಮನೋರಮಂ ।
ಸಮಯಸ್ಯ ವಿಲಂಬೋ ಮಾ ಭವತ್ವತ್ರ ಮಹಾಮತೇ ॥ ೮ ॥

---

೪. ನದಿಗಳೆಲ್ಲವೂ ಪರಿಶುದ್ಧವಾದುವು. ಸೂರ್ಯನು ನಿರ್ಮಲನಾದನು. ಸುವಾಸನೆಯಾಗಿ ತಣ್ಣಗೆ ಗಾಳಿ ಬೀಸಿತು. ಮತ್ತು ಧೂಳಿನಿಂದ ಬಿಡಲ್ಪಟ್ಟಿದ್ದಿತು.

೫. ಯುದ್ಧಸನ್ನದ್ಧರಾಗಿ ರಥದಲ್ಲಿದ್ದ ಆ ವೀರರೆಲ್ಲರೂ ಜಯದಿಂದ ಕೂಡಿ ರಾಜನಾದ ಶತ್ರುಘ್ನನನ್ನು ಕುರಿತು ಇಂತೆಂದರು.

೬. ವೀರರು ಹೇಳಿದರು:—ಯಾವನ ಭಯದಿಂದ ದೇವತೆಗಳೂ ಕೂಡ ಸ್ವರ್ಗವನ್ನು ಬಿಟ್ಟಿದ್ದರೋ ಅಂತಹ ವಿದ್ಯುನ್ಮಾಲಿಯೆಂಬ ದೈತ್ಯನು ನಿನ್ನಿಂದ ಕೊಲ್ಲಲ್ಪಟ್ಟುದು ಅದ್ಭುತವು.

೭. ರಾಮನ ಕುದುರೆಯು ಪ್ರಾಪ್ತವಾದುದು ಸಂತೋಷಕರವು. ಸಂತೋಷದಿಂದ ಎಲ್ಲೆಡೆಯಲ್ಲೂ ಜಯವನ್ನು ಹೊಂದುತ್ತ ಹೋಗುತ್ತಿದ್ದೀಯೆ.

೮. ಈ ಯಾಗದ ಕುದುರೆಯನ್ನು ಬಿಟ್ಟುಬಿಡು. ಇಚ್ಛೆಬಂದಂತೆ ಹೋಗಲಿ. ಕಾಲವು ಸಾವಕಾಶವಾಗಬಾರದು.

॥ ಶೇಷ ಉವಾಚ ॥

ಇತಿ ಶ್ರುತ್ವಾ ತು ತದ್ವಾಕ್ಯಂ ವೀರಾಣಾಂ ಸಮುಯೋಚಿತಂ ।
ಸಾಧು ಸಾಧು ಪ್ರಶಸ್ಯೈತನ್ಮುಮೋಚ ಹಯಮುತ್ತಮಂ ॥ ೯ ॥

ಸ ಮುಕ್ತಶ್ಚೋತ್ತರಾಮಾಶಾಂ ಬಭ್ರಾಮ ರಥಿರಕ್ಷಿತಃ ।
ರಥಪತ್ತಿಹಯಶ್ರೇಷ್ಠೈಃ ಸರ್ವಶಸ್ತ್ರಾಸ್ತ್ರಕೋವಿದೈಃ ॥ ೧೦ ॥

ತತ್ರ ಯದ್ವೃತ್ತಮೇತಸ್ಯ ಶತ್ರುಘ್ನಸ್ಯ ಮನೋಹರಂ ।
ವಾತ್ಸ್ಯಾಯನ ಶೃಣುಷ್ವೈತತ್ಪಾಪರಾಶಿಪ್ರದಾಹಕಂ ॥ ೧೧ ॥

ರೇವಾತೀರಮಥ ಪ್ರಾಪ್ತೋ ಮುನಿವೃಂದನಿಷೇವಿತಂ ।
ನೀಲರತ್ನಸಮೂಹಸ್ಯ ರಸಃ ಕಿನ್ನು ಪಯೋಮಿಷಾತ್ ॥ ೧೨ ॥

ತಾಂಸ್ತಾನ್ಮುನಿವರಾನ್ ಸರ್ವಾನ್ ಪ್ರಣಮನ್ ಶೂರಸೇವಿತಃ ।
ಜಗಾಮ ಹಯರಕ್ಷಸ್ಯ ಪೃಷ್ಠತಃ ಕಾಮಗಾಮಿನಃ ॥ ೧೩ ॥

ಗಚ್ಛಂಸ್ತತ್ರಾಶ್ರಮಂ ಜೀರ್ಣಂ ಪಲಾಶಪರ್ಣನಿರ್ಮಿತಂ ।
ರೇವಾಯಾ ಜಲಕಲ್ಲೋಲೈಃ ಸಿಕ್ತಂ ಪಾಪಹರಾಶ್ರಯಂ ॥ ೧೪ ॥

---

೯. ವೀರರ ಸಮುಯೋಚಿತವಾದ ಮಾತನ್ನು ಕೇಳಿ ಸಾಧು ಸಾಧು ಎಂದು ಹೇಳುತ್ತ ಕುದುರೆಯನ್ನು ಬಿಟ್ಟನು.

೧೦. ಆ ಕುದುರೆಯು ಬಿಡಲ್ಪಟ್ಟು ರಥಿಕರಿಂದಲೂ ಆನೆ ಕುದುರೆ ಮುಂತಾದ ಸೈನ್ಯಗಳಿಂದಲೂ ರಕ್ಷಿಸಲ್ಪಡುತ್ತಾ ಉತ್ತರ ದಿಕ್ಕಿಗೆ ತಿರುಗಿತು.

೧೧. ಅಲ್ಲಿ ಶತ್ರುಘ್ನನಿಗೆ ಆದ ಸಮಾಚಾರವನ್ನು ಹೇಳುತ್ತೇನೆ. ಅದು ಪಾಪಹಾರಕವು. ವಾತ್ಸ್ಯಾಯನನೇ, ಕೇಳು.

೧೨. ನೀಲರತ್ನದ ರಸವೇ ಈ ನೀರಿನ ರೂಪದಿಂದ ಹರಿಯುತ್ತದೆಯೋ ಎಂಬಂತೆ ಇರುವ, ಮುನಿಗಳಿಂದ ಸೇವಿಸಲ್ಪಡುತ್ತಿರುವ ರೇವಾತೀರಕ್ಕೆ ಹೋದನು.

೧೩. ಶೂರರಿಂದ ಸೇವಿತನಾದ ಆ ಶತ್ರುಘ್ನನು ಆ ಋಷಿಶ್ರೇಷ್ಠರನ್ನು ನಮಸ್ಕರಿಸುತ್ತ ಆ ಕುದುರೆಯ ಹಿಂದೆಯೇ ಹೋದನು.

೧೪. ಹೋಗುತ್ತಿರುವಾಗ ರೇವೆಯ ನೀರಿನಿಂದ ತೊಯ್ದ, ಪಾಪಹರವಾದ ಒಂದು ಜೀರ್ಣವಾದ ಮುತ್ತುಗದೆಲೆಯಿಂದ ರಚಿಸಿರುವ ಆಶ್ರಮವನ್ನು ನೋಡಿದನು.

ತಂ ದೃಷ್ಟ್ವಾ ಸುಮತಿಂ ಪ್ರಾಹ ಸರ್ವಜ್ಞಂ ನಯಕೋವಿದಂ ।
ಶತ್ರುಘ್ನಸ್ಸರ್ವಧರ್ಮಾರ್ಥಕರ್ಮಕರ್ತವ್ಯಕೋವಿದಃ ॥ ೧೫ ॥

॥ ರಾಜೋವಾಚ ॥

ಮಂತ್ರಿನ್ಕಥಯ ಕಸ್ಯಾಯಮಾಶ್ರಮಃ ಪುಣ್ಯದರ್ಶನಃ ।
ವಿಚಾರಚತುರಶ್ರೇಷ್ಠ ವದೈತನ್ಮಮ ಪೃಚ್ಛತಃ ॥ ೧೬ ॥

ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಸುಮತಿಃ ಪ್ರಾಹ ತಂ ನೃಪಂ ।
ವಿಶದಸ್ಮೇರಯಾ ವಾಚಾ ದರ್ಶಯನ್ನಾತ್ಮಸೌಹೃದಂ ॥ ೧೭ ॥

॥ ಸುಮತಿರುವಾಚ ॥

ಏನಂ ದೃಷ್ಟ್ವಾ ಮಹಾರಾಜ ಧೂತಪಾಪಾ ವಯಂ ಮಹತ್ ।
ಭವಿಷ್ಯಾಮೋ ಮುನಿಶ್ರೇಷ್ಠಂ ಸರ್ವಶಾಸ್ತ್ರಪರಾಯಣಂ ॥ ೧೮ ॥

ತಸ್ಮಾನ್ನತ್ವಾ ತಮಾಪೃಚ್ಛ ಸರ್ವಂ ತೇ ಕಥಯಿಷ್ಯತಿ ।
ರಘುನಾಥಪದಾಂಭೋಜಮಕರಂದಾಸ್ವಾದಲೋಲುಪಃ ॥ ೧೯ ॥

---

೧೫. ಎಲ್ಲಾ ಆಶ್ರಮಗಳ ಧರ್ಮವನ್ನು ಬಲ್ಲ ಶತ್ರುಘ್ನನು ಸರ್ವಜ್ಞನಾದ ಸುಮತಿಯನ್ನು ಕುರಿತು ಆ ಆಶ್ರಮದ ವಿಷಯವನ್ನು ಕೇಳಿದನು.

೧೬. ರಾಜನು ಹೇಳಿದನು:—ಎಲೈ! ಮಂತ್ರಿಯೇ, ಪುಣ್ಯದರ್ಶನವಾದ ಆಶ್ರಮವು ಯಾರದು? ವಿಚಾರದಲ್ಲಿ ಬುದ್ಧಿವಂತನಾದವನೇ, ಇದನ್ನು ನನಗೆ ಹೇಳು.

೧೭. ಶೇಷನು ಹೇಳಿದನು:—ಈ ಮಾತನ್ನು ಕೇಳಿ ಸುಮತಿಯು ಮುಗುಳು ನಗೆಯಿಂದ ತನ್ನ ಸ್ನೇಹವನ್ನು ತೋರಿಸುತ್ತ ಇಂತೆಂದನು.

೧೮. ಸುಮತಿಯು ಹೇಳಿದನು:—ಎಲೈ! ದೊರೆಯೇ, ಸರ್ವಶಾಸ್ತ್ರಗಳನ್ನು ಬಲ್ಲ ಈ ಮುನಿಯ ದರ್ಶನವನ್ನು ಮಾಡಿ ಪಾಪವನ್ನು ಕಳೆದುಕೊಳ್ಳೋಣ.

೧೯. ರಘುನಾಥನ ಪಾದಾರವಿಂದದಲ್ಲಿ ಆಸಕ್ತನಾದ ನೀನು ಆ ಋಷಿಯನ್ನು ನಮಸ್ಕರಿಸಿ ಕೇಳಿದರೆ ಆತನು ಎಲ್ಲವನ್ನೂ ಹೇಳುತ್ತಾನೆ.

ಸಾಮ್ನಾ ತ್ವಾರಣ್ಯಕಂ ಖ್ಯಾತಂ ರಘುನಾಥಾಂಘ್ರಿಸೇವಕಂ ।
ಅತ್ಯುಗ್ರತಪಸಾ ಪೂರ್ಣಂ ಸರ್ವಶಾಸ್ತ್ರಾರ್ಥಕೋವಿದಂ ॥ ೨೦ ॥

ಇತಿ ಶ್ರುತ್ವಾಥ ತದ್ವಾಕ್ಯಂ ಧರ್ಮಾರ್ಥಪರಿಬೃಂಹಿತಂ ।
ಜಗಾಮ ತಮಥೋ ದ್ರಷ್ಟುಂ ಸ್ವಲ್ಪಸೇವಕಸಂಯುತಃ ॥ ೨೧ ॥

ಹನೂಮಾನ್ ಪುಷ್ಕಲೋ ವೀರಃ ಸುಮತಿರ್ಮಂತ್ರಿಸತ್ತಮಃ ।
ಲಕ್ಷ್ಮೀನಿಧಿಃ ಪ್ರತಾಪಾಗ್ರ್ಯಃ ಸುಬಾಹುಸುಮದೌ ತಥಾ ॥ ೨೨ ॥

ಏತೈಃ ಪರಿವೃತೋ ರಾಜಾ ಶತ್ರುಘ್ನಃ ಪ್ರಾಪದಾಶ್ರಮಂ ।
ನಮಸ್ಕರ್ತುಂ ದ್ವಿಜವರಮಾರಣ್ಯಕಮುದಾರಧೀಃ ॥ ೨೩ ॥

ಗತ್ವಾ ತಂ ತಾಪಸಶ್ರೇಷ್ಠಂ ನಮಸ್ಕಾರಮಥಾಕರೋತ್ ।
ಸರ್ವೈಸ್ತೈಸ್ಸಹಿತೋ ವೀರೈರ್ವಿನಯಾನತಕಂಧರೈಃ ॥ ೨೪ ॥

ತಾನ್ದೃಷ್ಟ್ವಾ ಸನ್ನತಾನ್ಸರ್ವಾನ್ ಶತ್ರುಘ್ನಪ್ರಮುಖಾನ್ ನೃಪಾನ್ ।
ಅರ್ಘ್ಯಪಾದ್ಯಾದಿಕಂ ಚಕ್ರೇ ಫಲಮೂಲಾದಿಭಿಸ್ತಥಾ ॥ ೨೫ ॥

---

೨೦. ಇವನ ಹೆಸರು ಆರಣ್ಯಕನೆಂದು. ರಾಮಭಕ್ತನು. ಒಳ್ಳೆಯ ತಪಸ್ವಿಯು. ಸರ್ವಶಾಸ್ತ್ರಗಳನ್ನು ಬಲ್ಲವನು.

೨೧. ಧರ್ಮಾರ್ಥದಿಂದ ಕೂಡಿದ ಈ ಮಾತನ್ನು ಕೇಳಿ ಆ ಮುನಿಯನ್ನು ನೋಡಲು ಮಿತಪರಿವಾರದೊಂದಿಗೆ ಹೋದನು.

೨೨-೨೩. ಹನುಮಂತ, ಪುಷ್ಕಲ, ಸುಮತಿ, ಲಕ್ಷ್ಮೀನಿಧಿ, ಪ್ರತಾಪಾಗ್ರ್ಯ ಸುಬಾಹು, ಸುಮದ, ಇವರಿಂದ ಕೂಡಿಕೊಂಡು ಆ ಆರಣ್ಯಕಮುನಿಯನ್ನು ನಮಸ್ಕರಿಸಲು ಆಶ್ರಮಕ್ಕೆ ಹೋದನು.

೨೪. ಆ ವೀರರೊಡನೆ ನಮ್ರನಾಗಿ ಆ ತಾಪಸನಿಗೆ ನಮಸ್ಕರಿಸಿದನು.

೨೫. ಆ ಶತ್ರುಘ್ನನೇ ಮುಂತಾದ ರಾಜರನ್ನು ನೋಡಿ ಅವರಿಗೆ ಫಲಮೂಲಾದಿಗಳಿಂದ ಸತ್ಕರಿಸಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟನು.

ಉವಾಚ ತಾನ್ನೃಪಜಾನ್ಸರ್ವಾನ್ಭವಂತಃ ಕುತ್ರ ಸಂಗತಾಃ ।
ಕಥಮತ್ರ ಸಮಾಯಾತಸ್ತತ್ಸರ್ವಂ ವದತಾನಘಾಃ ॥ ೨೬ ॥

ತುಚ್ಛ್ರುತ್ವಾ ವಾಕ್ಯಮೇತಸ್ಯ ಮುನಿವರ್ಯಸ್ಯ ಬಾಡವ ।
ಸುಮತಿಃ ಕಥಯಾಮಾಸ ವಾಕ್ಯವಾದವಿಚಕ್ಷಣಃ ॥ ೨೭ ॥

॥ ಸುಮತಿರುವಾಚ ॥

ರಘುವಂಶನೃಪಸ್ಯಾಯಮಶ್ವೋ ವೈ ಪಾಲ್ಯತೇಽಖಿಲೈಃ ।
ಯಾಗಂ ಕರಿಷ್ಯತೇ ವೀರಃ ಸರ್ವಸಂಭಾರಸಂಭೃತಂ ॥ ೨೮ ॥

ತಚ್ಛ್ರುತ್ವಾ ವಚನಂ ತೇಷಾಂ ಜಗಾದ ಮುನಿಸತ್ತಮಃ ।
ದಂತಕಾಂತ್ಯಾಖಿಲಂ ಘೋರಂ ತಮೋ ನಿರ್ವಾರಯನ್ನಿವ ॥ ೨೯ ॥

॥ ಆರಣ್ಯಕ ಉವಾಚ ॥

ಕಿಂ ಯಾಗೈರ್ವಿವಿಧೈರನ್ಯೈಸ್ಸರ್ವಸಂಭಾರಸಂಭೃತೈಃ ।
ಸ್ವಲ್ಪಪುಣ್ಯಪ್ರದೈರ್ನೂನಂ ಕ್ಷಯಿಷ್ಣುಪದದಾತೃಕೈಃ ॥ ೩೦ ॥

---

೨೬. ಅವರೆಲ್ಲರನ್ನೂ ನೋಡಿ ನೀವೆಲ್ಲರೂ ಹೀಗೆ ಒಟ್ಟಾಗಿ ಸೇರಿ ಇಲ್ಲಿಗೆ ಬಂದ ಕಾರಣವೇನು? ಅದೆಲ್ಲವನ್ನೂ ಹೇಳಿರಿ. ಎಂದನು.

೨೭. ಋಷಿಯ ಆ ಮಾತನ್ನು ಕೇಳಿ ಬುದ್ಧಿಕುಶಲನಾದ ಸುಮತಿಯು ಇಂತೆಂದನು.

೨೮. ಸುಮತಿಯು ಹೇಳಿದನು:—ರಘುವಂಶದ ದೊರೆಯು ಅಶ್ವಮೇಧವನ್ನು ಮಾಡುತ್ತಾನೆ. ನಾವೆಲ್ಲರೂ ಅದರ ಪಾಲಕರು. ಆ ಯಾಗಕ್ಕೆ ಸಮಸ್ತ ಸಿದ್ಧತೆಯನ್ನೂ ಮಾಡಿಕೊಂಡಿದ್ದಾನೆ.

೨೯. ಹಲ್ಲಿನ ಬೆಳಕಿನಿಂದ ಕತ್ತಲೆಯನ್ನು ನಾಶಮಾಡುತ್ತ ಆ ಋಷಿಯು ಅವರ ಮಾತನ್ನು ಕೇಳಿ ಇಂತೆಂದನು.

೩೦. ಆರಣ್ಯಕನು ಹೇಳಿದನು:—ಎಲ್ಲಾ ಪದಾರ್ಥಗಳಿಂದ ಪೂರ್ತಿಯೆನಿಸಿಕೊಳ್ಳುವ ಯಾಗದಿಂದೇನು ಪ್ರಯೋಜನ? ಇವೆಲ್ಲವೂ ಸ್ವಲ್ಪ ಪುಣ್ಯವನ್ನು ಕೊಟ್ಟು ನಾಶವಾಗುವ ಸ್ಥಾನವಾಗುವ ಸ್ಥಾನವನ್ನು ಕೊಡುತ್ತವೆ.

ಮೂಢೋ ಲೋಕೋ ಹರಿಂ ತ್ಯಕ್ತ್ವಾ ಕರೋತ್ಯನ್ಯಸಮರ್ಚನಂ ।
ರಘುವೀರಂ ರಮಾನಾಥಂ ಸ್ಥಿರೈಶ್ವರ್ಯಪದಪ್ರದಂ ॥ ೩೧ ॥

ಯೋ ನರೈಸ್ಸ್ಮೃತಮಾತ್ರೋऽಸೌ ಹರತೇ ಪಾಪಪರ್ವತಂ ।
ತಂ ಮುಕ್ತ್ವಾ ಕ್ಲಿಶ್ಯತೇ ಮೂಢೋ ಯೋಗಯಾಗವ್ರತಾದಿಭಿಃ ॥ ೩೨ ॥

ಅಹೋ ಪಶ್ಯತ ಮೂಢತ್ವಂ ಲೋಕಾನಾಮತಿವಂಚಿತಂ ।
ಸುಲಭಂ ರಾಮಭಜನಂ ಮುಕ್ತ್ವಾ ದುರ್ಲಭಮಾಚರೇತ್ ॥ ೩೩ ॥

ಸಕಾಮೈರ್ಯೋಗಿಭಿರ್ವಾಪಿ ಚಿಂತ್ಯತೇ ಕಾಮವರ್ಜಿತೈಃ ।
ಅಪವರ್ಗಪ್ರದಂ ನೃಣಾಂ ಸ್ಮೃತಮಾತ್ರಾಖಿಲಾಘಹಂ ॥ ೩೪ ॥

ಪುರಾಹಂ ತತ್ವವಿತ್ಸಾಯಾಂ ಜ್ಞಾನಿನಾಂ ಸುವಿಚಾರಯನ್ ।
ಅಗಮಂ ಬಹುತೀರ್ಥಾನಿ ನ ಕೋऽಪಿ ಮಮ ತತ್ವದಃ ॥ ೩೫ ॥

---

೩೧. ರಘುವೀರನೂ ರಮಾನಾಥನೂ ಆದ, ಸ್ಥಿರವಾದ ಐಶ್ವರ್ಯಸ್ಥಾನಗಳನ್ನು ಕೊಡುವ ಹರಿಯನ್ನು ಮೂಢಜನರು ಬಿಟ್ಟು ಬೇರೆಯವರನ್ನು ಪೂಜಿಸುತ್ತಾರೆ.

೩೨. ಯಾವ ರಾಮನು ಸ್ಮರಣಮಾತ್ರದಿಂದಲೇ ಜನರ ಪಾಪಪರ್ವತಗಳನ್ನು ನಾಶಮಾಡುತ್ತಾನೆಯೋ ಅಂತಹವನನ್ನು ಬಿಟ್ಟು ಮೂಢರು ಯೋಗ, ಯಾಗ, ವ್ರತಗಳಿಂದು ಕಷ್ಟಪಡುತ್ತಾರೆ.

೩೩. ವಂಚಿತರಾಗಿರುವ ಜನರ ದಡ್ಡತನವನ್ನು ನೋಡು. ಸುಲಭವಾದ ರಾಮಭಜನೆಯನ್ನು ಬಿಟ್ಟು ಕಷ್ಟವಾದ ಕೆಲಸಗಳನ್ನು ಮಾಡುತ್ತಾರಲ್ಲ.

೩೪. ಆಶೆಯಿರುವವರಿಂದಲೂ, ನಿರಾಶರಾದವರಿಂದಲೂ, ಯೋಗಿಗಳಿಂದಲೂ ಕೂಡ ಆ ರಾಮನು ಭಾವಿಸಲ್ಪಡುತ್ತಾನೆ. ಅವನು ಮನುಷ್ಯರಿಗೆ ಮೋಕ್ಷವನ್ನು ಕೊಡತಕ್ಕವನು. ಸ್ಮರಣೆಮಾಡಿದರೇನೆ ಸಮಸ್ತ ಪಾಪವೂ ಹೋಗುತ್ತದೆ.

೩೫. ನಾನು ಪೂರ್ವದಲ್ಲಿ ತತ್ವವನ್ನು ತಿಳಿಯಬೇಕೆಂದು ಜ್ಞಾನಿಗಳನ್ನು ವಿಚಾರಿಸುತ್ತ ಬಹು ತೀರ್ಥಗಳನ್ನು ಸುತ್ತಿದೆನು. ಒಬ್ಬನೂ ತತ್ವವನ್ನು ಹೇಳಲೇ ಇಲ್ಲ.

ತದೈಕದಾ ಹಿ ಮದ್ಭಾಗ್ಯಾತ್ಪ್ರಾಪ್ತಂ ವೈ ಲೋಮಶಂ ಮುನಿಂ ।
ಸ್ವರ್ಗಲೋಕಾತ್ಸಮಾಯಾಂತಂ ತೀರ್ಥಯಾತ್ರಾಚಿಕೀರ್ಷಯಾ ॥ ೩೬ ॥

ತಮಹಂ ಪ್ರಣಿಪತ್ಯಾಥ ಪರ್ಯಪೃಚ್ಛಂ ಮಹಾಮುನಿಂ ।
ಮಹಾಯುಷಂ ಮಹಾಯೋಗಿಸಂಸೇವಿತಪದದ್ವಯಂ ॥ ೩೭ ॥

ಸ್ವಾಮಿನ್ಮಯಾದ್ಯ ಮಾನುಷ್ಯಂ ಪ್ರಾಪ್ಯ ದುರ್ಲಭಮದ್ಭುತಂ ।
ಸಂಸಾರಘೋರಜಲಧಿಂ ಕಿಂ ಕರ್ತವ್ಯಂ ತಿತೀರ್ಷುಣಾ ॥ ೩೮ ॥

ವಿಚಾರ್ಯ ಕಥಯ ತ್ವಂ ತದ್ವ್ರತಂ ದಾನಂ ಜಪಂ ಮಖಂ ।
ದೇವೋ ವಾ ವಿದ್ಯತೇ ಯೋ ವೈ ಸಂಸೃತಾಂಭೋಧಿತಾರಕಃ ॥ ೩೯ ॥

ಯದ್ಜ್ಞಾತ್ವಾ ಸಂಸೃತಿಂ ಘೋರಂ ತರಾಮಿ ತ್ವತ್ಕೃಪಾಬ್ಧಿತಃ ।
ತನ್ಮೇ ಕಥಯ ಯೋಗೇಶ ಸರ್ವಶಾಸ್ತ್ರಾರ್ಥಪಾರಗ ॥ ೪೦ ॥

---

೩೬. ಒಂದುಸಾರಿ ನನ್ನ ಅದೃಷ್ಟದಿಂದ ಸ್ವರ್ಗಲೋಕದಿಂದ ತೀರ್ಥಯಾತ್ರೆಯನ್ನು ಮಾಡಬೇಕೆಂಬಾಸೆಯಿಂದ ಬರುತ್ತಿರುವ ಲೋಮಶಮುನಿಯನ್ನು ಕಂಡೆನು.

೩೭. ಬಹು ಆಯುಸ್ಸುಳ್ಳ, ಯೋಗಿಗಳಿಂದಲೂ ನಮಸ್ಕರಿಸಲ್ಪಡುವ ಆ ಋಷಿಯನ್ನು ನಮಸ್ಕರಿಸಿ ಕೇಳಿದೆನು.

೩೮. ಸ್ವಾಮಿ, ನಾನು ದುರ್ಲಭವೂ ಅದ್ಭುತವೂ ಆದ ಮನುಷ್ಯಜನ್ಮವನ್ನು ಹೊಂದಿದ್ದೇನೆ. ಸಂಸಾರಸಾಗರವನ್ನು ದಾಟಲು ಏನು ಮಾಡಬೇಕು?

೩೯. ನೀನು ವಿಚಾರಮಾಡಿ ಹೇಳು. ಆ ವ್ರತ, ದಾನ, ಜಪ, ಯಾಗ ಇವು ಆವುದೋ ಹೇಳು. ಸಂಸಾರವನ್ನು ದಾಟಿಸುವ ಸ್ವಾಮಿಯಾಗಲಿ ಯಾರಿದ್ದಾನೆಂಬುದನ್ನು ಹೇಳು.

೪೦. ನೀನು ಕೃಪೆಯಿಟ್ಟು ಯಾರನ್ನು ತಿಳಿದರೆ ಅಥವಾ ಸೇವಿಸಿದರೆ ಸಂಸಾರವನ್ನು ದಾಟಬಹುದು ಎಂಬುದನ್ನು ತಿಳಿಸು.

ಇತಿ ಮದ್ವಾಕ್ಯಮಾಕರ್ಣ್ಯ ಜಗಾದ ಮುನಿಸತ್ತಮಃ ।
ಶೃಣುಷ್ವೈಕಮನಾ ವಿಪ್ರ ಶ್ರದ್ಧಯಾ ಪರಯಾ ವೃತಃ ॥ ೪೧ ॥

ಸಂತಿ ದಾನಾನಿ ತೀರ್ಥಾನಿ ವ್ರತಾನಿ ನಿಯಮಾ ಯಮಾಃ ।
ಯೋಗಯಜ್ಞಾಸ್ತಥಾsನೇಕೇ ವರ್ತಂತೇ ಸ್ವರ್ಗದಾಯಕಾಃ ॥ ೪೨ ॥

ಪರಂ ಗುಹ್ಯಂ ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶನಂ ।
ತಚ್ಛೃಣುಷ್ವ ಮಹಾಭಾಗ ಸಂಸಾರಾಂಭೋಧಿತಾರಕಂ ॥ ೪೩ ॥

ನಾಸ್ತಿಕಾಯ ನ ವಕ್ತವ್ಯಂ ನ ಚಾsಶ್ರದ್ಧಾಳವೇ ಪುನಃ ।
ನಿಂದಕಾಯ ಶಠಾಯಾಪಿ ನ ದೇಯಂ ಭಕ್ತಿವೈರಿಣೇ ॥ ೪೪ ॥

ರಾಮಭಕ್ತಾಯ ಶಾಂತಾಯ ಕಾಮಕ್ರೋಧವಿಯೋಗಿನೇ ।
ವಕ್ತವ್ಯಂ ಸರ್ವದುಃಖಸ್ಯ ನಾಶಕಾರಕಮುತ್ತಮಂ ॥ ೪೫ ॥

ರಾಮಾನ್ನಾಸ್ತಿ ಪರೋ ದೇವೋ ರಾಮಾನ್ನಾಸ್ತಿ ಪರಂ ವ್ರತಂ ।
ನ ಹಿ ರಾಮಾತ್ಪರೋ ಯೋಗೋ ನ ಹಿ ರಾಮಾತ್ಪರೋ ಮಖಃ ॥ ೪೬ ॥

---

೪೧. ಈ ನನ್ನ ಮಾತನ್ನು ಕೇಳಿ ಆ ಋಷಿಯೂ ಪರಮಶ್ರದ್ಧೆಯಿಂದ ಹಾಗಾದರೆ ಒಂದೇ ಮನಸ್ಸಿನಿಂದ ಕೇಳು. ಎಂದು ಹೇಳಿದನು.

೪೨. ದಾನ, ತೀರ್ಥ, ವ್ರತ, ನಿಯಮ, ಯಮ, ಯೋಗ, ಯಜ್ಞ, ಇನ್ನೂ ಅನೇಕವಾದುವು, ಸ್ವರ್ಗವನ್ನು ಕೊಡತಕ್ಕವು ಇವೆ.

೪೩. ಆದರೆ ಗುಟ್ಟಾದ ಒಂದು ವಿಷಯವನ್ನು ಹೇಳುತ್ತೇನೆ. ಅದು ಸರ್ವ ಪಾಪವನ್ನು ನಾಶಮಾಡುತ್ತದೆ. ಸಂಸಾರವನ್ನು ದಾಟಿಸುತ್ತದೆ. ಕೇಳು.

೪೪. ನಾಸ್ತಿಕ, ಶ್ರದ್ಧೆಯಿಲ್ಲದವನು, ನಿಂದಿಸುವವನು, ಶಠ, ಭಕ್ತಿಯಿಲ್ಲದವನು ಇವರಿಗೆ ಹೇಳಕೂಡದು.

೪೫. ರಾಮಭಕ್ತನಾಗಿ ಶಾಂತನಾಗಿ ಕಾಮಕ್ರೋಧಗಳನ್ನು ಬಿಟ್ಟವನಿಗೆ ಸರ್ವ ದುಃಖನಾಶಕವಾದ ಇದನ್ನು ಹೇಳಬೇಕು.

೪೬. ರಾಮನಿಗಿಂತ ಬೇರೆ ದೇವರಿಲ್ಲ. ರಾಮನಿಗಿಂತ ಬೇರೆ ವ್ರತವಿಲ್ಲ. ರಾಮನಿಗಿಂತ ಬೇರೆ ಯೋಗವಿಲ್ಲ. ರಾಮನಿಗಿಂತ ಬೇರೆ ಯಾಗವಿಲ್ಲ.

ತಂ ಸ್ಮೃತ್ವಾ ಚೈವ ಜಪ್ತ್ವಾ ಚ ಪೂಜಯಿತ್ವಾ ನರಃ ಪರಂ ।
ಪ್ರಾಪ್ನೋತಿ ಪರಮಾಮೃದ್ಧಿಮೈಹಿಕಾಮುಷ್ಮಿಕೀಂ ತಥಾ ॥ ೪೭ ॥

ಸಂಸ್ಮೃತೋ ಮನಸಾ ಧ್ಯಾತಃ ಸರ್ವಕಾಮಫಲಪ್ರದಃ ।
ದದಾತಿ ಪರಮಾಂ ಭಕ್ತಿಂ ಸಂಸಾರಾಂಭೋಧಿತಾರಿಣೀಂ ॥ ೪೮ ॥

ಶ್ವಪಾಕೋಽಪಿ ಹಿ ಸಂಸ್ಮೃತ್ಯ ರಾಮಂ ಯಾತಿ ಪರಾಂ ಗತಿಂ ।
ಯೇ ವೇದಶಾಸ್ತ್ರನಿರತಾಸ್ತ್ವಾದೃಶಾಸ್ತತ್ರ ಕಿಂ ಪುನಃ ॥ ೪೯ ॥

ಸರ್ವೇಷಾಂ ವೇದಶಾಸ್ತ್ರಾಣಾಂ ರಹಸ್ಯಂ ತೇ ಪ್ರಕಾಶಿತಂ ।
ಸಮಾಚರ ತಥಾ ತ್ವಂ ವೈ ಯಥಾ ಸ್ಯಾತ್ತೇ ಮನೀಷಿತಂ ॥ ೫೦ ॥

ಏಕೋ ದೇವೋ ರಾಮಚಂದ್ರೋ ವ್ರತಮೇಕಂ ತದರ್ಚನಂ ।
ಮಂತ್ರೋಽಪ್ಯೇಕಶ್ಚ ತನ್ನಾಮ ಶಾಸ್ತ್ರಂ ತದ್ಧ್ಯೇವ ತತ್ಸ್ತುತಿಃ ॥ ೫೧ ॥

---

೪೭. ಅವನನ್ನು ಸ್ಮರಿಸಿ, ಜಪಿಸಿ, ಪೂಜಿಸಿ, ಮನುಷ್ಯನು ಈ ಲೋಕದ ಮತ್ತು ಪರಲೋಕದ ಉತ್ತಮಗತಿಯನ್ನು ಹೊಂದುತ್ತಾನೆ.

೪೮. ಸ್ಮರಣೆಮಾಡಿದರೂ, ಮನಸ್ಸಿನಲ್ಲೇ ಧ್ಯಾನಿಸಿದರೂ ಏನನ್ನು ಬೇಕಾದರೂ ಕೊಡುತ್ತಾನೆ. ಸಂಸಾರವನ್ನು ನೀಗತಕ್ಕ ಭಕ್ತಿಯನ್ನು ಕೊಡುತ್ತಾನೆ.

೪೯. ಚಂಡಾಲನೂ ಕೂಡ ರಾಮನನ್ನು ಸ್ಮರಿಸಿದರೆ ಉತ್ತಮಗತಿಯನ್ನು ಹೊಂದುತ್ತಾನೆ. ವೇದಶಾಸ್ತ್ರಗಳಲ್ಲಿ ನಿರತನಾದ ನಿನ್ನಂತಹವನಿಗೆ ಹೇಳತಕ್ಕದ್ದೇನು?

೫೦. ಎಲ್ಲಾ ವೇದಶಾಸ್ತ್ರಗಳ ರಹಸ್ಯವನ್ನೂ ನಿನಗೆ ಪ್ರಕಾಶಪಡಿಸಿದ್ದೇನೆ. ನಿನ್ನ ಮನಸ್ಸಿಗೆ ಬಂದಂತೆ ಮಾಡು.

೫೧. ರಾಮಚಂದ್ರನೊಬ್ಬನೇ ದೇವರು. ಅವನ ಪೂಜೆಯೆಂಬುದೊಂದೇ ವ್ರತವು. ಅವನ ನಾಮಸ್ಮರಣೆಯೆಂಬುದೊಂದೇ ಮಂತ್ರವು. ಅವನನ್ನು ಸ್ತುತಿಸುವುದೇ ಶಾಸ್ತ್ರವು.

ತಸ್ಮಾತ್ಸರ್ವಾತ್ಮನಾ ರಾಮಚಂದ್ರಂ ಭಜ ಮನೋಹರಂ ।
ಯಥಾ ಗೋಷ್ಪದವತ್ತುಚ್ಛೋ ಭವೇತ್ಸಂಸಾರಸಾಗರಃ ॥ ೫೨ ॥

ಶ್ರುತ್ವಾ ಮಯಾ ತು ತದ್ವಾಕ್ಯಂ ಪುನಃ ಪ್ರಶ್ನಮಕಾರಿಷಂ ।
ಕಥಂ ವಾ ಧ್ಯಾಯತೇ ದೇವಃ ಕಥಂ ವಾ ಪೂಜ್ಯತೇ ನರೈಃ ॥ ೫೩ ॥

ಕಥಯಸ್ವ ಮಹಾಬುದ್ಧೇ ಸರ್ವಜ್ಞ ಮಮ ವಿಸ್ತರಾತ್ ।
ಯದ್ಜ್ಞಾತ್ವಾಹಂ ಕೃತಾರ್ಥಸ್ಸ್ಯಾಂ ತ್ರಿಲೋಕ್ಯಾಂ ಮುನಿಸತ್ತಮ ॥ ೫೪ ॥

ಏತಚ್ಛ್ರುತ್ವಾ ತು ಮದ್ವಾಕ್ಯಂ ಮುನಿವರ್ಯ ಸ್ಸ ಲೋಮಶಃ ।
ಕಥಯಾಮಾಸ ಮೇ ಸರ್ವಂ ರಾಮಧ್ಯಾನಪುರಸ್ಸರಂ ॥ ೫೫ ॥

ಶೃಣು ವಿಪ್ರೇಂದ್ರ ವಕ್ಷ್ಯಾಮಿ ಯತ್ಪೃಷ್ಟಂ ತು ತ್ವಯಾನಘ ।
ಯಥಾ ತುಷ್ಯೇದ್ರಮಾನಾಥಃ ಸಂಸಾರಜ್ವರದಾರಕಃ ॥ ೫೬ ॥

---

೫೨. ಆದ್ದರಿಂದ ಸರ್ವಪ್ರಯತ್ನದಿಂದಲೂ ರಾಮಚಂದ್ರನನ್ನು ಭಜಿಸು. ಅದರಿಂದ ಸಂಸಾರಸಾಗರವು ಗೋವಿನ ಪಾದದಷ್ಟು ಅಗಲದಂತೆ ಅಲ್ಪವಾಗುತ್ತದೆ.

೫೩. ಆ ಮಾತನ್ನು ಕೇಳಿ ಆ ದೇವನನ್ನು ಹೇಗೆ ಧ್ಯಾನಿಸುವುದು? ಹೇಗೆ ಪೂಜಿಸುವುದು? ಎಂದು ಪ್ರಶ್ನಿಸಿದೆನು.

೫೪. ಅದನ್ನು ವಿಸ್ತಾರವಾಗಿ ಹೇಳು. ಅದನ್ನು ತಿಳಿದು ಮೂರು ಲೋಕದಲ್ಲಿಯೂ ನಾನು ಕೃತಾರ್ಥನಾಗುತ್ತೇನೆ.

೫೫. ಆ ಲೋಮಶಮಹರ್ಷಿಯು ನನ್ನ ಈ ಮಾತನ್ನು ಕೇಳಿ ರಾಮಧ್ಯಾನಪುರಸ್ಸರವಾಗಿ ನನಗೆಲ್ಲವನ್ನೂ ಹೇಳಿದನು.

೫೬. ಎಲೈ ಬ್ರಾಹ್ಮಣಶ್ರೇಷ್ಠನೇ, ನೀನು ಕೇಳಿದುದನ್ನು ಹೇಳುತ್ತೇನೆ. ಸಂಸಾರಜ್ವರಹಾರಕನಾದ ರಾಮಚಂದ್ರನು ಹೇಗೆ ತುಷ್ಟನಾಗುವನೆಂದು ಕೇಳು.

ಅಯೋಧ್ಯಾನಗರೇ ರಮ್ಯೇ ಚಿತ್ರಮಂಡಪಶೋಭಿತೇ ।
ಧ್ಯಾಯೇತ್ಕಲ್ಪತರೋರ್ಮೂಲೇ ಸರ್ವಕಾಮಸಮೃದ್ಧಿದಂ ।
ಮಹಾಮರಕತಸ್ವರ್ಣನೀಲರತ್ನಾದಿಶೋಭಿತಂ ॥ ೫೭ ॥

ಸಿಂಹಾಸನಂ ಚಿತ್ತಹರಂ ಕಾಂತ್ಯಾ ತಾಮಿಸ್ರನಾಶನಂ ।
ತಸ್ಯೋಪರಿ ಸಮಾಸೀನಂ ರಘುರಾಜಂ ಮನೋರಮಂ ॥ ೫೮ ॥

ದೂರ್ವಾದಳಶ್ಯಾಮತನುಂ ದೇವಂ ದೇವೇಂದ್ರಪೂಜಿತಂ ।
ರಾಕಾಯಾಂ ಪೂರ್ಣಶೀತಾಂಶುಕಾಂತಿಧಿಕ್ಕಾರಿವಕ್ತ್ರಿಣಂ ॥ ೫೯ ॥

ಅಷ್ಟಮೀಚಂದ್ರಶಕಲಸಮಭಾಲಾಧಿಧಾರಿಣಂ ।
ನೀಲಕುಂತಳಶೋಭಾಢ್ಯಂ ಕಿರೀಟಮಣಿರಂಜಿತಂ ॥ ೬೦ ॥

ಮಕರಾಕಾರಸೌಂದರ್ಯಕುಂಡಲಾಭ್ಯಾಂ ವಿರಾಜಿತಂ ।
ಜಪಾಪುಷ್ಪಾಭಯಾ ಮಾಧ್ವ್ಯಾ ಜಿಹ್ವಯಾ ಶೋಭಿತಾನನಂ ॥ ೬೧ ॥

---

೫೭. ಅಯೋಧ್ಯಾನಗರದಲ್ಲಿ ಕಲ್ಪವೃಕ್ಷದ ಬುಡದಲ್ಲಿ ಮಹಾಮರಕತಾದಿ ರತ್ನಗಳಿಂದ ಕೂಡಿದ ಮಂಡಪದಲ್ಲಿ ಸರ್ವಕಾಮಗಳನ್ನು ಕೊಡುವ ಶ್ರೀರಾಮನನ್ನು ಧ್ಯಾನಿಸಬೇಕು.

೫೮. ಕಾಂತಿಯಿಂದ ಕತ್ತಲೆಯನ್ನು ನಾಶಮಾಡುವ ಮನೋಹರವಾದ ಸಿಂಹಾಸನದಲ್ಲಿ ಕುಳಿತಿರುವ ರಾಮಚಂದ್ರನನ್ನು ಧ್ಯಾನಿಸಬೇಕು.

೫೯-೬೦. ದೂರ್ವೆಯ ದಳದಂತೆ ಬಣ್ಣವುಳ್ಳ, ದೇವೇಂದ್ರನಿಂದಲೂ ಪೂಜಿತನಾದ, ಹುಣ್ಣಿಮೆಯ ಚಂದ್ರನನ್ನು ಧಿಕ್ಕರಿಸುವ ಮುಖಕಾಂತಿಯುಳ್ಳ, ಅಷ್ಟಮಿಯ ಚಂದ್ರನ ಹಾಗೆ ವಕ್ರವಾದ ಹಣೆಯನ್ನು ಹೊಂದಿರುವ, ನೀಲವಾಗಿರುವ ಕೂದಲನ್ನು ಹೊಂದಿರುವ, ಕಿರೀಟದಿಂದ ಶೋಭಿಸುವ ರಾಮಚಂದ್ರನನ್ನು ಧ್ಯಾನಿಸಬೇಕು.

೬೧. ಮೊಸಳೆಯಂತಿರುವ ಕರ್ಣಾಭರಣಧಾರಿಯಾದ, ಕೆಂಪಗಿರುವ ನಾಲಿಗೆಯುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು.

**ಯಸ್ಯಾಂ ವಸಂತಿ ನಿಗಮಾ ಋಗಾದ್ಯಾಶ್ಶಾಸ್ತ್ರಸಂಯುತಾಃ ।**
**ಕಂಬುಕಾಂತಿಧರಗ್ರೀವಾಶೋಭಯಾ ಸಮಲಂಕೃತಂ ॥ ೬೨ ॥**

**ಸಿಂಹವದುಚ್ಚಕೌ ಸ್ಕಂಧೌ ಮಾಂಸಲೌ ಬಿಭ್ರತಂ ವರಂ ।**
**ಬಾಹೂ ದಧಾನಂ ದೀರ್ಘಾಂಗೌ ಕೇಯೂರಕಟಕಾಂಕಿತೌ ॥ ೬೩ ॥**

**ಮುದ್ರಿಕಾಹೀರಶೋಭಾಭಿರ್ಭೂಷಿತೌ ಜಾನುಲಂಬಿನೌ ।**
**ವಕ್ಷೋ ದಧಾನಂ ವಿಪುಲಂ ಲಕ್ಷ್ಮೀವಾಸೇನ ಶೋಭಿತಂ ॥ ೬೪ ॥**

**ಶ್ರೀವತ್ಸಾದಿವಿಚಿತ್ರಾಂಕೈರಂಕಿತಂ ಸುಮನೋಹರಂ ।**
**ಮಹೋದರಂ ಮಹಾನಾಭಿಂ ಶುಭಕಟ್ಯಾ ವಿರಾಜಿತಂ ॥ ೬೫ ॥**

**ಕಾಂಚ್ಯಾ ವೈ ಮಣಿಮಯ್ಯಾ ಚ ವಿಶೇಷೇಣ ಶ್ರಿಯಾನ್ವಿತಂ ।**
**ಊರುಭ್ಯಾಂ ವಿಮಲಾಭ್ಯಾಂ ಚ ಜಾನುಭ್ಯಾಂ ಶೋಭಿತಂ ಶ್ರಿಯಾ ॥ ೬೬ ॥**

---

೬೨. ಋಗಾದಿ ನಿಗಮಗಳು ಯಾವನಲ್ಲಿ ವಾಸಿಸುತ್ತಿವೆಯೋ ಶಂಖದಂತೆ ಕುತ್ತಿಗೆಯುಳ್ಳ ಆ ಸ್ವಾಮಿಯನ್ನು ಧ್ಯಾನಿಸಬೇಕು.

೬೩. ಎತ್ತರವಾಗಿ ದಪ್ಪವಾಗಿರುವ ಭುಜಶಿರಸ್ಸುಳ್ಳ, ನೀಳವಾದ ತೋಳು ಗಳನ್ನು ಧರಿಸಿರುವ, ಭುಜಕೀರ್ತಿ ಕೈಬಳೆಗಳನ್ನು ಹೊಂದಿರುವ ಸ್ವಾಮಿಯನ್ನು ಸ್ಮರಿಸಬೇಕು.

೬೪. ಉಂಗುರದಲ್ಲಿರುವ ಹೀರಮಣಿಯಿಂದ ಪ್ರಕಾಶಿಸುತ್ತ ಮಂಡಿಯವರೆಗೂ ಬೆಳದಿರುವ ತೋಳುಗಳುಳ್ಳ, ಅಗಲವಾಗಿಯೂ ಲಕ್ಷ್ಮಿಯ ವಾಸಸ್ಥಾನವಾಗಿಯೂ ಇರುವ ಎದೆಯುಳ್ಳ ಸ್ವಾಮಿಯನ್ನು ಸ್ಮರಿಸಬೇಕು.

೬೫. ಶ್ರೀವತ್ಸವೇ ಮೊದಲಾದ ಮಚ್ಚೆಗಳುಳ್ಳ, ದೊಡ್ಡಹೊಟ್ಟೆಯೂ ದೊಡ್ಡ ಹೊಕ್ಕಳೂ ಇರುವ, ಚೆನ್ನಾಗಿರುವ ನಡುವುಳ್ಳ ಸ್ವಾಮಿಯನ್ನು ಧ್ಯಾನಿಸಬೇಕು.

೬೬. ಮಣಿಗಳನ್ನು ಹಾಕಿರುವ ಉಡಿದಾರದಿಂದ ಶೋಭಿತವಾದ, ಉತ್ತಮ ವಾದ ತೊಡೆ ಮಂಡಿಗಳಿಂದ ಶೋಭಿತನಾದ ಸ್ವಾಮಿಯನ್ನು ಸ್ಮರಿಸಬೇಕು.

ಚರಣಾಭ್ಯಾಂ ವಜ್ರರೇಖಾಯವಾಂಕುಶಸುರೇಖಯಾ ।
ಯುತಾಭ್ಯಾಂ ಯೋಗಿಧ್ಯೇಯಾಭ್ಯಾಂ ಕೋಮಲಾಭ್ಯಾಂ ವಿರಾಜಿತಂ ॥ ೬೭ ॥

ಧ್ಯಾತ್ವಾ ಸ್ಮೃತ್ವಾ ಚ ಸಂಸಾರಸಾಗರಂ ತ್ವಂ ತರಿಷ್ಯಸಿ ।
ತಮೇವ ಪೂಜಯನ್ನಿತ್ಯಂ ಚಂದನಾದಿಭಿರಿಚ್ಛಯಾ ॥ ೬೮ ॥

ಪ್ರಾಪ್ನೋತಿ ಪರಮಾಮೃದ್ಧಿಮೈಹಿಕಾಮುಷ್ಮಿಕೀಂ ಪರಾಂ ।
ತ್ವಯಾ ಪೃಷ್ಟಂ ಮಹಾರಾಜ ರಾಮಸ್ಯ ಧ್ಯಾನಮುತ್ತಮಂ ।
ತತ್ತೇ ಕಥಿತಮೇತದ್ವೈ ಸಂಸಾರಜಲಧಿಂ ತರ ॥ ೬೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ ಸಂವಾದೇ ರಾಮಾಶ್ವಮೇಧೇ ಆರಣ್ಯಕೋಪಾಖ್ಯಾನಂ ನಾಮ ಪಂಚತ್ರಿಂಶೋಽಧ್ಯಾಯಃ

---

೬೭. ವಜ್ರ, ಯವ, ಅಂಕುಶರೇಖೆಯಿಂದ ಅಲಂಕೃತವಾದ, ಕೋಮಲವಾದ, ಯೋಗಿಗಳು ಧ್ಯಾನಿಸುತ್ತಿರುವ ಪಾದಕಮಲದಿಂದ ಕೂಡಿದ ಸ್ವಾಮಿಯನ್ನು ಸ್ಮರಿಸಬೇಕು.

೬೮. ಆ ಪಾದಗಳನ್ನು ಧ್ಯಾನಿಸುತ್ತ ಸ್ಮರಿಸುತ್ತ ಚಂದನಾದಿಗಳಿಂದ ಪೂಜಿಸುತ್ತಿದ್ದರೆ ಸಂಸಾರವೆಂಬ ಸಾಗರವನ್ನು ದಾಟುತ್ತೀಯೆ. ಈ ಲೋಕದ ಮತ್ತು ಪರಲೋಕದ ಶ್ರೇಯಸ್ಸನ್ನು ನೀನು ಹೊಂದುತ್ತೀಯೆ.

೬೯. ಎಲೈ! ಮಹಾರಾಜನೇ, ರಾಮನ ಧ್ಯಾನವನ್ನು ನೀನು ಕೇಳಿದೆ. ಅದನ್ನು ನಿನಗೆ ಹೇಳಿದ್ದೇನೆ. ಇದನ್ನು ತಿಳಿದು ಸಂಸಾರಸಾಗರವನ್ನು ದಾಟು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ, ರಾಮಾಶ್ವಮೇಧದಲ್ಲಿ ಆರಣ್ಯಕೋಪಾಖ್ಯಾನವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷಟ್ತ್ರಿಂಶೋಽಧ್ಯಾಯಃ

|| ಶೇಷ ಉವಾಚ ||

ಏತಚ್ಛ್ರುತ್ವಾ ತು ವಿಪ್ರೇಂದ್ರೋ ಲೋಮಶಾತ್ಪರಮಂ ಮಹತ್ ।
ಪುನಃ ಪಪ್ರಚ್ಛ ತಮೃಷಿಂ ಸರ್ವಜ್ಞಂ ಯೋಗಿನಾಂ ಪರಂ || ೧ ||

|| ಆರಣ್ಯಕ ಉವಾಚ ||

ಮುನಿಶ್ರೇಷ್ಠ ವದೈತನ್ಮೇ ಪೃಚ್ಛಾಮಿ ತ್ವಾಂ ಮಹಾಮತೇ ।
ಗುರವಃ ಕೃಪಯಾ ಯುಕ್ತಾ ಭಾಷಂತೇ ಸೇವಕೇಽಖಿಲಂ || ೨ ||

ಕೋಽಸೌ ರಾಮೋ ಮಹಾಭಾಗ ಯೋ ನಿತ್ಯಂ ಧ್ಯಾಯತೇ ತ್ವಯಾ ।
ತಸ್ಯ ಕಾನಿ ಚರಿತ್ರಾಣಿ ವದಸ್ವ ತ್ವಂ ದ್ವಿಜೋತ್ತಮ || ೩ ||

---

## ಮೂವತ್ತಾರನೆಯ ಅಧ್ಯಾಯವು

೧. ಶೇಷನು ಹೇಳಿದನು:--ಆರಣ್ಯಕಋಷಿಯು ಲೋಮಶನಿಂದ ಇದನ್ನು ಕೇಳಿ ಮತ್ತೆಯೂ ಯೋಗಿಶ್ರೇಷ್ಠನಾದ ಆತನನ್ನು ಕುರಿತು ಇಂತೆಂದನು

೨. ಆರಣ್ಯಕನು ಹೇಳಿದನು:—ಎಲೈ! ಋಷಿಶ್ರೇಷ್ಠನೇ; ಮತ್ತೂ ಒಂದನ್ನು ಕೇಳುತ್ತೇನೆ, ದಯವಿಟ್ಟು ಹೇಳು. ಕೃಪೆಯಿಂದ ಕೂಡಿದ ಗುರುಗಳು ಸೇವಕರಲ್ಲಿ ಎಲ್ಲವನ್ನೂ ಹೇಳುತ್ತಾರೆ.

೩. ನೀನು ನಿತ್ಯವೂ ಧ್ಯಾನಮಾಡುವ ಆ ರಾಮನು ಯಾರು? ಅವನ ಚರಿತ್ರೆಯೇನು? ಹೇಳು.

ಕಿಮರ್ಥಮವತೀರ್ಣೋऽಸೌ ಕಸ್ಮಾನ್ಮಾನುಷತಾಂ ಗತಃ ।
ತತ್ಸರ್ವಂ ಕಥಯಾಶು ತ್ವಂ ಮಮ ಸಂಶಯನುತ್ತಯೇ ॥ ೪ ॥

॥ ಶೇಷ ಉವಾಚ ॥

ಇತಿ ವಾಕ್ಯಂ ಸಮಾಕರ್ಣ್ಯ ಮುನೇಃ ಪರಮಶೋಭನಂ ।
ಲೋಮಶಃ ಕಥಯಾಮಾಸ ರಾಮಚಾರಿತ್ರಮದ್ಭುತಂ ॥ ೫ ॥

ಲೋಕಾನ್ನಿರಯಸಂಮಗ್ನಾನ್ ಜ್ಞಾತ್ವಾ ಯೋಗೇಶ್ವರೇಶ್ವರಃ ।
ಕೀರ್ತಿಂ ಪ್ರಥಯಿತುಂ ಲೋಕೇ ಯಯಾ ಘೋರಂ ತರಿಷ್ಯತಿ ॥ ೬ ॥

ಏವಂ ಜ್ಞಾತ್ವಾ ದಯಾವಾರ್ಧಿಃ ಪರಮೇಶೋ ಮನೋಹರಃ ।
ಅವತಾರಂ ಚಕಾರಾತ್ರ ಚತುರ್ಧಾ ಸ ಶ್ರಿಯಾನ್ವಿತಃ ॥ ೭ ॥

ಪುರಾ ತ್ರೇತಾಯುಗೇ ಪ್ರಾಪ್ತೇ ಪೂರ್ಣಾಂಶೋ ರಘುನಂದನಃ ।
ಸೂರ್ಯವಂಶಸಮುತ್ಪನ್ನೋ ರಾಮೋ ರಾಜೀವಲೋಚನಃ ॥ ೮ ॥

---

೪. ಏತಕ್ಕೆ ಅವನು ಅವತರಿಸಿದನು? ಮನುಷ್ಯನಾಗಿ ಏತಕ್ಕಾದನು? ಅದೆಲ್ಲವನ್ನೂ ಹೇಳಿ, ನನ್ನ ಸಂಶಯವನ್ನು ನಾಶಮಾಡು.

೫. ಶೇಷನು ಹೇಳಿದನು:—ಋಷಿಯ ಈ ಮಾತನ್ನು ಕೇಳಿ ಲೋಮಶನು ರಾಮನ ಅದ್ಭುತ ಚರಿತ್ರೆಯನ್ನು ಹೇಳಿದನು.

೬. ಪ್ರಪಂಚದ ಪ್ರಾಣಿಗಳು ನರಕಭಾಗಿಗಳಾಗುತ್ತಿರುವುದನ್ನು ಯೋಗಿಯಾದ ಸ್ವಾಮಿಯು ತಿಳಿದು, ತನ್ನ ಧ್ಯಾನದಿಂದ ನರಕವನ್ನು ಕಳೆದುಕೊಳ್ಳಲೆಂದು ಕೀರ್ತಿಯನ್ನು ಹರಡಲು ಅವತರಿಸಿದನು.

೭. ಇದನ್ನು ಆ ದಯಾಸಮುದ್ರನು ತಿಳಿದು ತಾನು ನಾಲ್ಕು ಭಾಗವಾಗಿ ಅವತರಿಸಿದನು.

೮. ಪೂರ್ವದಲ್ಲಿ ತ್ರೇತಾಯುಗವು ಬರಲು ರಾಮನು ಪೂರ್ಣಾಂಶದಿಂದ ಸೂರ್ಯವಂಶದಲ್ಲಿ ಅವತರಿಸಿದನು.

ಸ ರಾಮೋ ಲಕ್ಷ್ಮಣಸಖಃ ಕಾಕಪಕ್ಷಧರೋ ಯುವಾ ।
ತಾತಸ್ಯ ವಚನಾತ್ತೌ ತು ವಿಶ್ವಾಮಿತ್ರಮನುವ್ರತೌ ॥ ೯ ॥

ಯಜ್ಞಸಂರಕ್ಷಣಾರ್ಥಾಯ ರಾಜ್ಞಾ ದತ್ತೌ ಕುಮಾರಕೌ ॥
ದಾಂತೌ ಧನುರ್ಧರೌ ವೀರೌ ವಿಶ್ವಾಮಿತ್ರಮನುವ್ರತೌ ॥ ೧೦ ॥

ಪಥಿ ಪ್ರವ್ರಜತೋಸ್ತಾವತ್ತಾಟಕಾ ನಾಮ ರಾಕ್ಷಸೀ ।
ಸಂಗತಾ ಚ ವನೇ ಘೋರೇ ತಯೋರ್ವೈ ವಿಘ್ನಕಾರಣಾತ್ ॥ ೧೧ ॥

ಋಷೇರನುಜ್ಞಯಾ ರಾಮಸ್ತಾಟಕಾಂ ಯಮಯಾತನಾಂ ।
ಪ್ರಾವೇಶಯದ್ಧನುರ್ವೇದವಿದ್ಯಾಭ್ಯಾಸೇನ ರಾಘವಃ ॥ ೧೨ ॥

ಯಸ್ಯ ಪಾದತಲಸ್ಪರ್ಶಾಚ್ಛಿಲಾ ವಾಸವಯೋಗಜಾ ।
ಅಹಲ್ಯಾ ಗೌತಮವಧೂಃ ಪುನರ್ಜಾತಾ ಸ್ವರೂಪಿಣೀ ॥ ೧೩ ॥

ವಿಶ್ವಾಮಿತ್ರಸ್ಯ ಯಜ್ಞೇ ತು ಸುಪ್ರವೃತ್ತೇ ರಘೂತ್ತಮಃ ।
ಮಾರೀಚಂ ಚ ಸುಬಾಹುಂ ಚ ಜಘಾನ ಪರಮೇಷುಭಿಃ ॥ ೧೪ ॥

---

೯. ರಾಮನು ಲಕ್ಷ್ಮಣನೊಡನೆ ಕಾಕಪಕ್ಷದ ಜುಟ್ಟನ್ನು ಹೊಂದಿ ತಂದೆಯ ಮಾತಿನಂತೆ ವಿಶ್ವಾಮಿತ್ರನನ್ನು ಅನುಸರಿಸಿ ಹೋದನು.

೧೦. ರಾಜನು ವಿಶ್ವಾಮಿತ್ರನ ಯಜ್ಞರಕ್ಷಣೆಗೋಸ್ಕರ ಕಳುಹಿಸಲು ಅವರು ಧನುರ್ಧಾರಿಗಳಾಗಿ ವಿಶ್ವಾಮಿತ್ರರನ್ನು ಅನುಸರಿಸಿದರು.

೧೧. ದಾರಿಯಲ್ಲಿ ಹೋಗುತ್ತಿರುವ ಅವರಿಗೆ ವಿಘ್ನವನ್ನುಂಟುಮಾಡಲು ತಾಟಕೆಯೆಂಬ ರಾಕ್ಷಸಿಯು ಬಂದಳು.

೧೨. ರಾಮನು ವಿಶ್ವಾಮಿತ್ರನ ಅಪ್ಪಣೆಯಿಂದ ತಾಟಕೆಯನ್ನು ಧನುಸ್ಸಿನಿಂದ ಯಮಯಾತನೆಯನ್ನು ಅನುಭವಿಸುವಂತೆ ಮಾಡಿದನು.

೧೩. ಆ ರಾಮನ ಪಾದತಲಸ್ಪರ್ಶದಿಂದ, ಇಂದ್ರನ ಸಂಪರ್ಕಪಾಪದಿಂದ ಕಲ್ಲಾಗಿದ್ದ ಗೌತಮನ ಹೆಂಡತಿಯಾದ ಅಹಲ್ಯೆಯು ಮತ್ತೆ ಶರೀರವನ್ನು ಧರಿಸಿದಳು.

೧೪. ವಿಶ್ವಾಮಿತ್ರನ ಯಜ್ಞವು ನಡೆಯುತ್ತಿರುವಾಗ್ಯೆ ರಾಮನು ಮಾರೀಚನನ್ನು, ಸುಬಾಹುವನ್ನು ಉತ್ತಮವಾದ ಬಾಣಗಳಿಂದ ಹೊಡೆದನು.

ಈಶ್ವರಸ್ಯ ಧನುರ್ಭಗ್ನಂ ಜನಕಸ್ಯ ಗೃಹೇ ಸ್ಥಿತಂ ।
ರಾಮಃ ಪಂಚದಶೇ ವರ್ಷೇ ಷಡ್ವರ್ಷಾಮಥ ಮೈಥಿಲೀಂ ॥ ೧೫ ॥

ಉಪಯೇಮೇ ವಿವಾಹೇನ ರಮ್ಯಾಂ ಸೀತಾಮಯೋನಿಜಾಂ ।
ಕೃತಕೃತ್ಯಸ್ತದಾ ಜಾತಃ ಸೀತಾಂ ಸಂಪ್ರಾಪ್ಯ ರಾಘವಃ ॥ ೧೬ ॥

ತತೋ ದ್ವಾದಶವರ್ಷಾಣಿ ರೇಮೇ ರಾಮಸ್ತಯಾ ಸಹ ।
ಸಪ್ತವಿಂಶತಿಮೇ ವರ್ಷೇ ಯೌವರಾಜ್ಯಮಕಲ್ಪಯತ್ ॥ ೧೭ ॥

ರಾಜಾನಮಥ ಕೈಕೇಯೀ ವರದ್ವಯಮಯಾಚತ ।
ತಯೋರೇಕೇನ ರಾಮಸ್ತು ಸಸೀತಸ್ಸಹಲಕ್ಷ್ಮಣಃ ॥ ೧೮ ॥

ಜಟಾಧರಃ ಪ್ರವ್ರಜತಾಂ ವರ್ಷಾಣೀಹ ಚತುರ್ದಶ ।
ಭರತಸ್ತು ದ್ವಿತೀಯೇನ ಯೌವರಾಜ್ಯಾಧಿಪೋಽಸ್ತು ಮೇ ॥ ೧೯ ॥

ಜಾನಕೀಲಕ್ಷ್ಮಣಸಖಂ ರಾಮಂ ಪ್ರಾವ್ರಾಜಯನ್ನೃಪಃ ।
ತ್ರಿರಾತ್ರಮುದಕಾಹಾರಶ್ಚತುರ್ಥೇ ಹಿ ಫಲಾಶನಃ ॥ ೨೦ ॥

---

೧೫-೧೬. ಜನಕನ ಮನೆಯಲ್ಲಿ ಈಶ್ವರನ ಧನುಸ್ಸನ್ನು ಮುರಿದನು. ರಾಮನ ಹದಿನೈದನೆಯ ವರ್ಷದಲ್ಲಿ ಆರುವರ್ಷ ವಯಸ್ಸುಳ್ಳ ಅಯೋನಿಜಳಾದ ಸೀತೆಯನ್ನು ಮದುವೆಯಾದನು. ಸೀತೆಯನ್ನು ಹೊಂದಿ ಕೃತಕೃತ್ಯನಾದನು.

೧೭. ಅನಂತರ ಹನ್ನೆರಡು ವರ್ಷಗಳ ವರೆಗೂ ರಾಮನು ಅವಳೊಡನೆ ಇದ್ದನು. ರಾಮನ ಇಪ್ಪತ್ತೇಳನೆಯ ವರ್ಷದಲ್ಲಿ ಯುವರಾಜ ಪಟ್ಟವನ್ನು ಕಟ್ಟಿದರು.

೧೮-೧೯. ಆ ಯುವರಾಜ ಪಟ್ಟವನ್ನು ಕಟ್ಟುವ ಕಾಲದಲ್ಲಿ ಕೈಕೇಯಿಯು ರಾಜನನ್ನು ಎರಡು ವರಗಳನ್ನು ಕೇಳಿಕೊಂಡಳು. ಒಂದು ವರದಿಂದ ರಾಮನು ಜಟಾಧಾರಿಯಾಗಿ ಸೀತೆ ಲಕ್ಷ್ಮಣರೊಡನೆ ಹದಿನಾಲ್ಕು ವರ್ಷಗಳು ಕಾಡಿಗೆ ಹೋಗುವಂತೆಯೂ, ಮತ್ತೊಂದು ವರದಿಂದ ಭರತನಿಗೆ ಯೌವರಾಜ್ಯವನ್ನು ಕಟ್ಟುವಂತೆಯೂ ಕೇಳಿಕೊಂಡಳು.

೨೦. ರಾಜನು ಸೀತಾಲಕ್ಷ್ಮಣರೊಡನೆ ರಾಮನನ್ನು ಕಾಡಿಗೆ ಕಳುಹಿಸಿದನು. ರಾಮನು ಮೂರು ದಿನಗಳು ಹಾಲನ್ನು ಕುಡಿದಿದ್ದುಕೊಂಡು ನಾಲ್ಕನೆಯ ದಿನ ಫಲವನ್ನು ತಿಂದು ಐದನೆಯ ದಿನ ಚಿತ್ರಕೂಟದಲ್ಲಿ ಆಶ್ರಮವನ್ನು ಮಾಡಿಕೊಂಡನು.

**ಪಂಚಮೋ ಚಿತ್ರಕೂಟೇ ತು ರಾಮಃ ಸ್ಥಾನ ಮಕಲ್ಪಯತ್ ।**
**ಅಥ ತ್ರಯೋದಶೇ ವರ್ಷೇ ಪಂಚವಟ್ಯಾಂ ಮಹಾಮುನೇ　　॥ ೨೧ ॥**

**ರಾಮೋ ವಿರೂಪಯಾಮಾಸ ಶೂರ್ಪಣಖಾಂ ನಿಶಾಚರೀಂ ।**
**ವನೇ ವಿಚರತಸ್ತಸ್ಯ ಜಾನಕ್ಯಾ ಸಹಿತಸ್ಯ ಚ　　॥ ೨೨ ॥**

**ಆಗತೋ ರಾಕ್ಷಸಸ್ತಾಂ ವೈ ಹರ್ತುಂ ಪಾಪವಿಪಾಕತಃ ।**
**ತತೋ ಮಾಘಾಸಿತಾಷ್ಟಮ್ಯಾಂ ಮುಹೂರ್ತೇ ವೃಂದಸಂಜ್ಞಕೇ　　॥ ೨೩ ॥**

**ರಾಘವಾಭ್ಯಾಂ ವಿನಾ ಸೀತಾಂ ಜಹಾರ ದಶಕಂಧರಃ ।**
**ತೇನೈವಂ ಹ್ರಿಯಮಾಣಾ ಸಾ ಚಕ್ರಂದ ಕುರರೀ ಯಥಾ　　॥ ೨೪ ॥**

**ರಾಮ ರಾಮೇತಿ ಮಾಂ ರಕ್ಷ ರಕ್ಷ ಮಾಂ ರಕ್ಷಸಾ ಹೃತಾಂ ।**
**ಯಥಾ ಶ್ಯೇನಃ ಕ್ಷುಧಾ ಕ್ರಾಂತಃ ಕ್ರಂದಂತೀಂ ವರ್ತಿಕಾಂ ನಯೇತ್　　॥ ೨೫ ॥**

---

೨೧-೨೨. ಆಮೇಲೆ ಕಾಡಿಗೆ ಹೋದ ಹದಿಮೂರನೆಯ ವರ್ಷದಲ್ಲಿ ಪಂಚವಟಿಯಲ್ಲಿ ಶೂರ್ಪಣಖಿಯೆಂಬ ರಾಕ್ಷಸಿಯನ್ನು ರಾಮನು ವಿರೂಪಮಾಡಿದನು. ಅನಂತರ ಇವರು ಕಾಡಿನಲ್ಲಿರುತ್ತಿರಲು ರಾವಣನೆಂಬ ರಾಕ್ಷಸನು ತನ್ನ ಪಾಪದ ಪರಿಪಕ್ವತೆಯಿಂದ ಆ ಸೀತೆಯನ್ನು ಕದಿಯಲು ಬಂದನು.

೨೩-೨೪. ಅನಂತರ ಮಾಘ ಬಹುಳ ಅಷ್ಟಮಿಯ ದಿನ ಒಂದು ಮುಹೂರ್ತದಲ್ಲಿ ರಾಮಲಕ್ಷ್ಮಣರಿಲ್ಲದಿರುವಾಗ ದಶಕಂಧರನು ಆಕೆಯನ್ನು ಕದ್ದನು. ಅವನು ಕದ್ದುಕೊಂಡು ಹೋಗುತ್ತಿರುವಾಗ ಹುಲ್ಲೆಯು ಅಳುವಂತೆ ಅವಳು ಅಳುತ್ತ ಹೋದಳು.

೨೫. ರಾಮ ರಾಮ, ನನ್ನನ್ನು ಕಾಪಾಡು, ನನ್ನನ್ನು ಕಾಪಾಡು, ರಾಕ್ಷಸನು ಕದ್ದುಕೊಂಡು ಹೋಗುತ್ತಿದ್ದಾನೆ, ಕಾಪಾಡು ಎಂದು ಹಸಿದ ಗಿಡುಗನು, ದುಃಖಪಡುತ್ತಿರುವ ಕುರವಕಹಕ್ಕಿಯನ್ನು ಹೊತ್ತುಕೊಂಡು ಹೋಗುತ್ತಿರುವಾಗ ಹೇಗೆ ಅಳುವುದೋ ಹಾಗೆ ಅಳುತ್ತಿದ್ದಳು.

ತಥಾ ಕಾಮುವಶಂ ಪ್ರಾಪ್ತೋ ರಾವಣೋ ಜನಕಾತ್ಮಜಾಂ ।
ನಯತ್ಯೇವಂ ಜನಕಜಾಂ ಜಟಾಯುಃ ಪಕ್ಷಿರಾಟ್ತದಾ ॥ ೨೬ ॥

ಯುಯುಧೇ ರಾಕ್ಷಸೇಂದ್ರೇಣ ಸ ರಾವಣಹತೋಽಪತತ್ ।
ಮಾರ್ಗಶುಕ್ಲನವಮ್ಯಾಂ ತು ವಸಂತೀಂ ರಾವಣಾಲಯೇ ॥ ೨೭ ॥

ಸಂಪಾತಿರ್ದಶಮೇ ಮಾಸ ಆಚಖ್ಯೌ ವಾನರೇಷು ತಾಂ ।
ಏಕಾದಶ್ಯಾಂ ಮಹೇಂದ್ರಾದ್ರೇಃ ಪುಪ್ಲುವೇ ಶತಯೋಜನಂ ॥ ೨೮ ॥

ಹನೂಮಾನ್ನಿಶಿ ತಸ್ಯಾಂ ತು ಲಂಕಾಯಾಂ ಪರ್ಯಕಾಲಯತ್ ।
ತದ್ರಾತ್ರಿಶೇಷೇ ಸೀತಾಯಾದರ್ಶನಂ ಹಿ ಹನೂಮತಃ ॥ ೨೯ ॥

ದ್ವಾದಶ್ಯಾಂ ಶಿಂಶಪಾವೃಕ್ಷೇ ಹನೂಮಾನ್ ಪರ್ಯವಸ್ಥಿತಃ ।
ತಸ್ಯಾಂ ನಿಶಾಯಾಂ ಜಾನಕ್ಯಾ ವಿಶ್ವಾಸಾಯ ಚ ಸಂಕಥಾ ॥ ೩೦ ॥

ಅಕ್ಷಾದಿಭಿಸ್ತ್ರಯೋದಶ್ಯಾಂ ತತೋ ಯುದ್ಧಮವರ್ತತ ।
ಬ್ರಹ್ಮಾಸ್ತ್ರೇಣ ಚತುರ್ದಶ್ಯಾಂ ಬದ್ಧಶ್ಶಕ್ರಜಿತಾ ಕಪಿಃ ॥ ೩೧ ॥

---

೨೬. ರಾವಣನು ಕಾಮನಿಗೆ ಅಧೀನನಾಗಿ ಸೀತೆಯನ್ನು ಒಯ್ಯುತ್ತಿರಲು ಜಟಾಯುವೆಂಬ ಪಕ್ಷಿಯು ತಡೆಯಲು ಬಂದು ಯುದ್ಧಮಾಡಿ ಸತ್ತಿತು.

೨೭-೨೮. ಮಾರ್ಗಶಿರ ಶುದ್ಧ ನವಮಿಯ ದಿವಸ ರಾವಣನ ಮನೆಯಲ್ಲಿರುವ ಸೀತೆಯನ್ನು ಸಂಪಾತಿಯು ಕಪಿಗಳಿಗೆ ತೋರಿಸಿದನು. ಅಲ್ಲಿಗೆ ಹತ್ತು ತಿಂಗಳಾಗಿತ್ತು. ಏಕಾದಶಿಯ ದಿನ ಮಹೇಂದ್ರಪರ್ವತದಿಂದ ಹನುಮಂತನು ನೂರು ಯೋಜನಗಳ ಅಗಲವುಳ್ಳ ಸಮುದ್ರವನ್ನು ದಾಟಿದನು.

೨೯. ಹನುಮಂತನು ಆ ರಾತ್ರಿಯೇ ಲಂಕೆಯಲ್ಲಿ ಹುಡುಕಿದನು. ಆ ದಿನ ಬೆಳಗಿನ ಜಾವದಲ್ಲಿ ಸೀತೆಯನ್ನು ಕಂಡನು.

೩೦. ದ್ವಾದಶಿಯ ದಿನವೆಲ್ಲವೂ ಮುತ್ತುಗದ ಮರದಲ್ಲಿ ಆ ಹನುಮಂತನು ಅವಿತುಕೊಂಡಿದ್ದನು. ಆ ರಾತ್ರಿಯೇ ಸೀತೆಯ ನಂಬಿಕೆಗೆ ಪಾತ್ರವಾದ ಮಾತುಗಳನ್ನಾಡಿದನು.

೩೧. ತ್ರಯೋದಶಿಯ ದಿನ ಅಕ್ಷಾದಿ ರಾಕ್ಷಸರೊಡನೆ ಯುದ್ಧಮಾಡಿದನು. ಚತುರ್ದಶಿಯ ದಿನ ಇಂದ್ರಜಿತುವಿನ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದನು.

ವಹ್ನಿನಾ ಪುಚ್ಛಯುಕ್ತೇನ ಲಂಕಾಯಾ ದಹನಂ ಕೃತಂ ।
ಪೌರ್ಣಮಾಸ್ಯಾಂ ಮಹೇಂದ್ರಾದ್ರೌ ಪುನರಾಗಮನಂ ಕಪೇಃ ॥ ೩೨ ॥

ಮಾರ್ಗಾಸಿತಪ್ರತಿಪದಃ ಪಂಚಭಿಃ ಪಥಿ ವಾಸರೈಃ ।
ಪುನರಾಗತ್ಯ ಷಷ್ಠೇಽಹ್ನಿ ಧ್ವಸ್ತಂ ಮಧುವನಂ ಕಿಲ ॥ ೩೩ ॥

ಸಪ್ತಮ್ಯಾಂ ಪ್ರತ್ಯಭಿಜ್ಞಾನದಾನಂ ಸರ್ವನಿವೇದನಂ ।
ಅಷ್ಟಮ್ಯುತ್ತರಫಲ್ಗುನ್ಯಾಂ ಮುಹೂರ್ತೇ ವಿಜಯಾಭಿದೇ ॥ ೩೪ ॥

ಮಧ್ಯಂ ಪ್ರಾಪ್ತೇ ಸಹಸ್ರಾಂಶೌ ಪ್ರಸ್ಥಾನಂ ರಾಘವಸ್ಯ ಚ ।
ರಾಮಃ ಕೃತ್ವಾ ಪ್ರತಿಜ್ಞಾಂ ತು ಪ್ರಯಾತೋ ದಕ್ಷಿಣಾಂ ದಿಶಂ ॥ ೩೫ ॥

ತೀರ್ತ್ವಾಹಂ ಸಾಗರಮಪಿ ಹನಿಷ್ಯೇ ರಾಕ್ಷಸೇಶ್ವರಂ ।
ದಕ್ಷಿಣಾಶಾಂ ಪ್ರಯಾತಸ್ಯ ಸುಗ್ರೀವೋಽಪ್ಯಭವತ್ಸಖಾ ॥ ೩೬ ॥

---

೩೨. ಆ ಬಳಿಕ ಬಾಲದಲ್ಲಿರುವ ಬೆಂಕಿಯಿಂದ ಲಂಕೆಯನ್ನು ಸುಟ್ಟನು. ಹುಣ್ಣಿಮೆಯ ದಿನ ಮಹೇಂದ್ರಪರ್ವತಕ್ಕೆ ತಿರುಗಿ ಬಂದನು.

೩೩. ಮಾರ್ಗಶೀರ್ಷ ಬಹುಳ ಪಾಡ್ಯದ ದಿನದಿಂದ ಐದು ದಿನಗಳು ದಾರಿ ನಡೆದು, ಆರನೆಯ ದಿನ ಬಂದು ಮಧುವನವನ್ನು ನಾಶಮಾಡಿದನು.

೩೪. ಸಪ್ತಮಿಯ ದಿನ ಗುರುತನ್ನು ಕೊಟ್ಟು ಎಲ್ಲವನ್ನು ಹೇಳಿದನು. ಅಷ್ಟಮೀ ಉತ್ತರ ಫಲ್ಗುನೀ ನಕ್ಷತ್ರ ವಿಜಯ ಮುಹೂರ್ತ.

೩೫. ಆ ಮುಹೂರ್ತದಲ್ಲಿ ಸೂರ್ಯನು ಆಕಾಶದಲ್ಲಿ ಮಧ್ಯಭಾಗದಲ್ಲಿರುವಾಗ ರಾಮನು ಪ್ರಯಾಣಮಾಡಿದನು. ಮತ್ತು ಪ್ರತಿಜ್ಞೆಯನ್ನು ಮಾಡಿ ದಕ್ಷಿಣದಿಕ್ಕನ್ನು ಕುರಿತು ಹೊರಟನು.

೩೬. ಸಮುದ್ರವನ್ನು ದಾಟಿ ರಾಕ್ಷಸ ಚಕ್ರವರ್ತಿಯನ್ನು ಕೊಲ್ಲುತ್ತೇನೆ ಎಂದು ಪ್ರತಿಜ್ಞೆಮಾಡಿದನು. ದಕ್ಷಿಣದಿಕ್ಕಿಗೆ ಹೊರಡಲು ಸುಗ್ರೀವನು ಸ್ನೇಹಿತನಾಗಿ ಹೊರಟನು.

ಪಾಸರ್ಸೈಸ್ಸಪ್ತಭಿಸ್ಸಿಥೋಃ ಸ್ಕಂಧಾವಾರನಿವೇಶನಂ ।
ಪೌಷಶುಕ್ಲೇ ಪ್ರತಿಪದಸ್ತೃತೀಯಾ ಯಾವದಂಬುಧೇಃ ॥ ೩೭ ॥

ಉಪಸ್ಥಾನಂ ಸಸೈನ್ಯಸ್ಯ ರಾಘವಸ್ಯ ಬಭೂವ ಹ ।
ವಿಭೀಷಣಶ್ಚತುರ್ಥ್ಯಾಂ ತು ರಾಮೇಣ ಸಹ ಸಂಗತಃ ॥ ೩೮ ॥

ಸಮುದ್ರತರಣಾರ್ಥಾಯ ಪಂಚಮ್ಯಾಂ ಮಂತ್ರ ಉದ್ಯತಃ ।
ಪ್ರಾಯೋಪವೇಶನಂ ಚಕ್ರೇ ರಾಮೋ ದಿನಚತುಷ್ಟಯಂ ॥ ೩೯ ॥

ಸಮುದ್ರಾದ್ವರಲಾಭಶ್ಚ ಸಹೋಪಾಯಪ್ರದರ್ಶನಂ ।
ತತೋ ದಶಮ್ಯಾಮಾರಂಭಸ್ತ್ರಯೋದಶ್ಯಾಂ ಸಮಾಪನಂ ॥ ೪೦ ॥

ಚತುರ್ದಶ್ಯಾಂ ಸುವೇಲಾದ್ರೌ ರಾಮಃ ಸೈನ್ಯಂ ನ್ಯವೇಶಯತ್ ।
ಪೌರ್ಣಮಾಸ್ಯಾ ದ್ವಿತೀಯಾಂತಂ ತ್ರಿದಿನೈಸ್ಸೈನ್ಯತಾರಣಂ ॥ ೪೧ ॥

---

೩೭. ಏಳುದಿನಗಳಲ್ಲಿ ಸಮುದ್ರದ ಹತ್ತಿರ ಶಿಬಿರವನ್ನು ಬಿಟ್ಟನು. ಪುಷ್ಯ ಶುದ್ಧ ಪ್ರತಿಪತ್ತಿನಿಂದ ಹಿಡಿದು ಆ ತೃತೀಯೆಯವರೆಗೆ ಸಸೈನ್ಯನಾದ ರಾಘವನು ಸಿದ್ಧಮಾಡಿಕೊಂಡನು.

೩೮. ಆ ಚತುರ್ಥಿಯ ದಿನ ವಿಭೀಷಣನು ರಾಮನೊಡನೆ ಸೇರಿಕೊಂಡನು.

೩೯. ಸಮುದ್ರವನ್ನು ದಾಟಲು ಪಂಚಮಿಯ ದಿನ ಮಂತ್ರಾಲೋಚನೆ ನಡೆಸಿದರು. ಅನಂತರ ನಾಲ್ಕು ದಿನಗಳವರೆಗೂ ರಾಮನು ಪ್ರಾಯೋಪವೇಶ ಮಾಡಿದನು.

೪೦. ಆಗ ಸಮುದ್ರವು ವರಕೊಟ್ಟು ಉಪಾಯವನ್ನು ತಿಳಿಸಿತು. ಸೇತುವೆ ಕಟ್ಟಲು ದಶಮಿಯ ದಿನ ಮೊದಲು ಮಾಡಿ ತ್ರಯೋದಶಿಯ ದಿನ ಮುಗಿಸಿದನು.

೪೧. ಚತುರ್ದಶಿಯ ದಿನ ಸುವೇಲಪರ್ವತಕ್ಕೆ ರಾಮನು ಸೈನ್ಯವನ್ನು ತಂದನು. ಪೌರ್ಣಮಾಸ್ಯೆಯಿಂದ ದ್ವಿತೀಯೆಯವರೆಗೆ ಮೂರು ದಿನಗಳು ಸೈನ್ಯವನ್ನು ದಾಟಿಸಿದನು.

ತೀರ್ತ್ವಾ ತೋಯನಿಧಿಂ ರಾಮೋ ವಾನರೇಶ್ವರಸೈನ್ಯವಾನ್ ।
ರುರೋಧ ಚ ಪುರೀಂ ಲಂಕಾಂ ಸೀತಾರ್ಥಂ ಸಹಲಕ್ಷ್ಮಣಃ ॥ ೪೨ ॥

ತೃತೀಯಾದಿದಶಮ್ಯಂತಂ ನಿವೇಶಶ್ಚ ದಿನಾಷ್ಟಕಂ ।
ಶುಕಸಾರಣಯೋಸ್ತತ್ರ ಪ್ರಾಪ್ತಿರೇಕಾದಶೀ ದಿನೇ ॥ ೪೩ ॥

ಪೌಷಾಸಿತಾಖ್ಯದ್ವಾದಶ್ಯಾಂ ಸೈನ್ಯಸಂಖ್ಯಾನಮೇವ ಚ ।
ಶಾರ್ದೂಲೇನ ಕಪೀಂದ್ರಾಣಾಂ ಸಹ ಸಾರೋಪವರ್ಣನಂ ॥ ೪೪ ॥

ತ್ರಯೋದಶ್ಯಾ ಅಮಾವಾಸ್ಯಾಂ ಲಂಕಾಯಾಂ ದಿವಸೈಸ್ತ್ರಿಭಿಃ ।
ರಾವಣಃ ಸೈನ್ಯಸಂಖ್ಯಾನಾಂ ರಣೋತ್ಸಾಹಂ ತದಾಽಕರೋತ್ ॥ ೪೫ ॥

ಪ್ರಯಯಾವಂಗದೋ ದೌತ್ಯೇ ಮಾಘಶುಕ್ಲಾದ್ಯವಾಸರೇ ।
ಸೀತಾಯಾಶ್ಚ ತತೋ ಭರ್ತುರ್ಮಾಯಾಮೂರ್ಧಾದಿದರ್ಶನಂ ॥ ೪೬ ॥

---

೪೨. ಸಮುದ್ರವನ್ನು ದಾಟಿ ರಾಮನು ಕಪಿಸೈನ್ಯಕ್ಕೆ ಆಧಿಪತ್ಯವನ್ನು ವಹಿಸಿಕೊಂಡು ಲಕ್ಷ್ಮಣನೊಡನೆ ಸೀತೆಗೋಸ್ಕರ ಲಂಕೆಗೆ ಮುತ್ತಿಗೆ ಹಾಕಿದನು.

೪೩. ತದಿಗೆ ಮೊದಲ್ಗೊಂಡು ದಶಮಿಯವರೆಗೆ ಎಂಟುದಿನಗಳು ಅಲ್ಲಿ ಇದ್ದನು. ಆಗಲೇ ಅಲ್ಲಿ ಶುಕಸಾರಣರೆಂಬ ರಾಕ್ಷಸರು ಬಂದರು. ಅಂದು ಏಕಾದಶಿಯಾಗಿದ್ದಿತು.

೪೪. ಪುಷ್ಯ ಬಹುಳ ದ್ವಾದಶಿಯ ದಿನ ಸೈನ್ಯಗಳನ್ನು ಲೆಖ್ಖಾಚಾರಮಾಡಿದನು. ರಾಮನೊಡನೆ ಜಾಂಬವಂತನು ಮತ್ತು ಇತರ ಕಪಿಗಳು ತಮ್ಮ ಬಲಾಬಲವನ್ನು ಹೇಳಿಕೊಂಡವು.

೪೫. ಪುಷ್ಯ ಬಹುಳ ತ್ರಯೋದಶಿಯಿಂದ ಅಮಾವಾಸ್ಯೆಯವರೆಗೆ ರಾವಣನು ಲಂಕೆಯ ಸೈನ್ಯವನ್ನು ಸೇರಿಸಿ ಯುದ್ಧೋತ್ಸಾಹವನ್ನು ಮಾಡುತ್ತಿದ್ದನು.

೪೬. ಮಾಘ ಶುದ್ಧ ಪಾಡ್ಯದ ದಿನ ಅಂಗದನು ದೌತ್ಯಕ್ಕೆ ಹೋದನು. ಅನಂತರ ಸೀತೆಗೆ ಮಾಯಾರಾಮನ ತಲೆಯನ್ನು ತೋರಿಸಿದುದು.

ಮಾಘದ್ವಿತೀಯಾದಿನೈಃ ಸಪ್ತಭಿರ್ಯಾವದಷ್ಟಮಿ ।
ರಕ್ಷಸಾಂ ವಾನರಾಣಾಂ ಚ ಯುದ್ಧಮಾಸೀಚ್ಚ ಸಂಕುಲಂ ॥ ೪೭ ॥

ಮಾಘಶುಕ್ಲನವಮ್ಯಾಂ ತು ರಾತ್ರಾವಿಂದ್ರಜಿತಾ ರಣೇ ।
ರಾಮಲಕ್ಷ್ಮಣಯೋರ್ನಾಗಪಾಶಬಂಧಃ ಕೃತಃ ಕಿಲ ॥ ೪೮ ॥

ಆಕುಲೇಷು ಕಪೀಂದ್ರೇಷು ನಿರುತ್ಸಾಹೇಷು ಸರ್ವಶಃ ।
ನಾಗಾಪಾಶವಿನಾಶಾರ್ಥಂ ದಶಮ್ಯಾಂ ಪವನೋऽಜಪತ್ ॥ ೪೯ ॥

ಕರ್ಣೇ ಸ್ವರೂಪಂ ರಾಮಸ್ಯ ಗರುಡಾಗಮನಂ ತತಃ ।
ಏಕಾದಶ್ಯಾಂ ಚ ದ್ವಾದಶ್ಯಾಂ ಧೂಮ್ರಾಕ್ಷಸ್ಯ ವಧಃ ಕೃತಃ ॥ ೫೦ ॥

ತ್ರಯೋದಶ್ಯಾಂ ತು ತೇನೈವ ನಿಹತಃ ಕಂಪನೋ ರಣೇ ।
ಮಾಘಶುಕ್ಲಚತುರ್ದಶ್ಯಾಂ ಯಾವತ್ಕೃಷ್ಣಾದಿವಾಸರಂ ॥ ೫೧ ॥

---

೪೭. ಮಾಘ ಶುದ್ಧ ದ್ವಿತೀಯೆಯಿಂದ ಅಷ್ಟಮಿಯವರೆಗೂ ಏಳುದಿನಗಳು ರಾಕ್ಷಸರಿಗೂ ಕಪಿಗಳಿಗೂ ಸಂಕುಲಯುದ್ಧವಾಯಿತು.

೪೮. ಮಾಘ ಶುದ್ಧ ನವಮಿ ದಿನ ರಾತ್ರಿ ಇಂದ್ರಜಿತುವು ಸರ್ಪಾಸ್ತ್ರದಿಂದ ರಾಮಲಕ್ಷ್ಮಣರನ್ನು ಕಟ್ಟಿದನು.

೪೯-೫೦. ಕಪಿಗಳೆಲ್ಲವೂ ದುಃಖಪಟ್ಟು ಉತ್ಸಾಹಹೀನರಾಗಿರಲು, ನಾಗಪಾಶವನ್ನು ಬಿಡಿಸಲು ವಾಯುವು ರಾಮನ ಕಿವಿಯಲ್ಲಿ ಅವನ ಸ್ವರೂಪವನ್ನು ಹೇಳಿದನು. ಆಗ ರಾಮನು ಗರುಡನನ್ನು ಸ್ಮರಿಸಲು ಗರುಡನು ಏಕಾದಶಿಯ ದಿನ ಬಂದು ಸರ್ಪಾಸ್ತ್ರವನ್ನು ನಿವೃತ್ತಿಮಾಡಿದನು. ದ್ವಾದಶಿಯ ದಿನವೇ ಧೂಮ್ರಾಕ್ಷನನ್ನು ಕೊಂದನು.

೫೧. ತ್ರಯೋದಶಿಯ ದಿನ ಕಂಪನನ್ನು ಯುದ್ಧದಲ್ಲಿ ಕೊಂದನು. ಮಾಘ ಶುದ್ಧ ಚತುರ್ದಶಿಯಿಂದ ಬಹುಳ ಪಾಡ್ಯದವರೆಗೆ ತುಮುಲಯುದ್ಧವು ನಡೆಯಿತು. ಆಗ ರಾವಣನು ಯುದ್ಧದಿಂದ ಓಡಿದನು.

ತ್ರಿದಿನೇ ತು ಪ್ರಹಸ್ತಸ್ಯ ನೀಲೇನ ವಿಹಿತೋ ವಧಃ ।
ಮಾಘಕೃಷ್ಣದ್ವಿತೀಯಾಯಾಶ್ಚತುರ್ಥ್ಯಂತಂ ತ್ರಿಭಿರ್ದಿನೈಃ ॥ ೫೨ ॥

ರಾಮೇಣ ತುಮುಲೇ ಯುದ್ಧೇ ರಾವಣೋ ದ್ರಾವಿತೋ ರಣಾತ್ ।
ಪಂಚಮ್ಯಾ ಅಷ್ಟಮೀ ಯಾವದ್ರಾವಣೇನ ಪ್ರಬೋಧಿತಃ ॥ ೫೩ ॥

ಕುಂಭಕರ್ಣಸ್ತದಾ ಚಕ್ರೇಽಭ್ಯವಹಾರಂ ಚತುರ್ದಿನೇ ।
ಕುಂಭಕರ್ಣೋ ದಿನೈಃ ಷಡ್ಭಿರ್ನವಮ್ಯಾಸ್ತು ಚತುರ್ದಶೀಂ ॥ ೫೪ ॥

ರಾಮೇಣ ನಿಹತೋ ಯುದ್ಧೇ ಬಹುವಾನರಭಕ್ಷಕಃ ।
ಅಮಾವಾಸ್ಯಾದಿನೇ ಶೋಕಾದವಹಾರೋ ಬಭೂವ ಹ ॥ ೫೫ ॥

ಫಾಲ್ಗುನಾದಿಪ್ರತಿಪದಶ್ಚತುರ್ಥ್ಯಂತಚತುರ್ದಿನೈಃ ।
ಬಿಸತಂತುಪ್ರಭೃತಯೋ ನಿಹತಾಃ ಪಂಚರಾಕ್ಷಸಾಃ ॥ ೫೬ ॥

ಪಂಚಮ್ಯಾಃ ಸಪ್ತಮೀ ಯಾವದತಿಕಾಯವಧಸ್ತಥಾ ।
ಅಷ್ಟಮ್ಯಾ ದ್ವಾದಶೀ ಯಾವನ್ನಿಹತೌ ದಿನಪಂಚಕಾತ್ ॥ ೫೭ ॥

---

೫೨. ಮಾಘ ಬಹುಳ ಬಿದಿಗೆಯಿಂದ ಚತುರ್ಥಿಯ ವರೆಗೆ ಮೂರು ದಿನಗಳ ಪರ್ಯಂತ ನೀಲನು ಪ್ರಹನೊಡನೆ ಯುದ್ಧಮಾಡಿ ಅವನನ್ನು ಕೊಂದನು.

೫೩. ಪಂಚಮಿಯಿಂದ ಅಷ್ಟಮಿಯುವರೆಗೂ ರಾವಣನು ಕುಂಭಕರ್ಣನನ್ನು ಎಬ್ಬಿಸಿದನು. ಕುಂಭಕರ್ಣನು ನಾಲ್ಕನೇ ದಿನ ಊಟಮಾಡಿದನು.

೫೪-೫೫. ಕುಂಭಕರ್ಣನು ನವಮಿಯಿಂದ ಚತುರ್ದಶಿಯುವರೆಗೂ ಆರು ದಿನಗಳು ಯುದ್ಧಮಾಡಿದನು. ಈ ವಾನರಭಕ್ಷಕನಾದ ಕುಂಭಕರ್ಣನನ್ನು ಅಮಾವಾಸ್ಯೆಯ ದಿನ ಕೊಂದನು.

೫೬. ಫಾಲ್ಗುಣ ಶುದ್ಧ ಪ್ರತಿಪತ್ತಿನಿಂದ ಚತುರ್ಥಿವರೆಗೆ ನಾಲ್ಕು ದಿನಗಳಲ್ಲಿ ಬಿಸತಂತುವೇ ಮೊದಲಾದ ಐದು ಜನ ರಾಕ್ಷಸರನ್ನು ಕೊಂದನು.

೫೭.೫೮. ಪಂಚಮಿಯಿಂದ ಸಪ್ತಮಿಯುವರೆಗೆ ಅತಿಕಾಯನ ವಧೆಯು ನಡೆಯಿತು. ಅಷ್ಟಮಿಯಿಂದ ದ್ವಾದಶಿಯುವರೆಗೆ ಐದುದಿನಗಳ ತನಕ ನಿಕುಂಭ ಕುಂಭರ

ನಿಕುಂಭಕುಂಭಾಪೂರ್ವ್ವಂ ತು ಮಕರಾಕ್ಷಸ್ತ್ರಿಭಿರ್ದಿನೈಃ ।
ಫಾಲ್ಗುನಾಸಿತ ದ್ವಿತೀಯಾಯಾಂ ದಿನೇ ಶಕ್ರಜಿತಾ ಜಿತಂ ॥ ೫೮ ॥

ತೃತೀಯಾದಿಸಪ್ತಮ್ಯಂತಂ ದಿನಪಂಚಕಮೇವ ಚ ।
ಓಷಧ್ಯಾನಯನವ್ಯಗ್ರಾದವಹಾರೋ ಬಭೂವ ಹ ॥ ೫೯ ॥

ತತಸ್ತ್ರಯೋದಶೀ ಯಾವದ್ದಿನೈಃ ಪಂಚಭಿರಿಂದ್ರಜಿತ್ ।
ಲಕ್ಷ್ಮಣೇನ ಹತೋ ಯುದ್ಧೇ ಪ್ರಖ್ಯಾತಬಲಪೌರುಷಃ ॥ ೬೦ ॥

ಚತುರ್ದಶ್ಯಾಂ ದಶಗ್ರೀವೋ ದೀಕ್ಷಾಂ ಪ್ರಾಪಾವಹಾರತಃ ।
ಅಮಾವಾಸ್ಯಾದಿನೇ ಪ್ರಾಯಾದ್ಯುದ್ಧಾಯ ದಶಕಂಧರಃ ॥ ೬೧ ॥

ಚೈತ್ರಶುಕ್ಲಪ್ರತಿಪದಃ ಪಂಚಮ್ಯಾ ದಿನಪಂಚಕೈಃ ।
ರಾವಣೇ ಯುಧ್ಯಮಾನೇ ತು ಪ್ರಚುರೋ ರಕ್ಷಸಾಂ ವಧಃ ॥ ೬೨ ॥

---

ವಧಮಾಡಿದನು. ಮೇಲೆ ಮೂರು ದಿನಗಳವರೆಗೆ ಯುದ್ಧಮಾಡಿ ಮಕರಾಕ್ಷನನ್ನು ವಧಿಸಿದನು. ಫಾಲ್ಗುಣ ಶುದ್ಧ ದ್ವಿತೀಯೆಯ ದಿನ ಇಂದ್ರಜಿತುವು ಸೋಲಿಸಿದನು.

೫೯. ತೃತೀಯೆಯಿಂದ ಸಪ್ತಮಿಯವರೆಗೆ ಐದುದಿನಗಳು ಔಷಧಿಯನ್ನು ತರುವುದಕ್ಕೋಸ್ಕರ ಯುದ್ಧವನ್ನು ನಿಲ್ಲಿಸಿದನು.

೬೦. ಅಲ್ಲಿಂದ ತ್ರಯೋದಶಿಯವರೆಗೂ ಐದುದಿನಗಳು ಇಂದ್ರಜಿತುವು ಯುದ್ಧ ಮಾಡಿ ತನ್ನ ಪೌರುಷವನ್ನು ತೋರಿಸಿ ಲಕ್ಷ್ಮಣನಿಂದ ಕೊಲ್ಲಲ್ಪಟ್ಟನು.

೬೧. ಚತುರ್ದಶಿಯ ದಿನ ರಾವಣನು ಯುದ್ಧಮಾಡಲು ದೀಕ್ಷೆಹೊಂದಿದನು. ಅಮಾವಾಸ್ಯೆಯ ದಿನ ಅವನು ಯುದ್ಧಕ್ಕೆ ಹೊರಟನು.

೬೨. ಚೈತ್ರ ಶುದ್ಧ ಪಾಡ್ಯದಿಂದ ಪಂಚಮಿಯವರೆಗೂ ಐದುದಿನಗಳು ರಾವಣನು ಯುದ್ಧಮಾಡುತ್ತಿರಲು ಬಹುಜನ ರಾಕ್ಷಸರು ಸತ್ತರು.

ಚೈತ್ರಷಷ್ಠ್ಯಾ ಅಷ್ಟಮೀ ಯಾವನ್ಮಹಾಪಾರ್ಶ್ವಾದಿಮಾರಣಂ ।
ಚೈತ್ರಶುಕ್ಲನವಮ್ಯಾಂ ತು ಸೌಮಿತ್ರೇಶ್ಶಕ್ತಿಭೇದನಂ ॥ ೬೩ ॥

ಕೋಪಾವಿಷ್ಟೇನ ರಾಮೇಣ ದ್ರಾವಿತೋ ದಶಕಂಧರಃ ।
ದ್ರೋಣಾದ್ರಿರಾಂಜನೇಯೇನ ಲಕ್ಷ್ಮಣಾರ್ಥಮುಪಾಹೃತಃ ॥ ೬೪ ॥

ದಶಮ್ಯಾಮವಹಾರೋಽಭೂದ್ರಾಮಯುದ್ಧೇ ತು ರಕ್ಷಸಾಂ ।
ಏಕಾದಶ್ಯಾಂ ತು ರಾಮಾಯ ರಥಂ ಮಾತಲಿಸಾರಥಿಃ ॥ ೬೫ ॥

ಪ್ರೇರಿತೋ ವಾಸವೇನಾಜಾವರ್ಪಯಾಮಾಸ ಭಕ್ತಿತಃ ।
ಕೋಪವಾನಥ ದ್ವಾದಶ್ಯಾ ಯಾವತ್ಕೃಷ್ಣಚತುರ್ದಶೀ ॥ ೬೬ ॥

ಅಷ್ಟಾದಶದಿನೇ ರಾಮೋ ರಾವಣಂ ದ್ವೈರಥೇಽವಧೀತ್ ।
ಸಂಗ್ರಾಮೇ ತುಮುಲೇ ಜಾತೇ ರಾಮೋ ಜಯಮವಾಪ್ತವಾನ್ ॥ ೬೭ ॥

---

೬೩. ಚೈತ್ರ ಶುದ್ಧ ಷಷ್ಠಿಯಿಂದ ಅಷ್ಟಮೀವರೆಗೂ ಮಹಾಪಾರ್ಶ್ವಾದಿಗಳ ವಧೆಯು ನಡೆಯಿತು. ಚೈತ್ರ ಶುಕ್ಲ ನವಮೀ ದಿನ ಲಕ್ಷ್ಮಣನು ಶಕ್ತಿಯಿಂದ ಕುಂದಿದುದು.

೬೪. ರಾಮನು ಅನಂತರ ಕೋಪದಿಂದ ರಾವಣನನ್ನು ಓಡಿಸಿದುದು. ಅನಂತರ ಲಕ್ಷ್ಮಣನನ್ನು ಬದುಕಿಸಲು ಆಂಜನೇಯನು ಚಂದ್ರದ್ರೋಣಪರ್ವತವನ್ನು ತಂದದ್ದು.

೬೫. ದಶಮಿಯ ದಿನ ರಾಮಯುದ್ಧದಲ್ಲಿ ರಾಕ್ಷಸರಿಗೆ ವಿರಾಮಸಿಕ್ಕಿತು. ಏಕಾದಶಿಯ ದಿನ ಮಾತಲಿಯು ರಾಮನಿಗೆ ರಥವನ್ನು ತಂದನು.

೬೬-೬೭. ಇಂದ್ರನು ಹೇಳಿದಂತೆ ಮಾತಲಿಯು ರಾಮನಿಗೆ ರಥವನ್ನು ಅರ್ಪಿಸಿದನು. ಅನಂತರ ರಾಮನು ಕೋಪಗೊಂಡು ದ್ವಾದಶಿಯ ಮೊದಲ್ಗೊಂಡು ಬಹುಳ ಚತುರ್ದಶಿಯುವರೆಗೂ ಹದಿನೆಂಟು ದಿನಗಳವರೆಗೂ ಯುದ್ಧಮಾಡಿ ರಾವಣನನ್ನು ಕೊಂದನು. ಯುದ್ಧವು ತುಮುಲಯುದ್ಧವಾಗಿ ನಡೆದು ರಾಮನು ಜಯವನ್ನು ಹೊಂದಿದನು.

ಮಾಘಶುಕ್ಲದ್ವಿತಿಯಾಂಪೂರ್ವೈತ್ರಕೃಷ್ಣಚತುರ್ದಶೀ ।
ಸಪ್ತಾಶೀತಿದಿನಾನ್ಯೇವ ಮಧ್ಯಂ ಪಂಚದಶಾಹಕಂ ॥ ೬೮ ॥

ಯುದ್ಧಾವಹಾರಸ್ಸಂಗ್ರಾಮೋ ದ್ವಾಸಪತ್ತಿದಿನಾನ್ಯಭೂತ್ ।
ಸಂಸ್ಕಾರೋ ರಾವಣಾದೀನಾಮಮಾವಾಸ್ಯಾದಿನೇಽಭವತ್ ॥ ೬೯ ॥

ವೈಶಾಖಾದಿತಿಥೌ ರಾಮ ಉವಾಸ ರಣಭೂಮಿಷು ।
ಅಭಿಷಿಕ್ತೋ ದ್ವಿತೀಯಾಯಾಂ ಲಂಕಾರಾಜ್ಯೇ ವಿಭೀಷಣಃ ॥ ೭೦ ॥

ಸೀತಾಶುದ್ಧಿಸ್ತೃತೀಯಾಯಾಂ ದೇವೇಭ್ಯೋ ವರಲಂಭನಂ ।
ಹತ್ವಾಚಿರೇಣ ಲಂಕೇಶಂ ಲಕ್ಷ್ಮಣಾಗ್ರಜ ಏವ ಸಃ ॥ ೭೧ ॥

ಗೃಹೀತ್ವಾ ಜಾನಕೀಂ ಪುಣ್ಯಾಂ ದುಃಖಿತಾಂ ರಾಕ್ಷಸೇನ ತು ।
ಆದಾಯ ಪರಯಾ ಪ್ರೀತ್ಯಾ ಜಾನಕೀಂ ಸ ನ್ಯವರ್ತತ ॥ ೭೨ ॥

ವೈಶಾಖಸ್ಯ ಚತುರ್ಥ್ಯಾಂ ತು ರಾಮಃ ಪುಷ್ಪಕಮಾಶ್ರಿತಃ ।
ವಿಹಾಯಸಾ ನಿವೃತ್ತಸ್ತು ಭೂಯೋಽಯೋಧ್ಯಾಂ ಪುರೀಂ ಪ್ರತಿ ॥ ೭೩ ॥

---

೬೮-೬೯. ಮಾಘ ಶುದ್ಧ ದ್ವಿತೀಯೆಯಿಂದ ಚೈತ್ರ ಕೃಷ್ಣ ಚತುರ್ದಶಿಯ ವರೆಗೆ ಇಪ್ಪತ್ತೇಳು ದಿನಗಳವರೆಗೆ ಯುದ್ಧಕಾಲವು. ಹದಿನೈದು ದಿನಗಳು ಯುದ್ಧ ವನ್ನು ಮಧ್ಯದಲ್ಲಿ ನಿಲ್ಲಿಸಿದರು. ಅನಂತರ ಇಪ್ಪತ್ತೆರಡು ದಿನಗಳು ಮತ್ತೆ ಯುದ್ಧ ನಡೆಯಿತು. ಚೈತ್ರ ಬಹುಳ ಅಮಾವಾಸ್ಯೆಯ ದಿನ ರಾವಣನ ಅಂತ್ಯಸಂಸ್ಕಾರವು ನಡೆಯಿತು.

೭೦. ವೈಶಾಖ ಶುದ್ಧ ಪಾಡ್ಯದ ದಿನ ರಾಮನು ಯುದ್ಧಭೂಮಿಯಲ್ಲಿಯೇ ಇದ್ದನು. ದ್ವಿತೀಯೆಯ ದಿನ ಲಂಕೆಗೆ ವಿಭೀಷಣನನ್ನು ಅಭಿಷೇಕಮಾಡಿದನು.

೭೧-೭೨. ತೃತೀಯೆಯ ದಿನ ಸೀತೆಯ ಶುದ್ಧಿಯು ನಡೆಯಿತು. ದೇವತೆ ಗಳು ವರವನ್ನು ಕೊಟ್ಟರು. ರಾವಣನನ್ನು ಸ್ವಲ್ಪಕಾಲದಲ್ಲಿಯೇ ಕೊಂದು ಸೀತೆ ಯನ್ನು ಕರೆದುಕೊಂಡು ಹಿಂತಿರುಗಿದನು.

೭೩. ವೈಶಾಖ ಶುದ್ಧ ಚತುರ್ಥಿಯ ದಿನ ರಾಮನು ಪುಷ್ಪಕವಿಮಾನವನ್ನೇರಿ ಆಕಾಶಮಾರ್ಗದಲ್ಲಿ ಹೊರಟು ಅಯೋಧ್ಯೆಗೆ ಹಿಂತಿರುಗಿದನು.

**ಪೂರ್ಣೇ ಚತುರ್ದಶೇ ವರ್ಷೇ ಪಂಚಮ್ಯಾಂ ಮಾಧವಸ್ಯ ತು ।**
**ಭಾರದ್ವಾಜಾಶ್ರಮೇ ರಾಮಃ ಸಗಣಸ್ಸಮುಪಾವಿಶತ್ ॥ ೭೪ ॥**

**ನಂದಿಗ್ರಾಮೇ ತು ಷಷ್ಠ್ಯಾಂ ಸ ಭರತೇನ ಸಮಾಗಮಃ ।**
**ಸಪ್ತಮ್ಯಾಮಭಿಷಿಕ್ತೋಽಸೌ ಭೂಯೋಽಯೋಧ್ಯಾಂ ರಘೂದ್ವಹಃ ॥ ೭೫ ॥**

**ದಶೈಕಾಧಿಕಮಾಸಾಂಶ್ಚತುರ್ದಶಾಹಾನಿ ಮೈಥಿಲೀ ।**
**ಉವಾಸ ರಾಮರಹಿತಾ ರಾವಣಸ್ಯ ನಿವೇಶನೇ ॥ ೭೬ ॥**

**ದ್ವಿಚತ್ವಾರಿಂಶವರ್ಷೇ ತು ರಾಮೋ ರಾಜ್ಯಮಕಾರಯತ್ ।**
**ಸೀತಾಯಾಶ್ಚ ತ್ರಯಸ್ತ್ರಿಂಶದ್ವತ್ಸರಾಣಿ ತದಾಽಭವನ್ ॥ ೭೭ ॥**

**ಸ ಚತುರ್ದಶವರ್ಷಾಂತೇ ಪ್ರವಿಶ್ಯ ಸ್ವಾಂ ಪುರೀಂ ಪ್ರಭುಃ ।**
**ಅಯೋಧ್ಯಾಯಾಂ ಸಮುದಿತೋ ರಾಮೋ ರಾವಣಹಾರಣಃ ॥ ೭೮ ॥**

**ಭ್ರಾತೃಭಿಸ್ಸಹಿತಸ್ತತ್ರ ರಾಮೋ ರಾಜ್ಯಮಕಾರಯತ್ ।**
**ರಾಜ್ಯಂ ಪ್ರಕುರ್ವತಸ್ತಸ್ಯ ಪುರೋಧಾ ವದತಾಂ ವರಃ ॥ ೭೯ ॥**

---

೭೪. ಹದಿನಾಲ್ಕು ವರ್ಷವು ಪೂರ್ಣವಾಗಲು ವೈಶಾಖ ಶುದ್ಧ ಪಂಚಮಿಯ ದಿನ ರಾಮನು ಭರದ್ವಾಜಾಶ್ರಮದಲ್ಲಿ ಪರಿವಾರದೊಂದಿಗೆ ಇಳಿದನು.

೭೫. ಷಷ್ಠಿಯ ದಿನ ನಂದಿಗ್ರಾಮದಲ್ಲಿ ಭರತನೊಡನೆ ಸೇರಿದನು. ಸಪ್ತಮಿಯ ದಿನ ಅಯೋಧ್ಯೆಯಲ್ಲಿ ರಾಮನು ಅಭಿಷಿಕ್ತನಾದನು.

೭೬. ಸೀತೆಯು ಹನ್ನೊಂದು ತಿಂಗಳು, ಹದಿನಾಲ್ಕು ದಿನಗಳವರೆಗೆ ರಾಮನನ್ನು ಬಿಟ್ಟು ರಾವಣನ ಮನೆಯಲ್ಲಿ ಇದ್ದಳು.

೭೭. ರಾಮನಿಗೆ ನಾಲ್ವತ್ತೆರಡನೆಯ ವರ್ಷದಲ್ಲಿ ರಾಜ್ಯಭಾರ ಸಿಕ್ಕಿ ಆಳಿದನು. ಆಗ ಸೀತೆಗೆ ಮೂವತ್ತುಮೂರು ವರ್ಷಗಳಾಗಿದ್ದುವು.

೭೮. ಹದಿನಾಲ್ಕು ವರ್ಷದಲ್ಲಿ ಊರನ್ನು ಸೇರಿದನು. ಹೀಗೆ ರಾವಣಹಾರಕನಾದ ರಾಮನು ಅಯೋಧ್ಯೆಯಲ್ಲಿ ಆಳಿದನು.

೭೯-೮೦. ಅಲ್ಲಿ ರಾಮನು ತಮ್ಮಂದಿರೊಡನೆ ರಾಜ್ಯಭಾರಮಾಡುತ್ತಿದ್ದನು. ಹೀಗೆ ರಾಮನು ರಾಜ್ಯಭಾರಮಾಡುತ್ತಿರಲು ಪುರೋಹಿತನಾದ ಅಗಸ್ತ್ಯನು ಆ

ಅಗಸ್ತ್ಯಃ ಕುಂಭಸಂಭೂತಿಸ್ತಮಾಗಂತಾ ರಘೋಃ ಪತಿಂ ।
ತದ್ವಾಕ್ಯಾದ್ರಘುನಾಥೋಽಸೌ ಕರಿಷ್ಯತಿ ಹಯಕ್ರತುಂ ॥ ೮೦ ॥

ತಸ್ಯಾಽಽಗಮಿಷ್ಯತಿ ಹಯ ಆಶ್ರಮೇ ತವ ಸುವ್ರತ ।
ತಸ್ಯ ಯೋಧಾಃ ಪ್ರಮುದಿತಾ ಆಯಾಸ್ಯಂತಿ ತವಾಶ್ರಮೇ ॥ ೮೧ ॥

ತೇಷಾಮಗ್ರೇ ರಾಮಕಥಾಃ ಕರಿಷ್ಯಸಿ ಮನೋಹರಾಃ ।
ತೈಸ್ಸಾಕಂ ತ್ವಮಯೋಧ್ಯಾಯಾಂ ಗಂತಾಸಿ ತ್ವಂ ದ್ವಿಜರ್ಷಭ ॥ ೮೨ ॥

ದೃಷ್ಟ್ವಾ ರಾಮಮಯೋಧ್ಯಾಯಾಂ ಪದ್ಮಪತ್ರನಿಭೇಕ್ಷಣಂ ।
ತತ್ಕ್ಷಣಾದೇವ ಸಂಸಾರವಾರ್ಧಿನಿಸ್ತಾರವಾನ್ಭವ ॥ ೮೩ ॥

ಇತ್ಯುಕ್ತ್ವಾ ಮಾಂ ಮುನಿವರೋ ಲೋಮಶಃ ಸರ್ವಬುದ್ಧಿಮಾನ್ ।
ಉವಾಚ ತೇ ಕಿಂ ಪ್ರಷ್ಟವ್ಯಂ ತದಹಮುವದಂ ಹಿತಂ ॥ ೮೪ ॥

ಜ್ಞಾತಂ ತ್ವತ್ಕೃಪಯಾ ಸರ್ವಂ ರಾಮಚಾರಿತ್ರಮುದ್ಭುತಂ ।
ತ್ವತ್ಪ್ರಸಾದಾದವಾಪ್ಸ್ಯೇಽಹಂ ರಾಮಸ್ಯ ಚರಣಾಂಬುಜಂ ॥ ೮೫ ॥

---

ರಾಮನ ಬಳಿಗೆ ಬಂದನು. ಆ ಅಗಸ್ತ್ಯನ ಮಾತಿನಂತೆ ಅಶ್ವಮೇಧವನ್ನು ಮಾಡಲು ಪಕ್ರಮಿಸಿದನು.

೮೧. ಆ ಕುದುರೆಯು ನಿನ್ನ ಆಶ್ರಮಕ್ಕೆ ಬರುತ್ತದೆ. ಅದನ್ನು ರಕ್ಷಿಸುವ ಯೋಧರು ನಿನ್ನ ಆಶ್ರಮಕ್ಕೆ ಬರುತ್ತಾರೆ

೮೨. ಅವರೆದುರಿಗೆ ರಾಮಕಥೆಯನ್ನು ಬಹುವಾಗಿ ಪ್ರಸ್ತಾಪಿಸುತ್ತೀಯೆ ಮತ್ತು ಅವರೊಡನೆ ನೀನು ಅಯೋಧ್ಯೆಗೆ ಹೋಗುತ್ತೀಯೆ.

೮೩. ಅಲ್ಲಿ ಕಮಲಾಕ್ಷನಾದ ರಾಮನ ದರ್ಶನಮಾಡಿ ಒಡನೆಯೇ ಈ ಸಂಸಾರ ವೆಂಬ ಸಮುದ್ರವನ್ನು ದಾಟುತ್ತೀಯೆ.

೮೪. ಸರ್ವಜ್ಞನಾದ ಲೋಮಶನು ಹೀಗೆ ನನಗೆ ಹೇಳಿ, ರಾಮಚರಿತೆಯೆಲ್ಲ ವನ್ನೂ ಹೇಳಿದ್ದೇನೆ, ಇನ್ನೇನು ಕೇಳುತ್ತೀಯೆ ಎಂದನು.

೮೫. ರಾಮಚಂದ್ರನ ಚರಿತ್ರೆಯು ನಿನ್ನ ಕೃಪೆಯಿಂದ ತಿಳಿಯಿತು. ನಿನ್ನ ಅನುಗ್ರಹದಿಂದ ರಾಮನ ಪಾದಾರವಿಂದವನ್ನು ಹೊಂದುತ್ತೇನೆ.

ಮಯಾ ನಮಸ್ಕೃತಃ ಪಶ್ಚಾಜ್ಜಗಾಮ ಸ ಮುನೀಶ್ವರಃ ।
ತತ್ಪ್ರಸಾದಾನ್ಮಯಾ ಪ್ರಾಪ್ತಂ ರಾಮಸ್ಯ ಚರಣಾರ್ಚನಂ ॥ ೮೬ ॥

ಸೋಽಹಂ ಸ್ಮರಾಮಿ ರಾಮಸ್ಯ ಚರಣಾವನ್ವಹಂ ಮುಹುಃ ।
ಗಾಯಾಮಿ ತಸ್ಯ ಚಾರಿತ್ರಂ ಮುಹುರ್ಮುಹುರತಂದ್ರಿತಃ ॥ ೮೭ ॥

ಪಾವಯಾಮಿ ಜನಾನನ್ಯಾನ್ ಗಾನೇನ ಸ್ವಾಂತಹಾರಿಣಾಂ ।
ಹೃಷ್ಯಾಮಿ ತನ್ಮುನೇರ್ವಾಕ್ಯಂ ಸ್ಮಾರಂ ಸ್ಮಾರಂ ತದೀಕ್ಷಯಾ ॥ ೮೮ ॥

ಧನ್ಯೋಽಹಂ ಕೃತಕೃತ್ಯೋಽಹಂ ಸಭಾಗ್ಯೋಽಹಂ ಮಹೀತಳೇ ।
ರಾಮಚಂದ್ರಪದಾಂಭೋಜದಿದೃಕ್ಷಾ ಮೇ ಭವಿಷ್ಯತಿ ॥ ೮೯ ॥

ತಸ್ಮಾತ್ಸರ್ವಾತ್ಮನಾಂ ರಾಮೋ ಭಜನೀಯೋ ಮನೋಹರಃ ।
ವಂದನೀಯೋ ಹಿ ಸರ್ವೇಷಾಂ ಸಂಸಾರಾಬ್ಧಿತಿತೀರ್ಷಯಾ ॥ ೯೦ ॥

ತಸ್ಮಾದ್ಯೂಯಂ ಕಿಮರ್ಥಂ ವೈ ಪ್ರಾಪ್ತಃ ಕೋ ವಾ ನರಾಧಿಪಃ ।
ಯಾಗಂ ಕರೋತಿ ಧರ್ಮಾತ್ಮಾ ಹಯಮೇಧಂ ಮಹಾಕ್ರತುಂ ॥ ೯೧ ॥

---

೮೬. ನಾನು ನಮಸ್ಕರಿಸಲು ಆ ಋಷಿಯು ಹೊರಟುಹೋದನು. ಹೀಗೆ ಅವನ ಅನುಗ್ರಹದಿಂದ ರಾಮಪಾದಪೂಜೆಯು ಸಿಕ್ಕಿತು.

೮೭. ಆ ನಾನು ರಾಮಪಾದವನ್ನು ದಿನವೂ ಪದೇಪದೇ ಸ್ಮರಿಸುತ್ತಿರುತ್ತೇನೆ. ಅವನ ಚರಿತ್ರೆಯನ್ನು ಬಾರಿಬಾರಿಗೂ ಗಾನಮಾಡುತ್ತೇನೆ.

೮೮. ಆ ಗಾನದಿಂದ ಮತ್ತೊಬ್ಬರನ್ನು ಪವಿತ್ರವನ್ನಾಗಿ ಮಾಡುತ್ತೇನೆ. ಆ ಋಷಿಯ ವಾಕ್ಯವನ್ನು ಸ್ಮರಿಸಿ ಸ್ಮರಿಸಿ ಸಂತೋಷಗೊಳ್ಳುತ್ತೇನೆ.

೮೯. ನಾನೇ ಧನ್ಯನು, ನಾನೇ ಕೃತಕೃತ್ಯನು, ಲೋಕದಲ್ಲಿ ನಾನೇ ಭಾಗ್ಯವಂತನು. ಏಕೆಂದರೆ ರಾಮಚಂದ್ರನ ಪಾದಗಳನ್ನು ನೋಡುವ ಆಶೆ ನನಗೆ ಹುಟ್ಟಿದೆ.

೯೦. ಆದ್ದರಿಂದ ಸರ್ವಪ್ರಕಾರದಿಂದಲೂ ರಾಮನನ್ನು ಭಜಿಸಬೇಕು. ಸಂಸಾರವನ್ನು ದಾಟಬೇಕೆಂದಿರುವವರೆಲ್ಲರೂ ಅವನನ್ನು ಸೇವಿಸಲಿ.

೯೧-೯೨. ನೀವೇತಕ್ಕೆ ಬಂದಿರಿ? ಅಶ್ವಮೇಧವನ್ನು ಮಾಡುವ ಧರ್ಮಾತ್ಮ

ತತ್ಸರ್ವಂ ಕಥಯಂತ್ವತ್ರ ಯಾಂತು ವಾಹಸ್ಯ ಪಾಲನೇ ।
ಸ್ಮರಂತು ರಘುನಾಥಾಂಘ್ರಿಂ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ॥ ೯೨ ॥

ಇತಿ ವಾಕ್ಯಂ ಸಮಾಕರ್ಣ್ಯ ಮುನೇರ್ವಿಸ್ಮಯಮಾಗತಾಃ ।
ರಘುನಾಥಂ ಸ್ಮರಂತಸ್ತೇ ಪ್ರೋಚುರಾರಣ್ಯಕಂ ಮುನಿಂ ॥ ೯೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಶ್ರೀ ರಾಮಚಂದ್ರಚರಿತ್ರಕಥನಂ
ನಾಮ ಷಟ್‌ತ್ರಿಂಶೋಽಧ್ಯಾಯಃ



---

ನಾದ ರಾಜನಾರು? ಅದೆಲ್ಲವನ್ನೂ ಹೇಳಿ. ಆಮೇಲೆ ಕುದುರೆಯ ಕಾವಲಿಗೆ ಹೋಗಿರಿ. ರಾಮಪಾದಾಬ್ಜವನ್ನು ಪದೇಪದೇ ಸ್ಮರಿಸಿ.

೯೩. ಮುನಿಯ ಈ ಮಾತನ್ನು ಕೇಳಿ ಆಶ್ಚರ್ಯಪಟ್ಟು ರಾಮನ್ನು ಸ್ಮರಿಸುತ್ತ ಅವರು ಆ ಆರಣ್ಯಕನನ್ನು ಕುರಿತು ಇಂತೆಂದರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಶ್ರೀ ರಾಮಚಂದ್ರಚಾರಿತ್ರಕಥನವೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಸಪ್ತತ್ರಿಂಶೋಽಧ್ಯಾಯಃ

॥ ಶೇಷ ಉವಾಚ ॥

ತೇ ಪೃಷ್ಟಾ ಮುನಿವರ್ಯೇಣ ರಾಮಚಾರಿತ್ರಮುತ್ತಮಂ ।
ಧನ್ಯಂ ಸಭಾಗ್ಯಂ ಮನ್ವಾನಾಃ ಪ್ರೋಚುರಾತ್ಮಾನಮಾದರಾತ್ ॥ ೧ ॥

॥ ಜನಾ ಊಚುಃ ॥

ಪವಿತ್ರಿತಾ ವಯಂ ಸರ್ವೇ ದರ್ಶನೇನ ತವಾಧುನಾ ।
ಯದ್ರಾಮಕಥಯಾಸ್ಮಾನ್ವೈ ಪಾವಯಸ್ಯಧುನಾ ಜನಾನ್ ॥ ೨ ॥

ಶೃಣುಷ್ವ ವಚನಂ ತಥ್ಯಂ ಭವನ್ ಬ್ರಹ್ಮರ್ಷಿಸತ್ತಮ ।
ತ್ವಯಾ ಪೃಷ್ಟಂ ಯದಸ್ಮಭ್ಯಂ ಸರ್ವಂ ತತ್ಕಥಯಾಮ ವೈ ॥ ೩ ॥

---

## ಮೂವತ್ತೇಳನೆಯ ಅಧ್ಯಾಯವು

೧. ಶೇಷನು ಹೇಳಿದನು:—ಆ ಋಷಿಯಿಂದ ರಾಮಚರಿತ್ರೆಯನ್ನು ಕೇಳಿ ತಮ್ಮನ್ನು ಧನ್ಯರನ್ನಾಗಿಯೂ, ಭಾಗ್ಯವಂತರನ್ನಾಗಿಯೂ ತಿಳಿದುಕೊಂಡು ತಮ್ಮ ವಿಷಯವನ್ನು ಹೇಳಿದರು.

೨. ಜನಗಳು ಹೇಳಿದರು:—ರಾಮಕಥೆಯಿಂದ ನಮ್ಮನ್ನು ನೀನು ಪಾವನ ಮಾಡಿರುತ್ತೀಯಾದ್ದರಿಂದ ನಿನ್ನ ದರ್ಶನದಿಂದಲೇ ನಾವು ಪವಿತ್ರರಾಗಿದ್ದೇವೆ.

೩. ಎಲೈ! ಋಷಿಯೇ, ನಿಶ್ಚಯವನ್ನು ಹೇಳುತ್ತೇವೆ. ನೀನು ನಮ್ಮನ್ನು ಏನನ್ನು ಕೇಳಿದೆಯೋ ಅವೆಲ್ಲವನ್ನೂ ಹೇಳುತ್ತೇವೆ. ಕೇಳು.

ಅಗಸ್ತ್ಯವಾಕ್ಯಾಚ್ಛ್ರೀರಾಮೋ ವಿಪ್ರಹತ್ಯಾಪನುತ್ತಯೇ ।
ಯಾಗಂ ಕರೋತಿ ಸುಮಹಾನ್ ಸರ್ವಸಂಭಾರಸಂಸ್ಕೃತಂ ॥ ೪ ॥

ತಂ ಪಾಲಯಾನಾಸ್ಸರ್ವೇ ವೈ ತ್ವದಾಶ್ರಮಮುಪಾಗತಾಃ ।
ಅಶ್ವೇನ ಸಹಿತಾ ವಿಪ್ರ ತಜ್ಜಾನೀಹಿ ಮಹಾಮತೇ ॥ ೫ ॥

ಇತಿ ವಾಕ್ಯಂ ಸಮಾಕರ್ಣ್ಯ ಮನೋಹಾರಿ ರಸಾಯನಂ ।
ಅತ್ಯಂತಂ ಹರ್ಷಮಾಪೇದೇ ಬ್ರಾಹ್ಮಣೋ ರಾಮಭಕ್ತಿಮಾನ್ ॥ ೬ ॥

ಅದ್ಯ ಮೇ ಫಲಿತೋ ವೃಕ್ಷೋ ಮನೋರಥಶ್ರಿಯಾನ್ವಿತಃ ।
ಅದ್ಯ ಮೇ ಜನನೀ ಮಾಂ ಯತ್ಸುಷುವೇ ತದಭೂದ್ಧೃತಂ ॥ ೭ ॥

ಅದ್ಯ ರಾಜ್ಯಂ ಮಯಾ ಪ್ರಾಪ್ತಂ ಕಂಟಕೈಶ್ಚ ವಿವರ್ಜಿತಂ ।
ಅದ್ಯ ಕೋಶಾಸ್ಸುಸಂಪನ್ನಾ ಅದ್ಯ ದೇವಾಸ್ಸುತೋಷಿತಾಃ ॥ ೮ ॥

ಅಗ್ನಿಹೋತ್ರಫಲಂ ತ್ವದ್ಯ ಪ್ರಾಪ್ತಂ ಮೇ ಹವಿಷಾ ಹುತಂ ।
ಯದ್ದ್ರಕ್ಷ್ಯೇ ರಾಮಚಂದ್ರಸ್ಯ ಚರಣಾಂಭೋರುಹೋರ್ಯುಗಂ ॥ ೯ ॥

---

೪. ಅಗಸ್ತ್ಯನ ಮಾತಿನಂತೆ ಶ್ರೀರಾಮನು ಬ್ರಹ್ಮಹತ್ಯೆಯನ್ನು ಕಳೆಯುಕೊಳ್ಳಲು ಎಲ್ಲಾ ಪದಾರ್ಥಗಳಿಂದ ಕೂಡಿಕೊಂಡು ಅಶ್ವಮೇಧಯಾಗವನ್ನು ಮಾಡುತ್ತಾನೆ.

೫. ಅವನ ಯಾಗದ ಕುದುರೆಯನ್ನು ಪಾಲಿಸುತ್ತಾ ಆ ಕುದುರೆಯೊಡನೆ ನಿನ್ನ ಆಶ್ರಮಕ್ಕೆ ಬಂದಿದ್ದೇವೆ.

೬ ಮನೋಹರವಾದ ರಸಾಯನದಂತಿರುವ ಈ ಮಾತನ್ನು ಕೇಳಿ ಆ ರಾಮ ಭಕ್ತನಾದ ಆರಣ್ಯಕನು ಬಹು ಸಂತೋಷಪಟ್ಟನು.

೭. ಈಗ ಇಷ್ಟಾರ್ಥದಿಂದ ಕೂಡಿದ ನನ್ನ ವೃಕ್ಷವು ಫಲಿಸಿತು. ಈಗ ನನ್ನ ತಾಯಿಯು ನನ್ನನ್ನು ಹೆತ್ತುದು ಸಾರ್ಥಕವಾಯಿತು.

೮. ಇಂದು ತೊಂದರೆಗಳಿಂದ ಬಿಡಲ್ಪಟ್ಟ ರಾಜ್ಯವು ಸಿಕ್ಕಿದಂತಾಯಿತು. ಇಂದು ಬೊಕ್ಕಸವು ತುಂಬಿತು. ಇಂದು ದೇವರಪೂಜೆ ಸಾರ್ಥಕವಾಯಿತು.

೯. ಹವಿಸ್ಸನ್ನು ಹೋಮಮಾಡಿದ ಅಗ್ನಿಹೋತ್ರಫಲವು ಇಂದು ಪ್ರಾಪ್ತವಾಯಿತು. ಏಕೆಂದರೆ ರಾಮಚಂದ್ರನ ಚರಣಗಳನ್ನು ನೋಡುತ್ತೇನೆ.

ಯೋ ನಿತ್ಯಂ ಧ್ಯಾಯತೇ ಸ್ವಾಂತೇ ಅಯೋಧ್ಯಾಯಾಃ ಪತಿಃ ಪ್ರಭುಃ ।
ಸ ಮೇ ದೃಗ್ಗೋಚರೋ ನೂನಂ ಭವಿಷ್ಯತಿ ಮನೋಹರಃ ॥ ೧೦ ॥

ಹನೂಮಾನ್ಮಾಂ ಸಮಾಲಿಂಗ್ಯ ಪ್ರಕ್ಷ್ಯತೇ ಕುಶಲಂ ಮಮ ।
ಭಕ್ತಿಂ ಮೇ ಮಹತೀಂ ದೃಷ್ಟ್ವಾ ತೋಷಂ ಪ್ರಾಪ್ಸ್ಯತಿ ಸತ್ತಮಃ ॥ ೧೧ ॥

ಇತಿ ವಾಕ್ಯಂ ಸಮಾಕರ್ಣ್ಯ ಹನೂಮಾನ್ಕಪಿಸತ್ತಮಃ ।
ಜಗ್ರಾಹ ಪಾದಯುಗಳಂ ಮುನೇರಾರಣ್ಯಕಸ್ಯ ಹ ॥ ೧೨ ॥

ಸ್ವಾಮಿನ್ಹನೂಮಾನ್ವಿಪ್ರರ್ಷೇ ಸೇವಕೋಽಹಂ ಪುರಃ ಸ್ಥಿತಃ ।
ಜಾನೀಹಿ ರಾಮದಾಸಸ್ಯ ರೇಣುಕಲ್ಪಂ ಮುನೀಶ್ವರ ॥ ೧೩ ॥

ಇತ್ಯುಕ್ತವತಿ ತಸ್ಮಿನ್ವೈ ಮುನಿಃ ಪರಮಹರ್ಷಿತಃ ।
ಆಲಿಲಿಂಗ ಹನೂಮಂತಂ ರಾಮಭಕ್ತ್ಯಾ ಸುಶೋಭಿತಂ ॥ ೧೪ ॥

ಉಭೌ ಪ್ರೇಮವಿನಿರ್ಭಿನ್ನಾವುಭಾವಪಿ ಸುಧಾಪ್ಲುತೌ ।
ಸ್ಥಗಿತೌ ಚಿತ್ರಲಿಖಿತಾವಿವ ತತ್ರ ಬಭೂವತುಃ ॥ ೧೫ ॥

---

೧೦. ಯಾವ ಅಯೋಧ್ಯಾಧಿಪತಿಯಾದ ರಾಮನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಿರುತ್ತೇನೆಯೋ ಅವನನ್ನೇ ಖಂಡಿತವಾಗಿಯೂ ಕಣ್ಣಿನಿಂದಲೇ ನೋಡುತ್ತೇನೆ.

೧೧. ಹನುಮಂತನು ನನ್ನನ್ನು ಆಲಿಂಗಿಸಿಕೊಂಡು ಕುಶಲವನ್ನು ಕೇಳುತ್ತಾನೆ. ನನ್ನಲ್ಲಿರುವ ಭಕ್ತಿಯನ್ನು ನೋಡಿ ಆ ಪುಣ್ಯಾತ್ಮನು ಸಂತೋಷಗೊಳ್ಳುತ್ತಾನೆ.

೧೨. ಈ ಮಾತನ್ನು ಕೇಳಿ ಹನುಮಂತನು ಆ ಆರಣ್ಯಕನ ಪಾದಗಳನ್ನು ಹಿಡಿದುಕೊಂಡನು.

೧೩. ಸ್ವಾಮಿ! ಋಷಿಗಳೇ, ನಾನು ರಾಮಸೇವಕನಾದ ಹನುಮಂತನು ಎದುರಿಗೆ ನಿಂತಿದ್ದೇನೆ. ರಾಮದಾಸರಲ್ಲಿ ಆ ಅಣುಮಾತ್ರದವನೇ ನಾನು ಎಂದು ತಿಳಿ.

೧೪. ಅವನು ಹೀಗೆ ಹೇಳುತ್ತಿರುವಾಗಲೇ ಋಷಿಯು ರಾಮಭಕ್ತನಾದ ಆತನನ್ನು ಆಲಂಗಿಸಿಕೊಂಡನು.

೧೫. ಇಬ್ಬರೂ ಪ್ರೇಮದಿಂದ ಒಂದಾಗಿದ್ದರು. ಇಬ್ಬರೂ ಅಮೃತದಿಂದ ನೆನೆಯಲ್ಪಟ್ಟರು. ಹೀಗಾಗಿ ಆ ಇಬ್ಬರೂ ಚಿತ್ರದ ಗೊಂಬೆಗಳಂತೆ ಅಲುಗಾಡದೆ ಇದ್ದರು.

ಉಪವಿಷ್ಟೌ ಕಥಾಸ್ತಸ್ಯ ಚಕ್ರತುಸ್ಸುಮನೋಹರಾಃ ।
ರಘುನಾಥಪದಾಂಭೋಜಪ್ರೀತಿನಿರ್ಭರಮಾನಸೌ ॥ ೧೬ ॥

ಹನೂಮಾಂಸ್ತಮುವಾಚೇದಂ ವಚೋ ವಿವಿಧಶೋಭನಂ ।
ಆರಣ್ಯಕಂ ಮುನಿವರಂ ರಾಮಾಂಘ್ರಿಧ್ಯಾನನಿರ್ಭೃತಂ ॥ ೧೭ ॥

ಸ್ವಾಮಿನ್ನಯಂ ದಶರಥಕುಲಹೀರಾಂಕುರೋ ಮಹಾನ್ ।
ರಾಮಭ್ರಾತಾ ಮಹಾಶೂರಃ ಶತ್ರುಘ್ನಃ ಪ್ರಣಮತ್ಯಸೌ ॥ ೧೮ ॥

ಲವಣೋ ಯೇನ ನಿಹತಃ ಸರ್ವಲೋಕಭಯಂಕರಃ ।
ಕೃತಾಶ್ಚ ಸುಖಿನಸ್ಸರ್ವೇ ಮುನಯಸ್ಸುತಪೋಧನಾಃ ॥ ೧೯ ॥

ಏಷ ಪುಷ್ಕಲನಾಮಾ ತ್ವಾಂ ನಮತ್ಯುದ್ಭಟಸೇವಿತಃ ।
ಯೇನಾಧುನಾ ಮಹಾವೀರಾ ಜಿತಾಸ್ಸಮರಮಂಡಲೇ ॥ ೨೦ ॥

ಜಾನೀಹ್ಯೇತಂ ಬಹುಗುಣಂ ರಾಮಾಮಾತ್ಯಂ ಮಹಾಬಲಂ ।
ಪ್ರಾಣಪ್ರಿಯಂ ರಘುಪತೇಃ ಸರ್ವಜ್ಞಂ ಧರ್ಮಕೋವಿದಂ ॥ ೨೧ ॥

---

೧೬. ರಾಮನ ಪಾದಗಳಲ್ಲಿಯೇ ಮನಸ್ಸಿಟ್ಟುಕೊಂಡವರಾಗಿ ಕುಳಿತುಕೊಂಡು ಅವನ ಕಥೆಗಳನ್ನು ಹೇಳತೊಡಗಿದರು.

೧೭. ರಾಮನ ಪಾದದ ಧ್ಯಾನದಲ್ಲಿ ಆಸಕ್ತನಾದ ಆ ಆರಣ್ಯಕನನ್ನು ಕುರಿತು ಹನುಮಂತನು ನಾನಾಬಗೆಯಾದ ಮಾತುಗಳನ್ನಾಡಿದನು.

೧೮. ಸ್ವಾಮಿ, ಇವನು ದಶರಥನ ಮಗನು. ರಾಮನ ಸಹೋದರನು. ಹೆಸರು ಶತ್ರುಘ್ನನೆಂದು. ತಮಗೆ ನಮಸ್ಕರಿಸುತ್ತಾನೆ.

೧೯. ಇವನು ಮಹಾಶೂರನು. ಸರ್ವಲೋಕಗಳಿಗೂ ಭಯಂಕರನಾದ ಲವಣಾಸುರನನ್ನು ಕೊಂದು ತಪಸ್ವಿಗಳಿಗೂ ಲೋಕಕ್ಕೂ ಸುಖವನ್ನುಂಟುಮಾಡಿದನು.

೨೦. ಇವನು ಪುಷ್ಕಲನು. ಮಹಾವೀರರೆಲ್ಲರೂ ಇವನನ್ನು ಸೇವಿಸುತ್ತಾರೆ. ಇವನು ಈಗ ಯುದ್ಧದಲ್ಲಿ ಮಹಾವೀರರನ್ನೆಲ್ಲಾ ಜಯಿಸಿದ್ದಾನೆ.

೨೧. ಇವನು ರಾಮನಿಗೆ ಪ್ರಾಣಪ್ರಿಯನು. ಈ ಮಂತ್ರಿಯು ಮಹಾಬಲಿಷ್ಠನು. ಸರ್ವಜ್ಞನು. ಧರ್ಮದಲ್ಲಿ ನಿಪುಣನು.

ಸುಬಾಹುರಯಮತ್ಯುಗ್ರೋ ವೈರಿವಂಶದವಾನಲಃ ।
ರಾಮಪಾದಾಬ್ಜರೋಲಂಬೋ ನಮತಿ ತ್ವಾಂ ಮಹಾಯಶಾಃ ॥ ೨೨ ॥

ಸುಮದೋಽಸ್ಯೇಷ ಪಾರ್ವತ್ಯಾ ದತ್ತರಾಮಾಂಘ್ರಿಸೇವಯಾ ।
ಪ್ರಾಪ್ತೋಽಧುನಾ ಸ್ವಸಂಸಾರವಾರ್ಧಿನಿಸ್ತರಣಂ ಮಹಾನ್ ॥ ೨೩ ॥

ಸತ್ಯವಾನ್ ರಾಮಮಶ್ವಂ ಯಃ ಪ್ರಾಪ್ತಮಾಶ್ರುತ್ಯ ಸೇವಕಾತ್ ।
ರಾಜ್ಯಂ ನಿವೇದಯಾಮಾಸ ಸ ತ್ವಾಂ ಪ್ರಣಮತಿ ಕ್ಷಿತೌ ॥ ೨೪ ॥

ಇತಿ ವಾಕ್ಯಂ ಸಮಾಕರ್ಣ್ಯ ಸಮಾಲಿಂಗಸಮಾದರಾತ್ ।
ಚಕಾರಾರಣ್ಯಕ ಋಷಿಃ ಸ್ವಾಗತಂ ಫಲಕಾದಿನಾ ॥ ೨೫ ॥

ತೇ ಹೃಷ್ಟಾಸ್ತತ್ರ ವಸತಿಂ ಚಕ್ರುರ್ಮುನಿವರಾಶ್ರಮೇ ।
ಪ್ರಾತರ್ನಿತ್ಯಕ್ರಿಯಾಂ ಕೃತ್ವಾ ರೇವಾಯಾಂ ತೇ ಮಹೋದ್ಯಮಾಃ ॥ ೨೬ ॥

ನರಯಾನಮಥಾರೋಪ್ಯ ಸೇವಕೈಸ್ಸಹಿತಂ ಮುನಿಂ ।
ಶತ್ರುಘ್ನಃ ಪ್ರಾಪಯಾಮಾಸಾಯೋಧ್ಯಾಂ ರಾಮಕೃತಾಲಯಾಂ ॥ ೨೭ ॥

---

೨೨. ಇವನು ಸುಬಾಹುವು. ವೈರಿಗಳಿಗೆ ಕಾಳ್ಕಿಚ್ಚಿನಂತಿರುವನು. ರಾಮನ ಪಾದವೆಂಬ ಕಮಲದ ದುಂಬಿಯು. ನಿನ್ನನ್ನು ನಮಸ್ಕರಿಸುತ್ತಾನೆ.

೨೩. ಇವನು ಸುಮದನು. ಪಾರ್ವತಿಯು ಇವನಿಗೆ ರಾಮಾಂಘ್ರಿಯನ್ನು ಸೇವಿಸುವಂತೆ ವರವನ್ನು ಕೊಟ್ಟಿದ್ದಾಳೆ. ಈ ಸಂಸಾರವನ್ನು ದಾಟಿದ್ದಾನೆ.

೨೪. ಇವನು ಸತ್ಯವಂತನೆಂಬ ರಾಜನು. ಶ್ರೀರಾಮನ ಕುದುರೆಯು ಬಂದುದನ್ನು ಕೇಳಿದ ಕೂಡಲೆ ರಾಜ್ಯವನ್ನು ಅವನಿಗೆ ಅರ್ಪಿಸಿದನು. ನಿನಗೆ ನಮಸ್ಕರಿಸುತ್ತಾನೆ.

೨೫. ಇದನ್ನು ಕೇಳಿ ಆ ಋಷಿಯು ಅವರನ್ನು ಆಲಂಗಿಸಿಕೊಂಡು ಹಣ್ಣುಗಳನ್ನು ಕೊಟ್ಟು ಸ್ವಾಗತಿಸಿದನು.

೨೬-೨೭. ಅವರೆಲ್ಲರೂ ಸಂತೋಷಗೊಂಡು ಆ ಆಶ್ರಮದಲ್ಲಿ ಅಂದಿನ ರಾತ್ರಿಯಿದ್ದು ಬೆಳಿಗ್ಗೆ ರೇವಾನದಿಯಲ್ಲಿ ನಿತ್ಯಕರ್ಮವನ್ನು ಮಾಡಿಕೊಂಡರು. ಶತ್ರುಘ್ನನು ಆ ಋಷಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಅಯೋಧ್ಯೆಗೆ ಸೇವಕರೊಡನೆ ಕಳುಹಿಸಿದನು.

ಸ ದೂರಾಂ ನಗರೀಂ ದೃಷ್ಟ್ವಾ ಸೂರ್ಯವಂಶನೃಪೋಷಿತಾಂ ।
ಪಪಾತಿರಭವದ್ವೇಗಾದ್ರಘುನಾಥದಿದೃಕ್ಷಯಾ ॥ ೨೮ ॥

ಸಂಪ್ರಾಪ್ಯ ನಗರೀಂ ರಮ್ಯಾಮಯೋಧ್ಯಾಂ ಜನಶೋಭಿತಾಂ ।
ಮನೋರಥಸಹಸ್ರೇಣ ಸಂರೂಢೋ ರಾಮದರ್ಶನೇ ॥ ೨೯ ॥

ದದರ್ಶ ತತ್ರ ಸರಯೂತೀರೇ ಮಂಡಪಶೋಭಿತೇ ।
ರಾಮಂ ದೂರ್ವಾದಳಶ್ಯಾಮಂ ಕಂಜಕಾಂತಿವಿಲೋಚನಂ ॥ ೩೦ ॥

ಮೃಗಶೃಂಗಂ ಕಟೌ ರಮ್ಯಂ ಧಾರಯಂತಂ ಶ್ರಿಯಾನ್ವಿತಂ ।
ಋಷಿವೃಂದೈರ್ವ್ಯಾಸಮುಖ್ಯೈರ್ವೃತಂ ಶೂರೈಸ್ಸುಸೇವಿತಂ ॥ ೩೧ ॥

ಭರತೇನ ಸುಮಿತ್ರಾಯಾಸ್ತನುಜೇನ ಪರಿವೃತಂ ।
ದದತಂ ದೀನಸಂಘೇಭ್ಯೋ ದಾನಾನಿ ಪ್ರಾರ್ಥಿತಾನಿ ತಂ ॥ ೩೨ ॥

ವಿಲೋಕ್ಯಾರಣ್ಯಕಾಹ್ವೋಽಸೌ ಕೃತಾರ್ಥ ಇತ್ಯಮನ್ಯತ ।
ಮಲ್ಲೋಚನೇ ಪದ್ಮದಳಸಮಾನೇ ರಾಮಲೋಕಕೇ ॥ ೩೩ ॥

---

೨೮. ಆ ರಾಮನಿರುವ ಅಯೋಧ್ಯೆಯನ್ನು ದೂರದಲ್ಲಿಯೇ ಕಂಡು ರಾಮನನ್ನು ನೋಡಬೇಕೆಂಬ ಆಸೆಯಿಂದ ಕಾಲಿನ ನಡಿಗೆಯಿಂದಲೇ ಜಾಗ್ರತೆಯಾಗಿ ಹೊರಟನು.

೨೯-೩೦. ಜನಗಳಿಂದ ನಿಬಿಡವಾದ ಅಯೋಧ್ಯೆಯನ್ನು ರಾಮದರ್ಶನಕುತೂಹಲದಿಂದ ಸೇರಿ, ಅಲ್ಲಿ ಸರಯೂನದಿಯ ದಡದಲ್ಲಿ ಯಾಗಮಂಡಪದಲ್ಲಿ ಮನೋಹರವಾದ ಕಾಂತಿಯುಳ್ಳ ರಾಮನನ್ನು ನೋಡಿದನು.

೩೧-೩೨. ಜಿಂಕೆಯ ಕೊಂಬನ್ನು ನಡುವಿನಲ್ಲಿ ಕಟ್ಟಿಕೊಂಡು ವ್ಯಾಸಾದಿ ಋಷಿಗಳೊಡನೆಯೂ ಶೂರರೊಡನೆಯೂ ಭರತನೊಡನೆಯೂ ಕೂಡಿಕೊಂಡು ದೀನರಿಗೆ ಕೇಳಿದುದನ್ನು ಕೊಡುತ್ತಿರುವ ಆ ಶ್ರೀರಾಮನನ್ನು ನೋಡಿದನು.

೩೩. ರಾಮನನ್ನು ನೋಡಿ ತನ್ನನ್ನು ಕೃತಾರ್ಥನನ್ನಾಗಿ ತಿಳಿದುಕೊಂಡನು. ತನ್ನ ಕಣ್ಣುಗಳು ಪದ್ಮದಳಸಮಾನವೆಂದೂ ತಿಳಿದನು.

ಅದ್ಯ ಮೇ ಸರ್ವಶಾಸ್ತ್ರಸ್ಯ ಜ್ಞಾತೃತ್ವಂ ಬಹುಸಾರ್ಥಕಂ ।
ಯೇನ ಶ್ರೀರಾಮಮಾಜ್ಞಾಯ ಪ್ರಾಪ್ತೋಽಯೋಧ್ಯಾಂ ಪುರೀಮಿಮಾಂ ॥ ೩೪ ॥

ಇತ್ಯೇವಮಾದಿವಚನಾನಿ ಬಹೂನಿ ಪೃಷ್ಟೋ
ರಾಮಾಂಘ್ರಿದರ್ಶನಸುಹರ್ಷಿತಗಾತ್ರಶೋಭೀ ।
ಪ್ರಾಯಾದ್ರಮೇಶ್ವರಸಮೀಪಮಗಮ್ಯಮನ್ಯೈ
ರ್ಯೋಗೇಶ್ವರೈರಪಿ ವಿಚಾರಪರೈಸ್ಸುದೂರಂ ॥ ೩೫ ॥

ಧನ್ಯೋಽಹಮದ್ಯ ರಾಮಸ್ಯ ಚರಣಾವಕ್ಷಿಗೋಚರೌ ।
ಕರಿಷ್ಯಾಮಿ ವಚೋ ರಮ್ಯಂ ವದನ್ರಾಮಮವೇಕ್ಷಯನ್ ॥ ೩೬ ॥

ರಾಮೋಽಪಿ ಬಾಡಬಶ್ರೇಷ್ಠಂ ಜ್ವಲಂತಂ ಸ್ವೇನ ತೇಜಸಾ ।
ತಪೋಮೂರ್ತಿಧರಂ ವೀಕ್ಷ್ಯ ಪ್ರತ್ಯುತ್ಥಾನಮಥಾಕರೋತ್ ॥ ೩೭ ॥

ರಾಮಚಂದ್ರಸ್ತಸ್ಯ ಪಾದೌ ಸುಚಿರಂ ನತವಾನ್ಮಹಾನ್ ।
ಬ್ರಹ್ಮಣ್ಯದೇವ ಪಾವಿತ್ರ್ಯಂ ಕೃತಮದ್ಯ ತನೋರ್ಮಮ ॥ ೩೮ ॥

---

೩೪. ಅಯೋಧ್ಯೆಗೆ ಬಂದು ಶ್ರೀರಾಮನನ್ನು ನೋಡಿದುದರಿಂದ ನನ್ನ ಸರ್ವಶಾಸ್ತ್ರಜ್ಞಾನವೂ ಸಾರ್ಥಕವಾಯಿತೆಂದುಕೊಂಡನು.

೩೫. ಇವೇ ಮುಂತಾದ ಮಾತುಗಳನ್ನಾಡುತ್ತ ರಾಮನ ಪಾದಗಳನ್ನು ನೋಡುವುದರಲ್ಲಿ ಸಂತೋಷಪಟ್ಟು ಯೋಗೀಶ್ವರರಿಂದಲೂ ಕೂಡ ಹೊಂದಲಸಾಧ್ಯವಾದ ಶ್ರೀರಾಮನ ಸಮೀಪವನ್ನು ಹೊಂದಿದನು.

೩೬. ರಾಮನ ಪಾದಯುಗಳವು ಕಣ್ಣಿಗೆ ಕಂಡುದರಿಂದ ನಾನು ಧನ್ಯನಾದೆನು. ರಾಮನನ್ನು ನೊಡುತ್ತ ಸರಸವಾದ ಮಾತುಗಳನ್ನಾಡುತ್ತೇನೆ.

೩೭. ಬ್ರಾಹ್ಮಣಶ್ರೇಷ್ಠನಾದ, ತೇಜಸ್ವಿಯಾದ, ತಪಸ್ವಿಯಾದ ಆ ಬ್ರಾಹ್ಮಣನನ್ನು ರಾಮನು ನೋಡಿ ಪ್ರತ್ಯುತ್ಥಾನವನ್ನು ಮಾಡಿದನು.

೩೮. ರಾಮನೂ ಕೂಡ ಆ ಆರಣ್ಯಕನ ಪಾದಗಳನ್ನು ನಮಸ್ಕರಿಸಿದನು. ಎಲೈ! ಬ್ರಾಹ್ಮಣೋತ್ತಮನೇ ನನ್ನ ದೇಹವು ಪವಿತ್ರವಾದುದು. ಎಂದನು.

ಇತಿ ವಾಕ್ಯಂ ವದಂಸ್ತಸ್ಯ ಪಾದಯೋಃ ಪತಿತಃ ಪ್ರಭುಃ ।
ಸುರಾಸುರನಮನ್ಮೌಳಿಮಣಿನೀರಾಜಿತಾಂಘ್ರಿಕಃ ॥ ೩೯ ॥

ಪ್ರಣತಂ ತಂ ನೃಪಶ್ರೇಷ್ಠಂ ಬಾಡಬೇಂದ್ರೋ ಮಹಾತಪಾಃ ।
ಗೃಹೀತ್ವಾ ಭುಜಯೋರ್ಮಧ್ಯಮಾಲಿಲಿಂಗ ಪ್ರಿಯಂ ಪ್ರಭುಂ ॥ ೪೦ ॥

ಕೌಸಲ್ಯಾತನಯಸ್ತಂ ವಾ ಉಚ್ಚೈರ್ಮಣಿಮಯಾಸನೇ ।
ಸಂಸ್ಥಾಪ್ಯ ಚ ಪದೋರ್ಯುಗ್ಮಂ ಜಲೇನಾಕ್ಷಾಳಯತ್ಪ್ರಭುಃ ॥ ೪೧ ॥

ಪಾದಾವನೇಜನೋದಂ ತು ಮಸ್ತಕೇಽಧಾದ್ಧರಿಸ್ಸ್ವಯಂ ।
ಪವಿತ್ರಿತೋಽದ್ಯ ಸಗಣಃ ಸಕುಟುಂಬ ಇತಿ ಬ್ರುವನ್ ॥ ೪೨ ॥

ಚಂದನೇನ ವಿಲಿಪ್ಯಾಥ ಗಾಂ ಚ ಪ್ರಾದಾತ್ಪಯಸ್ವಿನೀಂ ।
ಉವಾಚ ಚ ವಚೋ ರಮ್ಯಂ ದೇವದೇವೇಂದ್ರಸೇವಿತಃ ॥ ೪೩ ॥

ಸ್ವಾಮಿನ್ ಮಖೋ ಮಯಾ ವಾಜಿಮೇಧಸಂಜ್ಞಃ ಕ್ರಿಯೇತ ಹ ।
ಸೋಽಯಂ ತ್ವಚ್ಚರಣಾಯಾನಾದದ್ಯ ಪೂರ್ಣೋ ಭವಿಷ್ಯತಿ ॥ ೪೪ ॥

---

೩೯. ದೇವದಾನವರೆಲ್ಲರೂ ನಮಸ್ಕರಿಸುವ ಪಾದಗಳುಳ್ಳ ಆ ರಾಮನು ಹೀಗೆ ಹೇಳುತ್ತ ಆತನ ಪಾದಗಳಿಗೆ ನಮಸ್ಕರಿಸಿದನು.

೪೦. ರಾಮನು ನಮಸ್ಕರಿಸಲು ತಪಸ್ವಿಯಾದ ಆ ಆರಣ್ಯಕನು ಎದೆಯಿಂದ ಅಪ್ಪಿಕೊಂಡನು.

೪೧. ರಾಮನೂ ಕೂಡ ಆತನನ್ನು ಎತ್ತರವಾದ ಆಸನದಲ್ಲಿ ಕೂರಿಸಿ ಪಾದಗಳನ್ನು ತೊಳೆದನು.

೪೨ ಪಾದೋದಕವನ್ನು ರಾಮನು ತಲೆಯಲ್ಲಿ ಧರಿಸಿ ಪರಿವಾರದೊಂದಿಗೆ ಪವಿತ್ರನಾದೆನೆಂದನು.

೪೩. ಚಂದನಗಳನ್ನು ಪೂಸಿ ಗೋವನ್ನು ಕೊಟ್ಟು ಆ ಸ್ವಾಮಿಯು ಇಂತೆಂದನು.

೪೪. ಸ್ವಾಮಿ, ನಾನು ಈಗ ಅಶ್ವಮೇಧಯಾಗವನ್ನು ಮಾಡುತ್ತಿದ್ದೇನೆ. ಅದು ತಮ್ಮ ಪಾದಗಳು ಇಲ್ಲಿ ಬಂದುದರಿಂದ ಪೂರ್ಣವಾಗುತ್ತದೆ.

ಅದ್ಯ ಮೇ ಬ್ರಹ್ಮಹತ್ಯೋತ್ಥಪಾಪಹಾನಿಂ ಕರಿಷ್ಯತಿ ।
ಅಶ್ವಮೇಧಕ್ರತುರ್ಯುಷ್ಮಚ್ಚರಣೇನ ಪವಿತ್ರಿತಃ ॥ ೪೫ ॥

ಇತಿ ವಾಕ್ಯಂ ಬ್ರುವಾಣಂ ತಂ ರಾಜರಾಜೇಂದ್ರಸೇವಿತಂ ।
ಆರಣ್ಯಕ ಉವಾಚೇದಂ ಹಸನ್ಮಾಧ್ವ್ಯಾ ಗಿರಾ ಮುನಿಃ ॥ ೪೬ ॥

ಸ್ವಾಮಿಂಸ್ತವ ತು ಯುಕ್ತಂ ಹಿ ವಚೋ ಬ್ರಹ್ಮಣ್ಯ ಭೂಮಿಪ ।
ತ್ವನ್ಮೂರ್ತಯೋ ಮಹಾರಾಜ ಬ್ರಾಹ್ಮಣಾ ವೇದಪಾಗಾಃ ॥ ೪೭ ॥

ತ್ವಂ ಚೇದ್ಬ್ರಾಹ್ಮಣಪೂಜಾದಿಕರ್ಮಕಾರ್ಯಂ ಕರಿಷ್ಯಸಿ ।
ತತೋಽಖಿಲಾ ನೃಪಾ ವಿಪ್ರಾನ್ ಪೂಜಯಿಷ್ಯಂತಿ ಭೂಮಿಪ ॥ ೪೮ ॥

ತ್ವಯೋಕ್ತಂ ಯನ್ಮಹಾರಾಜ ವಿಪ್ರಹತ್ಯಾಪನುತ್ತಯೇ ।
ಯಾಗಂ ಕರೋಮಿ ವಿಮಲಂ ತತ್ತು ಹಾಸ್ಯಕರಂ ವಚಃ ॥ ೪೯ ॥

---

೪೫. ತಮ್ಮ ಪಾದಧೂಳಿನಿಂದ ಪವಿತ್ರವಾದ ಈ ಅಶ್ವಮೇಧವು ಈಗ ನನ್ನ ಬ್ರಹ್ಮಹತ್ಯಾಪಾಪವನ್ನು ನಾಶಮಾಡುತ್ತದೆ.

೪೬. ರಾಜರಾಜರಿಂದ ಸೇವಿತನಾಗಿ ಹೀಗೆ ಹೇಳುತ್ತಿರುವ ರಾಮನನ್ನು ಕುರಿತು ಆರಣ್ಯಕನು ನಗುತ್ತ ಇಂತೆಂದನು.

೪೭. ಎಲೈ! ಸ್ವಾಮಿಯೇ, ಈ ಮಾತುಗಳು ನಿನಗೆ ಶೋಭಿಸುತ್ತವೆ. ವೇದಪಾರಗರಾದ ಬ್ರಾಹ್ಮಣರು ನಿನ್ನ ಮೂರ್ತಿಗಳಷ್ಟೆ.

೪೮. ನೀನೇ ಬ್ರಾಹ್ಮಣಪೂಜಾದಿಕರ್ಮಗಳನ್ನು ಮಾಡಿದಲ್ಲಿ ಮಿಕ್ಕರಾಜರೂ ಕೂಡ ಬ್ರಾಹ್ಮಣಪೂಜೆಯನ್ನು ಮಾಡುತ್ತಾರೆ.

೪೯. ನೀನು ಹೇಳಿದೆಯಲ್ಲಾ! ಬ್ರಹ್ಮಹತ್ಯಾದೋಷವು ನಾಶವಾಗಲು ಯಾಗ ಮಾಡುತ್ತೇನೆಂದು; ಅದು ಮಾತ್ರ ಹಾಸ್ಯಾಸ್ಪದವಾದ ಮಾತಾಗಿದೆ.

ತ್ವನ್ನಾಮಸ್ಮರಣಾನ್ಮೂಢಃ ಸರ್ವಶಾಸ್ತ್ರವಿವರ್ಜಿತಃ ।
ಸರ್ವಪಾಪಾಬ್ಧಿಮುತ್ತೀರ್ಯ ಸಂಗಚ್ಛೇತ್ಪರಮಂ ಪದಂ ॥ ೫೦ ॥

ಸರ್ವವೇದೇತಿಹಾಸಾನಾಂ ಸಾರಾರ್ಥೋऽಯಮಿತಿ ಸ್ಫುಟಂ ।
ಯದ್ರಾಮನಾಮಸ್ಮರಣಂ ಕ್ರಿಯತೇ ಪಾಪತಾರಕಂ ॥ ೫೧ ॥

ತಾವದ್ಗರ್ಜಂತಿ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ನ ಯಾವತ್ಪ್ರೋಚ್ಯತೇ ರಾಮಚಂದ್ರ ತವ ಸ್ಫುಟಂ ॥ ೫೨ ॥

ತ್ವನ್ನಾಮಗರ್ಜನಂ ಶ್ರುತ್ವಾ ಮಹಾಪಾತಕಕುಂಜರಾಃ ।
ಪಲಾಯಂತೇ ಮಹಾರಾಜ ಕುತ್ರಚಿತ್ಸ್ಥಾನಲಿಪ್ಸಯಾ ॥ ೫೩ ॥

ತಸ್ಮಾತ್ತ್ವ ಕಥಂ ಹತ್ಯಾ ಮಹಾಪುಣ್ಯದದರ್ಶನ ।
ರಾಮ ತ್ವತ್ಸುಕಥಾಂ ಶ್ರುತ್ವಾ ಪೂತಃ ಸರ್ವೋ ಭವಿಷ್ಯತಿ ॥ ೫೪ ॥

---

೫೦. ಶಾಸ್ತ್ರಗಳೊಂದೂ ತಿಳಿಯದಿದ್ದ ಮೂಢನಾದವನು ನಿನ್ನ ನಾಮಸ್ಮರಣೆಯನ್ನು ಮಾಡಿದರೆ ಅವನು ಸರ್ವಪಾಪಗಳನ್ನು ಕಳೆದುಕೊಂಡು ಪರಮಪದವನ್ನು ಹೊಂದುತ್ತಾನೆ.

೫೧. ಎಲ್ಲಾ ವೇದಗಳ ಮತ್ತು ಇತಿಹಾಸಗಳ ಸಾರವಾದ ಅರ್ಥವು ಸ್ಫುಟವಾಗಿಯೂ ಪಾಪನಾಶಕವಾದ ರಾಮಸ್ಮರಣೆಮಾಡುವಿಕೆಯೇ ಆಗಿದೆ.

೫೨. ಬ್ರಹ್ಮಹತ್ಯಾದಿ ಪಾಪಗಳು ರಾಮಚಂದ್ರನ ನಾಮಸ್ಮರಣೆ ಮಾಡುವವರೆಗೂ ಗರ್ಜಿಸುತ್ತವೆ.

೫೩. ಆ ಮಹಾಪಾತಕಗಳೆಂಬ ಆನೆಗಳು ನಿನ್ನ ನಾಮಸ್ಮರಣೆಯನ್ನು ಕೇಳಿದೊಡನೆಯೇ ಎಲ್ಲಾದರೂ ಜಾಗವನ್ನು ಹುಡುಕುತ್ತ ಹೊರಡುತ್ತವೆ.

೫೪. ಆದ್ದರಿಂದ ನೀನು ಪುಣ್ಯದರ್ಶನನು. ನಿನಗೆ ಹತ್ಯೆಯೆಲ್ಲಿ ಬಂದಿತು? ಎಲೈ ರಾಮನೇ, ನಿನ್ನ ಕಥೆಯನ್ನು ಕೇಳಿದರೆ ಎಲ್ಲರೂ ಪವಿತ್ರರಾಗುತ್ತಾರೆ.

ಮಯಾ ಪೂರ್ವಂ ಕೃತಯುಗೇ ಗಂಗಾಯಾಸ್ತೀರವಾಸಿನಾಂ ॥
ಋಷೀಣಾಂ ಮುಖತೋ ವಾಕ್ಯಂ ಶ್ರುತಮಸ್ತಿ ಪುರಾವಿದಾಂ ॥ ೫೫ ॥

ತಾವತ್ಪಾಪಭಿಯಃ ಪುಂಸಾಂ ಕಾತರಾಣಾಂ ಸುಪಾಪಿನಾಂ ।
ಯಾವನ್ನ ವದತೇ ವಾಚಾ ರಾಮನಾಮ ಮನೋಹರಂ ॥ ೫೬ ॥

ತಸ್ಮಾದ್ಧನ್ಯೋಽಹಮಧುನಾ ಮಮ ಸಂಸೃತಿನಾಶನಂ ।
ಸಾಂಪ್ರತಂ ಸುಲಭಂ ರಾಮಚಂದ್ರ ತ್ವದ್ದರ್ಶನಾದಭೂತ್ ॥ ೫೭ ॥

ಇತ್ಯುಕ್ತವಂತಂ ಸ ಮುನಿಂ ಪೂಜಯಾಮಾಸ ತತ್ರ ವೈ ।
ಸರ್ವೇ ಮುನಿಜನಾಸ್ಸಾಧು ಸಾಧು ವಾಕ್ಯಮಿತಿ ಬ್ರುವನ್ ॥ ೫೮ ॥

॥ ಶೇಷ ಉವಾಚ ॥

ಅತ್ರಾಶ್ಚರ್ಯಮಭೂದ್ಯತ್ತು ತನ್ಮೇ ನಿಗದತಃ ಶೃಣು ।
ವಾತ್ಸ್ಯಾಯನ ಮುನಿಶ್ರೇಷ್ಠ ರಾಮಭಕ್ತಿಪರಾಯಣಃ ॥ ೫೯ ॥

---

೫೫. ನಾನು ಹಿಂದೆ ಕೃತಯುಗದಲ್ಲಿ ಗಂಗಾತೀರದಲ್ಲಿದ್ದ ಋಷಿಗಳ ಬಾಯಿಂದ ಕೇಳಿದ್ದೇನೆ.

೫೬. ಮನೋಹರವಾದ ರಾಮನಾಮವನ್ನು ಉಚ್ಚರಿಸುವವರೆಗೂ ಪಾಪಿಗಳಾದ ಮನುಷ್ಯರಿಗೆ ಭಯವಿರುತ್ತದೆ.

೫೭. ಆದ್ದರಿಂದ ಈಗ ನಾನು ಧನ್ಯನು. ನನ್ನ ಜನನಮರಣಗಳು ನಾಶವಾದುವು. ಅದೆಲ್ಲವೂ ರಾಮನೇ! ಈಗ ನಿನ್ನ ದರ್ಶನಮಾಡಿದುದರಿಂದ ಸುಲಭವಾದುವು.

೫೮. ಹೀಗೆ ಹೇಳಿದ ಋಷಿಯನ್ನು ಆ ಶ್ರೀರಾಮನು ಗೌರವಿಸಿದನು. ಎಲ್ಲಾ ಋಷಿಗಳೂ ಸಾಧುಸಾಧು ಎಂದು ಶ್ಲಾಘಿಸಿದರು.

೫೯. ಶೇಷನು ಹೇಳಿದನು:—ಎಲೈ! ವಾತ್ಸ್ಯಾಯನನೇ, ಇಲ್ಲಿ ಉಂಟಾದ ಆಶ್ಚರ್ಯವನ್ನು ಹೇಳುತ್ತೇನೆ.

ರಾಮಂ ದೃಷ್ಟ್ವಾ ಮಹಾರಾಜಂ ಯಾದೃಶಂ ಧ್ಯಾನಗೋಚರಂ ।
ಅತ್ಯಂತಂ ಹರ್ಷಮಾಪನ್ನೋ ಜಗಾದ ಸ ಮುನೀಶ್ವರಾನ್ ॥ ೬೦ ॥

ಮುನೀಶ್ವರಾಃ ಶೃಣುತ ಭೋ ಮದ್ವಾಕ್ಯಂ ಸುಮನೋರಮಂ ।
ಮಾದೃಶಃ ಕೋ ನು ಭೂಲೋಕೇ ಭವಿಷ್ಯತಿ ಸುಭಾಗ್ಯವಾನ್ ॥ ೬೧ ॥

ನಾಸ್ತಿ ಮಮ ಸಮಃ ಕೋಽಪಿ ನ ಜಾತೋ ನ ಭವಿಷ್ಯತಿ ।
ಯದ್ರಾಮಭದ್ರೋ ನತ್ವಾ ಮಾಂ ಸ್ವಾಗತಂ ಪರಿಪೃಷ್ಟವಾನ್ ॥ ೬೨ ॥

ಯತ್ಪಾದಪಂಕಜರಜಃ ಶ್ರುತಿಮೃಗ್ಯಂ ಸದೈವ ಹಿ ।
ಸೋಽದ್ಯ ಮತ್ಪಾದಯೋಃ ಪಾಥಃ ಪೀತ್ವಾ ಪೂತಮಮನ್ಯತ ॥ ೬೩ ॥

ಏವಂ ಪ್ರವದತಸ್ತಸ್ಯ ಬ್ರಹ್ಮಸ್ಫೋಟೋಽಭವತ್ತದಾ ।
ನಿರ್ಗತಂ ತದ್ಭವತ್ತೇಜೋ ವಿವೇಶ ರಘುನಂದನೇ ॥ ೬೪ ॥

ಪಶ್ಯತಾಂ ಸರ್ವಲೋಕಾನಾಂ ಸರಯೂತೀರಮಂಡಪೇ ।
ಸಾಯುಜ್ಯಮುಕ್ತಿಂ ಸಂಪ್ರಾಪ ದುರ್ಲಭಾಂ ಯೋಗಿಭಿರ್ಜನೈಃ ॥ ೬೫ ॥

---

೬೦. ಧ್ಯಾನದಲ್ಲಿ ತನಗೆ ಕಾಣುತ್ತಿದ್ದಂತೆಯೇ ಇರುವ ರಾಮನನ್ನು ನೋಡಿ ಬಹು ಸಂತೋಷಪಟ್ಟು ಆ ಆರಣ್ಯಕನು ಆ ಋಷಿಗಳನ್ನು ಕುರಿತು ಇಂತೆಂದನು.

೬೧. ಎಲೈ! ಋಷಿಗಳಿರ, ಕೇಳಿರಿ, ನನ್ನಂತಹ ಭಾಗ್ಯವಂತನು ಲೋಕದಲ್ಲಿ ಯಾವನಿದ್ದಾನೆ?

೬೨. ರಾಮಭದ್ರನು ನನಗೆ ನಮಸ್ಕಾರಮಾಡಿ ಸ್ವಾಗತವನ್ನು ಕೇಳಿದುದರಿಂದ ನನ್ನ ಸಮನೊಬ್ಬನೂ ಇಲ್ಲ. ಹುಟ್ಟಿಯೂ ಇಲ್ಲ. ಹುಟ್ಟುವುದೂ ಇಲ್ಲ.

೬೩. ಯಾವನ ಪಾದಗಳು ಶ್ರುತಿಗಳಿಗೂ ಗೋಚರಿಸುವುದಿಲ್ಲವೋ ಆ ಸ್ವಾಮಿಯು ನನ್ನ ಪಾದೋದಕವನ್ನು ಕುಡಿದು ಕೃತಾರ್ಥನಾದೆನೆಂದು ತಿಳಿದನು.

೬೪. ಹೀಗೆ ಹೇಳುತ್ತಿರಲು ಅವನ ತಲೆಯು ಬ್ರಹ್ಮರಂಧ್ರದಲ್ಲಿ ಒಡೆಯಿತು. ಅದರಿಂದ ಬಂದ ತೇಜಸ್ಸು ಹೊರಟು ರಾಮನಲ್ಲಿ ಐಕ್ಯವಾಯಿತು.

೬೫. ಸರಯೂತೀರದ ಮಂಡಪದಲ್ಲಿ ಎಲ್ಲರೆದುರಿಗೂ ಯೋಗಿಗಳಿಗೂ ಹೊಂದಲಸಾಧ್ಯವಾದ ಸಾಯುಜ್ಯವನ್ನು ಆ ಆರಣ್ಯಕನು ಹೊಂದಿದನು.

ದಿವಿ ತೂರ್ಯನಿನಾದೋಽಭೂದ್ವೀಣಾನಾದೋಽಭವತ್ತದಾ ॥
ಪುಷ್ಪವೃಷ್ಟಿಃ ಪಪಾತಾಗ್ರೇ ಪಶ್ಯತಾಂ ಚಿತ್ರಮದ್ಭುತಂ ॥ ೬೬ ॥

ಮುನಯೋಽಪ್ಯೇತದೀಕ್ಷಿತ್ವಾ ಪ್ರಶಂಸಂತೋ ಮುನೀಶ್ವರಂ ।
ಕೃತಾರ್ಥೋಽಯಂ ಮುನಿಶ್ರೇಷ್ಠೋ ಯದ್ರಾಮವಪುಷೀಕ್ಷಿತಃ ॥ ೬೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶೇಷವಾತ್ಸ್ಯಾಯನ
ಸಂವಾದೇ ರಾಮಾಶ್ವಮೇಧೇ ಆರಣ್ಯಕಮುನೇಃ ಸಾಯುಜ್ಯಮುಕ್ತಿ
ಕಥನಂ ನಾಮ ಸಪ್ತತ್ರಿಂಶೋಽಧ್ಯಾಯಃ



---

೬೬. ಅಂತರಿಕ್ಷದಲ್ಲಿ ವಾದ್ಯದ ಧ್ವನಿಯೂ ವೀಣೆಯ ನಾದವೂ ಆದುವು. ಎಲ್ಲರೆದುರಿಗೂ ಪುಷ್ಪವೃಷ್ಟಿಯಾಯಿತು. ಆಶ್ಚರ್ಯವಾಗಿದ್ದಿತು.

೬೭. ಋಷಿಗಳೆಲ್ಲರೂ ಈ ಮುನಿಯು ಕೃತಾರ್ಥನು. ರಾಮನ ದೇಹದಲ್ಲೇ ಸೇರಿದನಲ್ಲ ಎಂದು ಹೊಗಳಿದರು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶೇಷವಾತ್ಸ್ಯಾಯನಸಂವಾದದಲ್ಲಿ,
ರಾಮಾಶ್ವಮೇಧದಲ್ಲಿ ಆರಣ್ಯಕಮುನಿಯ ಸಾಯುಜ್ಯಮುಕ್ತಿಕಥನವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.

